ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ



# ಷಟ್ಪದಿ ಸಾಹಿತ್ಯ

ಕೆ. ಮರುಳಸಿದ್ದಪ್ಪ



6



ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ : ಸಂಪುಟ ೮

# ಷಟ್ಪದಿ ಸಾಹಿತ್ಯ

---

ಕೆ. ಮರುಳಸಿದ್ದಪ್ಪ



ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

**Shatpadi Sahitya** by K. Marulasiddappa, Vol. 6 in the ten-volume series entitled "History of Kannada Literature for the Common Man". Published by the Bangalore University, Bangalore. Pp. 198 + viii. 1975

'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಮಾಲೆಯ ಯೋಜನೆ

ಸಂಪಾದಕರು

ಡಾ॥ ಜಿ. ಎಸ್. ಶಿವರುದ್ರಪ್ಪ

ಡಾ॥ ಎಂ. ಚಿದಾನಂದ ಮೂರ್ತಿ

ಸಂಚಾಲಕರು

ಕೆ. ಸಿ. ಶಿವಪ್ಪ

ನೆರವು

ಎ. ಶೋಭ





ಪ್ರಕಾಶಕರು :

ಕೆ. ಸಿ. ಶಿವಪ್ಪ

ಉಪ-ನಿರ್ದೇಶಕ

ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ

ಬೆಂಗಳೂರು ವಿಶ್ವವಿದ್ಯಾಲಯ

ಬೆಂಗಳೂರು 560056

ಮುದ್ರಣ :

ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ

ಬೆಂಗಳೂರು

ಬೆಲೆ : ರೂ. 4-00

## ಮುನ್ನುಡಿ

'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಬೆಂಗಳೂರು ವಿಶ್ವವಿದ್ಯಾಲಯವು ಸಿದ್ಧಪಡಿಸಿ ಪ್ರಕಟಿಸುತ್ತಿರುವ ಹತ್ತು ಕಿರು ಸಂಪುಟಗಳ ಒಂದು ಯೋಜನೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಪ್ರೌಢವರ್ಗದ ಓದುಗರಿಗಾಗಿ ರಚಿಸುವ ಹಲವಾರು ಪ್ರಯತ್ನಗಳು ನಡೆಯುತ್ತಿರುವ ಇಂದಿನ ಪರಿಸರದಲ್ಲಿ, ಸಾಹಿತ್ಯದ ಬಗೆಗೆ ತಕ್ಕಮಟ್ಟಿನ ಆಸಕ್ತಿಯನ್ನು ರೂಢಿಸಿಕೊಂಡ ವರ್ಗದ ಓದುಗರಿಗೆ ಕನ್ನಡ ಸಾಹಿತ್ಯದ ಇತಿಹಾಸವನ್ನು ಪರಿಚಯ ಮಾಡಿಕೊಡಬೇಕಾದದ್ದು ಅತ್ಯಗತ್ಯವಾದ ಕೆಲಸವಾಗಿದೆ. ವಿಶ್ವವಿದ್ಯಾಲಯ ಉನ್ನತಮಟ್ಟದ ಶಿಕ್ಷಣ ಕೇಂದ್ರವಾದರೂ, ಅದು ತನ್ನ ಸುತ್ತಣ ಜನಸಾಮಾನ್ಯಕ್ಕೂ, ಪರಿಣತರ ಸಹಕಾರದಿಂದ ತಿಳಿವನ್ನು ವಿಸ್ತರಿಸುವ ಮತ್ತು ಒಯ್ದು ಮುಟ್ಟಿಸುವ ಜವಾಬ್ದಾರಿಯಿಂದ ಬದ್ಧವಾಗಿದೆ. 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಅಂತಹ ಜವಾಬ್ದಾರಿಯಿಂದ ಪ್ರೇರಿತವಾದ ಹಲವಾರು ಕಾರ್ಯಗಳಲ್ಲಿ ಒಂದು.

'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ'ಯ ಈ ಯೋಜನೆಗೆ ಮುಖ್ಯ ಪ್ರೇರಕರಾದವರು ಜನ್ಮಭೂಮಿ ಪ್ರೆಸ್ ಟ್ರಸ್ಟ್‌ನ ಶ್ರೀ ಬಿ. ಎನ್. ಗುಪ್ತ ಅವರು. ಶ್ರೀ ಗುಪ್ತ ಅವರ ಬಹುಮುಖವಾದ ಕೊಡುಗೆಯನ್ನು ಕುರಿತು ನಾನು ಹೊಸದಾಗಿ ಪ್ರಶಂಸಿಸಬೇಕಾದ ಅಗತ್ಯವೇನೂ ಇಲ್ಲ. ಸಾಮಾನ್ಯ ಜನಕ್ಕೆ ಸರಳವಾದ ರೀತಿಯಲ್ಲಿ ಸಾಹಿತ್ಯ ಚರಿತ್ರೆಯನ್ನು ಹಲವಾರು ಕಿರು ಸಂಪುಟಗಳಲ್ಲಿ ಒದಗಿಸಬೇಕೆಂಬುದು ಅವರ ಬಹುದಿನದ ಅಪೇಕ್ಷೆ. ಅದನ್ನು ಅವರಿಗೆ ಮಾತು ಕೊಟ್ಟಂತೆ, ಒಂದು ವರ್ಷದ ಅವಧಿಯೊಳಗಾಗಿ ಪೂರೈಸಿಕೊಡಲು ಸಾಧ್ಯವಾದದ್ದು ನನಗೆ ತುಂಬ ಸಮಾಧಾನದ ಸಂಗತಿಯಾಗಿದೆ. ಈ ಯೋಜನೆಯ ಕನಸನ್ನು ನನಸನ್ನಾಗಿಸಲು ವಿಶ್ವವಿದ್ಯಾಲಯಕ್ಕೆ ನಿಧಿಯನ್ನು ಕೊಟ್ಟ ಶ್ರೀ ಬಿ. ಎನ್. ಗುಪ್ತ ಅವರಿಗೆ ನನ್ನ ಅನಂತ ವಂದನೆಗಳು.

ಹೀಗೆ ನಿಯಮಿತ ಅವಧಿಯೊಳಗಾಗಿ ಈ ಹತ್ತು ಕಿರು ಸಂಪುಟಗಳನ್ನು ವಿವಿಧ ಲೇಖಕರ ಸಹಕಾರದಿಂದ ಸಿದ್ಧಪಡಿಸಿಕೊಟ್ಟ ಸಂಪಾದಕರಾದ

ಡಾ॥ ಜಿ. ಎಸ್. ಶಿವರುದ್ರಪ್ಪ ಮತ್ತು ಡಾ॥ ಎಂ. ಚಿದಾನಂದ ಮೂರ್ತಿ ಅವರಿಗೆ, ಈ ಸಂಪುಟಗಳನ್ನು ಶ್ರಮವಹಿಸಿ ಬರೆದುಕೊಟ್ಟ ಲೇಖಕರಿಗೆ, ಅತ್ಯಲ್ಪ ಕಾಲದಲ್ಲಿ ಅಂದವಾಗಿ ಅಚ್ಚುಮಾಡಿ ಪ್ರಕಟಿಸಲು ಹಗಲಿರುಳೂ ಶ್ರಮಿಸಿದ ಪ್ರಕಟಣ ವಿಭಾಗದ ಉಪನಿರ್ದೇಶಕ ಶ್ರೀ ಕೆ. ಸಿ. ಶಿವಪ್ಪನವರಿಗೆ ಮತ್ತು ವಿಶ್ವವಿದ್ಯಾಲಯದ ಅಚ್ಚುಕೂಟದ ಸಿಬ್ಬಂದಿವರ್ಗಕ್ಕೆ ನನ್ನ ಹಾರ್ದಿಕವಾದ ಅಭಿನಂದನೆಗಳು.

ಈ ಹತ್ತು ಕಿರು ಸಂಪುಟಗಳು, ಸಾಹಿತ್ಯದ ಬಗ್ಗೆ ಅಭಿರುಚಿಯುಳ್ಳ ಸಾಮಾನ್ಯರಿಗೆ, ಕನ್ನಡ ಸಾಹಿತ್ಯದ ಪರಿಚಯವನ್ನು ಮಾಡಿಕೊಡುವುದರ ಜತೆಗೆ, ತಮ್ಮ ಸಾಹಿತ್ಯ ಪರಂಪರೆಯ ಬಗೆಗೆ ಎಚ್ಚರವನ್ನೂ, ಅಭಿಮಾನವನ್ನೂ ಪ್ರೇರೇಪಿಸಬಲ್ಲವೆಂದು ನಾನು ನಂಬಿದ್ದೇನೆ.

ಎಚ್. ನರಸಿಂಹಯ್ಯ
ಉಪಕುಲಪತಿ

ನವೆಂಬರ್ 26, 1975

## ಸಂಪಾದಕರ ಮಾತು

ಇದು ಸಾಹಿತ್ಯ ಚರಿತ್ರೆಗಳ ಸುಗ್ಗಿಯ ಕಾಲ; ಕನ್ನಡ ಸಾಹಿತ್ಯ ಸಂಪತ್ತನ್ನು ಅಳೆದು-ಸುರಿದು ಪರಿಚಯ ಮಾಡಿಕೊಡುವ ಕೆಲಸ ಎಂದಿಗಿಂತ ಮಿಗಿಲಾಗಿ ಇಂದು ನಡೆಯತೊಡಗಿದೆ. ಕರ್ನಾಟಕದ ಏಕೀಕರಣವಾದ ಮೇಲಂತೂ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯ ಪರಿಚಯವನ್ನು ಬಹುಮುಖವಾಗಿ ಮಾಡಿಕೊಡುವ ಪ್ರಯತ್ನಗಳು ರಭಸದಿಂದ ನಡೆಯುತ್ತಿರುವುದು ಅತ್ಯಂತ ಸಹಜವೂ, ಉಚಿತವೂ, ಅಗತ್ಯವೂ ಆಗಿದೆ. ಈ ಕಾರ್ಯ ಪರಂಪರೆಯಲ್ಲಿ, ಬೆಂಗಳೂರು ವಿಶ್ವವಿದ್ಯಾಲಯವು, ಜನ್ಮಭೂಮಿ ಪ್ರೆಸ್ ಟ್ರಸ್ಟ್‌ನ ಶ್ರೀ ಬಿ. ಎಸ್. ಗುಪ್ತ ಅವರ ಉದಾರವಾದ ಕೊಡುಗೆಯ ನೆರವಿನಿಂದ, ಹತ್ತು ಕಿರು ಸಂಪುಟಗಳಲ್ಲಿ ಸಿದ್ಧಪಡಿಸಿ ಪ್ರಕಟಿಸುತ್ತಿರುವ 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ'ಯ ಯೋಜನೆಯೂ ಒಂದು.

ಈ ಯೋಜನೆಯ ಹೆಸರೇ ಸೂಚಿಸುವಂತೆ, ಇದು ಸಾಮಾನ್ಯರಿಗಾಗಿ ಬರೆದ ಸಾಹಿತ್ಯ ಚರಿತ್ರೆ. ಸಾಹಿತ್ಯ ಚರಿತ್ರೆಯನ್ನು ಕುರಿತು ಇತ್ತೀಚೆಗೆ ಕರ್ನಾಟಕದಲ್ಲಿ ನಡೆಯುತ್ತಿರುವ ಕೆಲಸಗಳೆಲ್ಲ ಬಹುಮಟ್ಟಿಗೆ, ವಿದ್ವಾಂಸರನ್ನೋ, ಸಾಹಿತ್ಯವನ್ನು ವಿಶೇಷವಾದ ರೀತಿಯಲ್ಲಿ ಅಧ್ಯಯನ ಮಾಡುವವರನ್ನೋ ಉದ್ದೇಶಿಸಿದವುಗಳು. ಆದರೆ ಈ ಪ್ರೌಢ ಪರಿಮಿತ ವರ್ಗದ ಆಚೆ ಇರುವ, ಸಾಹಿತ್ಯಾಸಕ್ತರಾದ ಸಾಮಾನ್ಯರಿಗೆ, ಕನ್ನಡ ಸಾಹಿತ್ಯ ಚರಿತ್ರೆಯನ್ನು ಮುಟ್ಟಿಸುವ ಪ್ರಯತ್ನಗಳು ಅಷ್ಟಾಗಿ ನಡೆದಿಲ್ಲವೆಂದೇ ಹೇಳಬೇಕು. ಈ ದಿಕ್ಕಿನಲ್ಲಿ ಈಗ ಸಿದ್ಧವಾಗಿರುವ ಈ ಹತ್ತು ಕಿರು ಸಂಪುಟಗಳು ಮೊದಲ ಪ್ರಯತ್ನವೆನ್ನಬಹುದು.

ಒಂದು ಸಾವಿರ ವರ್ಷಕ್ಕೂ ಮೀರಿದ ಕನ್ನಡ ಸಾಹಿತ್ಯದ ಇತಿಹಾಸವನ್ನು ಸರಳವಾಗಿ, ನಿರ್ದುಷ್ಟವಾಗಿ ಮತ್ತು ಆಕರ್ಷಕವಾಗಿ ಸಾಮಾನ್ಯರಿಗೆ ಪರಿಚಯ ಮಾಡಿಕೊಡಬೇಕೆಂಬುದೇ ಈ ಸಂಪುಟಗಳ ಉದ್ದೇಶ. ಇಲ್ಲಿ 'ಸಾಮಾನ್ಯರು' ಎಂದರೆ, ವಿದ್ವಾಂಸರಲ್ಲದ, ಆದರೆ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯ ಬಗೆಗೆ ತಕ್ಕಮಟ್ಟಿಗೆ ಆಸಕ್ತಿ-ಅಭಿರುಚಿಯನ್ನುಳ್ಳ ಓದುಗರು ಎಂದು ಅರ್ಥ.

ಇಂಥವರಿಗೆ ವಿಸ್ತಾರವಾದ ಕನ್ನಡ ಸಾಹಿತ್ಯವನ್ನು ಪರಿಚಯ ಮಾಡಿಕೊಡ ಬೇಕಾದರೆ ಬರವಣಿಗೆ ಮುಖ್ಯವಾಗಿ ತಿಳಿಯಾಗಿರಬೇಕು ; ವಿದ್ವತ್‌ಪ್ರಿಯವಾದ ಚರ್ಚೆಗಳನ್ನು ಬದಿಗಿರಿಸಿ, ಮುಖ್ಯ ವಿಷಯಗಳ ಸಾರಾಂಶವನ್ನು ಕೊಡಬೇಕು; ನಿರೂಪಣೆ ವರ್ಣನಾತ್ಮಕವೂ ಕಥನಾತ್ಮಕವೂ ಆಗಿರಬೇಕು ; ಪ್ರಾತಿನಿಧಿಕವಾದ ಪ್ರಮುಖ ಕವಿಗಳನ್ನು ಕೇಂದ್ರದಲ್ಲಿರಿಸಿಕೊಂಡು ಅವರಿಗೆ ಹಿನ್ನೆಲೆಯಾದ ಯುಗಧರ್ಮದಲ್ಲಿ ಅಂದಂದಿನ ಸಾಹಿತ್ಯಕ್ಕೆ ಒದಗಿದ ಪ್ರೇರಣೆಗಳನ್ನೂ, ಅಂದಂದಿನ ಸಾಹಿತ್ಯಕ ಸಾಧನೆಗಳನ್ನೂ ಪರಿಚಯ ಮಾಡಿಕೊಡುವಂತಿರಬೇಕು ; ಬರವಣಿಗೆ ಪರಿಚಯಾತ್ಮಕವಾಗಿರಬೇಕು ಎಂದರೆ, ಅದು ತಕ್ಕಮಟ್ಟಿನ ವಿಮರ್ಶನ ಪ್ರಯತ್ನಗಳಿಂದಾಗಲಿ, ಮೌಲ್ಯಮಾಪನ ದೃಷ್ಟಿಯಿಂದಾಗಲಿ ಹೊರತಾಗಿರಬೇಕೆಂದು ಅರ್ಥವಲ್ಲ ; ಬರವಣಿಗೆ ಸರಳವಾಗಿರಬೇಕು ಎಂದರೆ ವಿಷಯವನ್ನು ತೀರಾ ಸರಳಗೊಳಿಸಬೇಕೆಂದಲ್ಲ, ಹೇಳುವ ಭಾಷೆ ಸರಳವಾಗಿರ ಬೇಕು. ಒಟ್ಟಿನಲ್ಲಿ ಓದುಗರಿಗೆ ಸಮಗ್ರ ಕನ್ನಡ ಸಾಹಿತ್ಯದ ತಕ್ಕಮಟ್ಟಿನ ಪರಿಚಯವಾಗುವುದರ ಜತೆಗೆ, ಕನ್ನಡ ಕವಿ-ಕೃತಿಗಳನ್ನು ಮೂಲದಲ್ಲಿಯೇ ಓದಬೇಕೆನ್ನುವ ಒಂದು ರುಚಿಯನ್ನು ಹುಟ್ಟಿಸುವಂತಿರಬೇಕು. ಈ ಕೆಲವು ಉದ್ದೇಶಗಳನ್ನು ಈ ಸಂಪುಟಗಳ ರಚನೆಯ ಹಿನ್ನೆಲೆಗೆ ಇರಿಸಿಕೊಳ್ಳಲಾಗಿದೆ. ಈ ಉದ್ದೇಶ ಎಷ್ಟರಮಟ್ಟಿಗೆ ಸಫಲವಾಗಿದೆ ಎನ್ನುವುದನ್ನು ಓದುಗರೇ ಹೇಳಬೇಕು.

ಈ ಹತ್ತು ಸಂಪುಟಗಳ ವಿಶೇಷವೆಂದರೆ, ಇಡೀ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಚಂಪೂ, ಶಾಸ್ತ್ರ ಸಾಹಿತ್ಯ, ವಚನ, ಷಟ್ಪದಿ ಹೀಗೆ ಪ್ರಮುಖ ವಾದ ಸಾಹಿತ್ಯ ರೂಪಗಳನ್ನು ಮೂಲಮಾನವನ್ನಾಗಿ ಮಾಡಿಕೊಂಡು ಬರೆದದ್ದು ಇದೇ ಮೊದಲು. ಮತ್ತು ಈ ಬರವಣಿಗೆ ಸಾಧ್ಯವಾದಮಟ್ಟಿಗೆ ಇದುವರೆಗೂ ಉಪಲಬ್ಧವಾದ ಸಾಮಗ್ರಿಯನ್ನು ಬಳಸಿಕೊಳ್ಳುವುದಲ್ಲದೆ, ಕೆಲವು ಸಂಪುಟಗಳಲ್ಲಿ ಹೊಸ ದೃಷ್ಟಿಕೋನವನ್ನೂ ಪ್ರತಿಪಾದಿಸುವಂತೆ ರಚಿತ ವಾಗಿದೆ. ಈ ಹತ್ತು ಕಿರು ಸಂಪುಟಗಳನ್ನು ಓದಿದ ಯಾರಿಗಾದರೂ, ಕನ್ನಡ ಸಾಹಿತ್ಯದ ಸಾಧನೆಯ ಪರಿಚಯ ತಕ್ಕಮಟ್ಟಿಗೆ ಆಗುವುದೆಂಬುದರಲ್ಲಿ ಅನುಮಾನವಿಲ್ಲ.

ಈ ಯೋಜನೆಯಲ್ಲಿ ವಿಶ್ವಾಸದಿಂದ ಸಹಕರಿಸಿದ ಎಲ್ಲರಿಗೂ ನಮ್ಮ ಅನಂತ ವಂದನೆಗಳು.

**ಸಂಪಾದಕರು**

## ಪರಿವಿಡಿ

**ಸೂಚನೆ**

ಈ ಸಂಪುಟಗಳ ಒಬ್ಬೊಬ್ಬ ಲೇಖಕರೂ, ತಾವು ವಿವೇಚಿಸುವ ಸಾಹಿತ್ಯ ಪ್ರಕಾರದಲ್ಲಿ ರಚಿತವಾದ ಒಟ್ಟು ಕೃತಿಗಳ ಸಂಖ್ಯೆಯ ಬಗ್ಗೆ ಕೊಡುವ ಅಂಕಿ-ಅಂಶಗಳಲ್ಲಿ ವ್ಯತ್ಯಾಸಗಳಿರುವ ಸಂಭವವಿದೆ. ಆದುದರಿಂದ ಮೊದಲ ಸಂಪುಟದ ಅನುಬಂಧವಾಗಿ, ಶ್ರೀ ಎಸ್. ಶಿವಣ್ಣ ಅವರು ಸಿದ್ಧಪಡಿಸಿರುವ 'ಗ್ರಂಥ ಸಂಖ್ಯಾ ವಿವರ ಸೂಚಿ'ಯು, ಈ ಎಲ್ಲ ವ್ಯತ್ಯಾಸಗಳಿಗೆ ಒಂದು ತಿದ್ದುಪಡಿಯೂ ಮತ್ತು ಸದ್ಯಕ್ಕೆ ಅಧಿಕೃತವೂ ಆದದ್ದಾಗಿದೆ. ಓದುಗರು ದಯಮಾಡಿ ಅದನ್ನು ಗಮನಿಸಬೇಕು.

## ಪ್ರವೇಶ

ಆಧುನಿಕ ನಾಗರಿಕತೆ ನಮ್ಮ ಹಳ್ಳಿಗಳನ್ನು ಪ್ರವೇಶಿಸದೆ ಇದ್ದ ಕಾಲವೊಂದಿತ್ತು. ಈಗಿನ 'ಸಮುದಾಯ ರೇಡಿಯೋ'ಗಳು ಅಥವಾ ಟೆಂಟ್ ಸಿನಿಮಾಗಳು ಹಳ್ಳಿಯ ಜನಗಳನ್ನು ಇನ್ನೂ ಮುಟ್ಟಿರಲಿಲ್ಲ. ಪಟ್ಟಣದಿಂದ ಹಳ್ಳಿಗೆ ಬಂಡಿ ದಾರಿಗಳು ಮಾತ್ರ ಇದ್ದವು. ಮೋಟರು, ಬಸ್ಸು ಮತ್ತು ಲಾರಿಗಳನ್ನು ಜನ ನೋಡಿರಲಿಲ್ಲ. ಅಷ್ಟೇಕೆ, ವಿದ್ಯುತ್‌ದೀಪ ಇನ್ನೂ ಹಳ್ಳಿಗೆ ಬಂದಿರದ ಕಾಲವದು. ಗರತಿಯ ಹಾಡುಗಳನ್ನು ಮುಕ್ಕಿ ಬಿಕ್ಕಿದ ದರಿದ್ರ ಹಿಟ್ಟಿನ ಗಿರಣಿಗಳಂತೂ ಇರಲೇ ಇಲ್ಲ.

ಅಂದಿನ ಜನಗಳ ಬದುಕು ಪ್ರಶಾಂತವಾಗಿತ್ತು. ಸಂಜೆಯಲ್ಲಿ ಬೆಳುದಿಂಗಳ ರಾತ್ರಿಯಲ್ಲಿ ಕೋಲಾಟ, ವೀರಗಾಸೆ, ಬಯಲಾಟ, ಭಜನೆ ಮುಂತಾದವುಗಳಲ್ಲಿ ತೊಡಗಿ ವೇಳೆಯನ್ನು ಕಳೆಯುತ್ತಿದ್ದರು. ಸ್ವಲ್ಪ ವಿದ್ಯಾವಂತರಾದವರು, ಮಧ್ಯ ವಯಸ್ಸಿನವರು ಮತ್ತು ಹಿರಿಯರು ಸಂಜೆಯಾದಕೂಡಲೆ ಊರಿನ ಮಠದ ಐಯ್ಯನವರ ಕಟ್ಟೆಯ ಮೇಲೆ, ದೇವಸ್ಥಾನದ ಪ್ರಾಂಗಣದಲ್ಲಿ ಅಥವಾ ಚಾವಡಿಯಲ್ಲಿ ಕುಳಿತು ಪುರಾಣ ಪ್ರವಚನಗಳನ್ನು ಕೇಳುತ್ತಿದ್ದರು. ಕನ್ನಡದ ಪ್ರಸಿದ್ಧ ಷಟ್ಪದಿ ಕಾವ್ಯಗಳಾದ ಹರಿಶ್ಚಂದ್ರ ಕಾವ್ಯ, ಗದುಗಿನ ಭಾರತ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ಜೈಮಿನಿ ಭಾರತ, ಬಸವ ಪುರಾಣ, ಚೆನ್ನಬಸವ ಪುರಾಣ, ನಳಚರಿತ್ರೆಗಳನ್ನು ರಾಗವಾಗಿ ಓದಿ ವ್ಯಾಖ್ಯಾನಿಸುತ್ತಿದ್ದ ಚತುರ ಪ್ರವಚನಕಾರರನ್ನು ವಯಸ್ಸಾದವರು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಪಂಪ, ರನ್ನ, ನಾಗಚಂದ್ರರಂಥ ಪಂಡಿತಮಾನ್ಯ ಕವಿಗಳ ಹೆಸರನ್ನು ಕೇಳದ ಹಳ್ಳಿಗರು ಸಾಕಷ್ಟಿದ್ದಾರೆ. ಆದರೆ ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶರ ಹೆಸರು ಕೇಳದವರು ವಿರಳ. ಕನ್ನಡ ನಾಡಿನಲ್ಲಿ ಪಂಡಿತರು, ಚಕ್ರವರ್ತಿಗಳು ಮತ್ತು ವಿದ್ಯಾವಂತ ನಾಗರಿಕರಿಂದ ಮನ್ನಣೆ ಪುರಸ್ಕಾರಗಳನ್ನು ಹೊಂದಿದ ಶ್ರೇಷ್ಠ ಕವಿಗಳಿದ್ದರು. ಆದರೆ

ಬಹುಪಾಲು ಷಟ್ಪದಿಕಾರರು ಯಾವ ರಾಜಾಶ್ರಯದಲ್ಲಿಯೂ ಇದ್ದವರಲ್ಲ. ಜನತೆಗಾಗಿ ಅವರು ಕಾವ್ಯ ಬರೆದರು. ಜನತೆಯೇ ಅವರನ್ನು ಮೆಚ್ಚಿ ಪುರಸ್ಕರಿಸಿತು.

ನಮ್ಮ ಹಳಗನ್ನಡ ಸಾಹಿತ್ಯದಲ್ಲಿ ಸ್ಪಷ್ಟವಾಗಿ ಮೂರು ಕಾವ್ಯ ಸಂಪ್ರದಾಯಗಳನ್ನು ಗುರುತಿಸಬಹುದಾಗಿದೆ. ವಿದ್ವತ್ ಸಂಪ್ರದಾಯ, ದೇಸಿ ಸಂಪ್ರದಾಯ ಮತ್ತು ವಾಕ್ ಸಂಪ್ರದಾಯ ಎಂದು ಅವುಗಳನ್ನು ಹೆಸರಿಸಬಹುದು. ಮೊದಲನೆಯದು ಸಂಸ್ಕೃತದಿಂದ ಕನ್ನಡಕ್ಕೆ ಬಂದ ಛಂದಸ್ಸನ್ನು ಆಶ್ರಯಿಸಿ ಬೆಳೆಯಿತು. ಚಂಪೂ ಕಾವ್ಯಗಳು ಈ ಸಂಪ್ರದಾಯವನ್ನು ಪ್ರತಿನಿಧಿಸುತ್ತವೆ. ಕನ್ನಡದಲ್ಲಿಯೇ ಹುಟ್ಟಿ ಬೆಳೆದ ದೇಸಿ ಛಂದಸ್ಸನ್ನು ಆಶ್ರಯಿಸಿ ವಿಕಾಸಹೊಂದಿದ ಸಂಪ್ರದಾಯ ಎರಡನೆಯದು. ಈ ಸಂಪ್ರದಾಯಕ್ಕೆ ಸೇರಿದ ತ್ರಿಪದಿ, ಅಕ್ಕರ, ರಗಳೆ, ಷಟ್ಪದಿ, ಸಾಂಗತ್ಯಗಳು ದ್ರಾವಿಡ ಭಾಷೆಗಳಿಗೆ ಸಹಜವಾದ ಕನ್ನಡ ಪದ್ಯರೂಪಗಳು. ಈ ಸಂಪ್ರದಾಯಕ್ಕೆ ಶಿವಶರಣರ ವಚನಗಳನ್ನೂ ಹರಿದಾಸರ ಕೀರ್ತನೆಗಳನ್ನೂ ಸೇರಿಸಬಹುದು. ಮೂರನೆಯದಾದ ವಾಕ್ ಸಂಪ್ರದಾಯ ಜಾನಪದೀಯವಾದುದು. ದೇಸಿ ಸಂಪ್ರದಾಯಕ್ಕೆ ಸೇರಿದ ಷಟ್ಪದಿಯು ಹುಟ್ಟಿದ್ದು ಕನ್ನಡ ನಾಡಿನ ಸಾಮಾನ್ಯ ಜನತೆಯ ಅಗತ್ಯ ಮತ್ತು ಹಾರೈಕೆಯಿಂದ. ಬೆಳೆದದ್ದು ಕವಿಗಳು, ಗಮಕಿಗಳು ಮತ್ತು ಪ್ರವಚನಕಾರರಿಂದ. ಮಠ, ಚಾವಡಿ, ದೇವಸ್ಥಾನ ಮತ್ತು ಅರಳಿಕಟ್ಟೆಗಳೇ ಅದರ ಆಶ್ರಯ ಸ್ಥಾನಗಳು.

## 2

ಷಟ್ಪದಿಯ ಲಕ್ಷಣವನ್ನು ಸರಳವಾಗಿ ಹೀಗೆ ಹೇಳಬಹುದು : ಹೆಸರೇ ಸೂಚಿಸುವಂತೆ ಷಟ್ಪದಿ ಆರು ಸಾಲುಗಳ ಒಂದು ಪದ್ಯರೂಪ. ಮೊದಲ ಮೂರು ಸಾಲುಗಳು ಉಳಿದ ಮೂರು ಸಾಲುಗಳಿಗೆ ಸಮನಾಗಿರುತ್ತವೆ. ಒಂದು, ಎರಡು, ನಾಲ್ಕು ಮತ್ತು ಐದನೆಯವು ಚಿಕ್ಕ ಸಾಲುಗಳು ; ಇವುಗಳು ಪರಸ್ಪರ ಸಮನಾಗಿರುತ್ತವೆ. ಮೂರು ಮತ್ತು ಆರನೆಯ ಸಾಲುಗಳು ದೊಡ್ಡ ಸಾಲುಗಳು ; ಇವೂ ಪರಸ್ಪರ ಸಮನಾಗಿರುತ್ತವೆ. ಮೂರು ಮತ್ತು ಆರನೆಯ ಸಾಲುಗಳು ಮಿಕ್ಕ ಸಾಲುಗಳ ಒಂದೂವರೆ ಮತ್ತು ಒಂದುಗುರು ಹೆಚ್ಚಿರುತ್ತವೆ. ಆದಿಪ್ರಾಸ ಅನುಪ್ರಾಸಗಳನ್ನು ಷಟ್ಪದಿಯಲ್ಲಿ ಸಾಮಾನ್ಯವಾಗಿ

ಕಾಣಬಹುದು. ಹಾಡಲು ಬರುವಂತಹುದಾದುದರಿಂದ ಷಟ್ಪದಿ ಹೆಚ್ಚು ಜನಪ್ರಿಯಹೊಂದಿದೆ. ಕಥನಕ್ಕೆ ಇದು ವಿಶೇಷವಾಗಿ ಹೊಂದಿಕೊಳ್ಳುತ್ತದೆ.

"ಇಡೀ ಕನ್ನಡ ಸಾಹಿತ್ಯದಲ್ಲಿ ಹಿಂದೆ ರಚಿತವಾದ ಪದ್ಯಗಳ ಸಾಲುಗಳನ್ನು ಎಣಿಸುವುದಾದರೆ ಮಾರ್ಗ ಕಾವ್ಯದಲ್ಲಿ ಕಂದ ಮತ್ತು ದೇಸಿಗಬ್ಬದಲ್ಲಿ ಷಟ್ಪದಿ ಇವುಗಳಿಗೆ ಪ್ರಥಮ ಸ್ಥಾನ ದೊರೆಯುಬಹುದು. ಕಂದ ಮತ್ತು ಷಟ್ಪದಿ ಎರಡರ ಸೆಣಸಾಟ ನಡೆದರೆ ಅದರಲ್ಲಿ ಷಟ್ಪದಿಯೇ ಗೆಲ್ಲಬಹುದು." ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹದಿನೈದನೆ ಶತಮಾನದಿಂದ ಹದಿನೆಂಟನೇ ಶತಮಾನದವರೆಗಿನ ಕಾಲವನ್ನು 'ಷಟ್ಪದಿ ಯುಗ'ವೆಂದು ಕರೆಯುವ ವಾಡಿಕೆಯಿದೆ. ಆ ಕಾಲದಲ್ಲಿ ಬಹು ಸಂಖ್ಯೆಯ ಷಟ್ಪದಿ ಕಾವ್ಯಗಳು ಹುಟ್ಟಿಕೊಂಡಿವೆ. ಒಟ್ಟು ನಾಲ್ಕುನೂರಾ ಎಂಬತ್ತೆಂಟು ಕವಿಗಳು ಐದುನೂರಾ ಎಂಬತ್ತೆರಡು ಕಾವ್ಯಗಳನ್ನು ಷಟ್ಪದಿಯಲ್ಲಿ ಬರೆದಿದ್ದಾರೆಂದು ಒಂದು ಅಂದಾಜಿದೆ.[2]

ನಾಗವರ್ಮನ ಛಂದೋಂಬುಧಿಯಲ್ಲಿ ಮೊಟ್ಟಮೊದಲ ಬಾರಿಗೆ ಷಟ್ಪದಿಯ ಉಲ್ಲೇಖ ಕಂಡುಬರುತ್ತದೆ. ಆತನ ಕಾಲ ಸುಮಾರು ಕ್ರಿ.ಶ. 990. ಮೂಲದಲ್ಲಿ ಷಟ್ಪದಿ ಒಂದೇ ಆಗಿತ್ತೆಂದೂ ಬಳಿಕ ಆರು ವಿಧವಾಗಿ ರೂಪು ಪಡೆಯಿತೆಂದೂ ವಿದ್ವಾಂಸರು ಹೇಳುತ್ತಾರೆ. ಶರ, ಕುಸುಮ ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂಬ ಆರು ವಿಧಗಳು ಈಗ ಪ್ರಚಾರದಲ್ಲಿವೆ. ಇನ್ನೂ ಹೆಚ್ಚಿಗೆ ಷಟ್ಪದಿಗಳಿವೆಯೆಂಬ ವಾದವಿದೆ. ರಾಘವಾಂಕನು ಉದ್ದಂಡ ಷಟ್ಪದಿಯಲ್ಲಿ ಒಂದು ಕಾವ್ಯವನ್ನೇ ಬರೆದಿದ್ದಾನೆ. "ಷಟ್ಪದಿಗಳ ಸಂಖ್ಯೆ ಎಷ್ಟೇ ಇರಲಿ. ಕನ್ನಡ ಕವಿಗಳ ಕಾವ್ಯ ಪ್ರತಿಭೆಯನ್ನು ಕನ್ನಡಿಸುತ್ತ ಬಂದ ಷಟ್ಪದಿಗಳು ಎರಡು ; ಒಂದು ವಾರ್ಧಕ ; ಇನ್ನೊಂದು ಭಾಮಿನಿ. ಕನ್ನಡ ಸಾಹಿತ್ಯದಲ್ಲಿ ಇವೆರಡೂ ಷಟ್ಪದಿಗಳ ಪರಂಪರೆ ದೀರ್ಘವಾದುದೂ ಅಹುದು ; ಘನವಾದುದೂ ಅಹುದು. ಅವುಗಳ ಈ ಪರಂಪರೆಗೆ ಅವುಗಳ ಯೋಗ್ಯತೆಯೇ ಕಾರಣ".[3] ಈ ವಿಚಾರವಾದ ಹೆಚ್ಚಿನ ವಾದವಿವಾದಗಳು ಇಲ್ಲಿ ಅನಗತ್ಯವಾದುದರಿಂದ ಪ್ರಚಾರದಲ್ಲಿರುವ ಆರು ಷಟ್ಪದಿಗಳಾದ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕಗಳು ಕ್ರಮವಾಗಿ ಒಂದಕ್ಕಿಂತ ಮತ್ತೊಂದು ದೊಡ್ಡ ಷಟ್ಪದಿಗಳು ಎಂಬುದನ್ನಿಷ್ಟು ಮನಗಂಡರೆ ಸಾಕು. ತಲಾ ಒಂದೊಂದು ಪದ್ಯದ ಉದಾಹರಣೆ ಕೊಟ್ಟು ಮುಂದುವರಿಯಬಹುದಾಗಿದೆ :

### ಶರ ಷಟ್ಪದಿ

ಈಶನ ಕರುಣೆಯ
ನಾಶಿಸು ವಿನಯದಿ
ದಾಸನ ಹಾಗೆಯೆ ನೀ ಮನವೆ ॥
ಕ್ಲೇಶದ ವಿಧ ವಿಧ
ಪಾಶವ ಹರಿದು ವಿ
ಲಾಸದಿ ಸತ್ಯವ ತಿಳಿ ಮನವೆ ॥

—ಪದ್ಯಸಾರ

### ಕುಸುಮ ಷಟ್ಪದಿ

ಬಿಸಿಲಿಗಂ ಗಾಳಿಗಂ
ನಸುಬಾಡೆ ತನುಲತಿಕೆ
ಕುಸುಮ ಕೋಮಳೆ ಹೊಸೆದ ಹೂವಿನಂತೆ ॥
ಕುಸುಮಶರನೊಡನೆ ರತಿ
ಯೊಸೆದು ಬರ್ಪಂತೆ ರಂ
ಜಿಸಿ ರಾಮನೊಡನೆ ಜಾನಕಿ ನಡೆದಳು ॥

—ಕುಮುದೇಂದು ರಾಮಾಯಣ

### ಭೋಗ ಷಟ್ಪದಿ

ಮೆರೆಯುತಿದ್ದ ಭಾಗ್ಯವೆಲ್ಲ
ಹರಿದು ಹೋಯಿತೆನುತ ತಿರುಕ
ಮರಳಿ ನಾಚಿ ಪೋಗುತಿದ್ದ ಮರುಳನಂತೆಯೇ ॥
ಧರೆಯ ಭೋಗವನ್ನು ಮೆಚ್ಚಿ
ಪರವ ಮರೆತು ಕೆಡಲು ಬೇಡ
ಧರೆಯ ಭೋಗ ಕನಸಿನಂತೆ ಕೇಳು ಮಾನವಾ ॥

—ಮುಪ್ಪಿನ ಷಡಕ್ಷರಿಯ ವಚನ

### ಭಾಮಿನೀ ಷಟ್ಪದಿ

ಬೆದರು ಗಂಗಳ ಬಿಟ್ಟ ಮಂಡೆಯ
ಹುದಿದ ಹಾಹಾರವದ ತೊಡಕಿದ
ಪದಯುಗದ ಮೇಲುದಿನ ಬೀದಿಯ ಧೂಳಿ ಧೂಸರದ ॥

ವದನ ಕಮಲದ ಖಿಳನ ವಾಮಾಂ
ಗದಲಿ ಬಾಗಿದ ತನುಲತೆಯ ವರ
ಸುದತಿ ಬಂದಳು ರಾಜಸಭೆಗೆ ನೃಪಾಲ ಕೇಳೆಂದ

—ಗದುಗಿನ ಭಾರತ

ಪರಿವರ್ಧಿನೀ ಷಟ್ಪದಿ

ದುರಿತವನಂ ಬೆಳೆವುದೆ ಪೊಲಂ ಕೊಲೆ
ಪರ ಕಲಿಸಿದ ನವದೋಹಳಮನೃತಂ
ಪರಿಕಾಲುದ ಕಮದಕೆ ಕಳವನ್ಯ ಸ್ತ್ರೀ ಸಂಗಮ ಗೆಯ್ಮೆ ॥
ಪರಿರಕ್ಷಣೆಯತಿಕಾಂಕ್ಷೆ ಯದರಿನವು
ಸಿರುತಂ ಪೊರ್ದದೊಡಿಲ್ಲಂ ಸಂಸೃತಿ
ಯುರು ಕಿಲ್ಬಿಷಮೆಲ್ಲಿಯದು ವಿಚಾರಿಸೆ ಭವ್ಯ ಜನೋತ್ತಂಸಾ ॥

—ಜಯನೃಪ ಕಾವ್ಯ

ವಾರ್ಧಕ ಷಟ್ಪದಿ

ತಿಳಿಗೊಳನ ಬಳಸಿ ನಳನಳಿಸಿ ಬೆಳೆದೆಳಮಾವು
ಗಳತಳದ ಮಲ್ಲಿಕಾ ಮಂಟಪದ ತಣ್ಣೆಳಲ
ತೆಳುಗಾಳಿಯೊಳು ಪುಣ್ಯವಪ್ಪ ಪುಳಿನ ಸ್ಥಳದ ಮೇಲಶೋಕೆಯ ತರುವಿನ ॥
ತಳಿರ ತೋಂಗಲ ಗದ್ದುಗೆಯೊಳೋಲಗಂಗೊಟ್ಟು
ಬಳಸಿ ಹಿಂದೆಡಬಲದೊಳಿಪ್ಪ ಮುನಿಗಳ ಕೂಡೆ
ನಲವಿನಿಂ ನುಡಿವ ಪಶುಪತಿಯಂತಿರ್ದ ಮುನಿನಾಥ ಕಣ್ಗೆಸೆದಿರ್ದನು ॥

—ಹರಿಶ್ಚಂದ್ರ ಕಾವ್ಯ

ರಾಘವಾಂಕನು ಮಾತ್ರ ಬಳಸಿರುವ ಉದ್ದಂಡ ಷಟ್ಪದಿ

ಪರಿಣಾಮದ ಕಣೆ ಶಾಂತಿಯ ನಿಧಿ ಭಕ್ತಿಯ ಸಾ
ಗರ ಮೇಕೋನಿಷ್ಠೆಯ ಹರವರಿ ಸಾಮರ್ಥ್ಯದ
ತರು ನೀತಿಯ ಕಡಲು ದಯಾಗಾರಂ ಪುಣ್ಯದಪುಂಜಂ ಸತ್ಯದ ಸದನ ॥
ಹರುಷದ ಮಡು ಸರ್ವಜ್ಞತ್ವದ ಶಾಸನ ಸು
ಸ್ಥಿರವಾಸ್ಥಲ ಯುಕ್ತಂ ಹಂಪೆಯ ಹರಿಹರ ದೇ
ವರ ಕಾರುಣ್ಯದ ಸುಪ್ರಭೆ ಬೆಳಗುಗೆ ಬಿಡದೆಮ್ಮ ಮನೋಮಂದಿರಕಿಂದುಂ ॥

—ವೀರೇಶ ಚರಿತೆ

## 3

ನಾಗವರ್ಮನ ಛಂದೋಂಬುಧಿಯಲ್ಲಿ ಷಟ್ಪದಿಯ ಮೊದಲ ಉಲ್ಲೇಖ ವಿದೆ. ಆತನ ಕಾಲ ಕ್ರಿ.ಶ. 990. ತೆಲುಗು ಮತ್ತು ಸಂಸ್ಕೃತದ ಕೆಲವು ಪ್ರಾಚೀನ ಛಂದೋಗ್ರಂಥಗಳಲ್ಲಿಯೂ ಷಟ್ಪದಿಯ ಲಕ್ಷಣವನ್ನು ಹೇಳಿದ್ದಾರೆ. "ಈ ಷಟ್ಪದಿಗೆ ಉದಾಹರಣೆಯಾಗಿ ಸಿಕ್ಕುವ ಚಂದ್ರರಾಜ (1030)ನ 'ಮದನ ತಿಲಕ'ದಲ್ಲಿ ಮೂರು, ಶಾಂತಿನಾಥನ (1068) 'ಸುಕುಮಾರ ಚರಿತೆ'ಯಲ್ಲಿ ಒಂದು, ಸೋಮೇಶ್ವರ (1129)ನ (ಸಂಸ್ಕೃತ) 'ಮಾನಸೋಲ್ಲಾಸ'ದಲ್ಲಿ ಒಂದು – ಹೀಗೆ ಗ್ರಂಥಗಳಲ್ಲಿ ಐದು ; ಅಮ್ಮಿನಭಾವಿ ಶಾಸನ (1171)ದಲ್ಲಿ ಒಂದು, ಭೀಮಸಮುದ್ರ ಶಾಸನ (1067)ದಲ್ಲಿ ಒಂದು, ಜಡಚಣ ಶಾಸನ (1067)ದಲ್ಲಿ ಮೂರು, ಗಂಗಾಪುರ ಶಾಸನ (1100-1140)ದಲ್ಲಿ ಒಂದು—ಹೀಗೆ ಶಾಸನಗಳಲ್ಲಿ ಆರು, ಒಟ್ಟು ಹನ್ನೊಂದು ಬಿಡಿ ಪದ್ಯಗಳೇ ಹೊರತು ಇಡಿ ಕಾವ್ಯಗಳಲ್ಲ."[4] "'ಮಾತ್ರಾ ಸಮಕ ಷಟ್ಪದಿ' ಎಂಬ ಹೆಸರಿನಲ್ಲಿ ರನ್ನ ಕವಿಯ ಗದಾಯುದ್ಧದಲ್ಲಿ ಒಂದು ಪದ್ಯ ದೊರೆಯುತ್ತದೆ. ಆ ಪದ್ಯ ವಿಲಕ್ಷಣವಾಗಿದೆ. ಅಪಪಾತಗಳೂ ಅದರಲ್ಲಿ ಸೇರಿವೆ."[5]

ನಾಗವರ್ಮ ಜಯಕೀರ್ತಿಯರು ಹೇಳಿದ ಷಟ್ಪದಿಯನ್ನು ಮೂಲ ಷಟ್ಪದಿಯೆಂದೂ ಅದು ಅಂಶಗಣಾನ್ವಯವಾದುವೆಂದೂ ವಿದ್ವಾಂಸರು ನಿರ್ಧರಿಸಿದ್ದಾರೆ. ವಿಷ್ಣುಗಣ ಪ್ರಧಾನವಾದ ಮೂಲ ಷಟ್ಪದಿಯ ನಾಡಿಯ ಮೇಲೆ ಆಡಿದ ಮಾತ್ರಾಗಣದ ಪ್ರಭಾವದಿಂದಾಗಿ ಅದು ಶರ ಮತ್ತು ಕುಸುಮ ಎಂದು ಎರಡು ವಿಧವಾಯಿತೆಂದೂ, ಒಮ್ಮೆ ಶರ ಕುಸುಮಗಳು ರೂಪುಗೊಂಡ ಬಳಿಕ ಅವುಗಳ ಬಳಿವಿಡಿದು ಮಂದಾನಿಲ ರಗಳೆಯ ಮಾರ್ಗವಾಗಿ ಪರಿವರ್ಧಿನಿಯೂ ಲಲಿತ ರಗಳೆಯ ಮಾರ್ಗವಾಗಿ ವಾರ್ಧಕವೂ ರೂಪುಗೊಂಡವಂತೆ. ಉತ್ಸಾಹ ಲಯದ ಜಾಡು ಹಿಡಿದು ಷಟ್ಪದಿಯ ಸಾಮಾನ್ಯ ಯೋಜನೆಯನ್ನನುಸರಿಸಿ ಭೋಗ, ಭಾಮಿನಿಗಳು ಮೈವೆತ್ತವಂತೆ.[6] "ಸು. 1140-50 ರಿಂದ ಈಚೆಗೆ ಅಂಶಗಣ ಘಟಿತ ಷಟ್ಪದವು ಮಾತ್ರಾ ಗಣ ಘಟಿತ ಷಟ್ಪದಿಗಳಾಗಿ ವಿಕಾಸಗೊಳ್ಳಲು ಆರಂಭವಾಯಿತೆಂದು ಕಾಣುತ್ತದೆ".[7] ಹನ್ನೆರಡನೆಯ ಶತಮಾನದ ವಚನಕಾರ ಸಿದ್ಧರಾಮ (1150)ನ ಬಸವಸ್ತೋತ್ರದ ತ್ರಿವಿಧಿಯಲ್ಲಿ ಇರುವ ಛಂದಸ್ಸು ಹೇಗೆ ಮಾತ್ರಾನಿಯತವಾದ ಕುಸುಮ ಷಟ್ಪದಿಗೆ ಹೊಂದಿಕೊಳ್ಳುತ್ತದೆಯೆಂಬುದನ್ನು ವಿದ್ವಾಂಸರು ತೋರಿಸಿದ್ದಾರೆ.

ಹದಿಮೂರನೆಯ ಶತಮಾನವು ಕನ್ನಡ ಷಟ್ಪದಿಯ ವಿಕಾಸದಲ್ಲಿ ಅತ್ಯಂತ ಮಹತ್ವದ ಘಟ್ಟ. ಈ ಶತಮಾನದ ಆದಿ ಭಾಗದಲ್ಲಿದ್ದ ರಾಘವಾಂಕನೇ ಷಟ್ಪದಿಯಲ್ಲಿ ಸ್ವತಂತ್ರ ಮಹಾ ಕಾವ್ಯವೊಂದನ್ನು ಮೊತ್ತಮೊದಲು ರಚಿಸಿದ ಕವಿ. ರಾಘವಾಂಕನ ಸಮಕಾಲೀನನೆಂದು ಭಾವಿಸಲಾಗಿರುವ ಪೋಲಾಳ್ವ ದಂಡನಾಥನು ಒಂದು ಕೃತಿಯನ್ನು ಷಟ್ಪದಿಯಲ್ಲಿ ಬರೆದಿದ್ದನಂತೆ. ಆದರೆ ಆ ಕೃತಿ ಸಿಕ್ಕಿಲ್ಲ. ಷಟ್ಪದಿಯ ಮೊದಲ ಕವಿಯಾದ ರಾಘವಾಂಕ ತನ್ನ ಕಾವ್ಯ ಗಳ ರಚನೆಗೆ ವಾರ್ಧಕ ಮತ್ತು ಉದ್ದಂಡ ಷಟ್ಪದಿಗಳನ್ನು ಬಳಸಿದ್ದಾನೆ. ಆತನನ್ನು ವಾರ್ಧಕ ಷಟ್ಪದಿಯ ನಿರ್ಮಾಪಕನೆಂದೂ ಕರೆಯುತ್ತಾರೆ. ಸು. 1275ರಲ್ಲಿದ್ದ ಕುಮುದೇಂದು ತನ್ನ ರಾಮಾಯಣದಲ್ಲಿ ಭೋಗ, ಕುಸುಮ ಮತ್ತು ಪರಿವರ್ಧಿನಿ ಷಟ್ಪದಿಗಳನ್ನು ಬಳಸಿದ್ದಾನೆ. ಕ್ರಿ.ಶ. 1369ರಲ್ಲಿ ಗ್ರಂಥ ರಚಿಸಿದ ಭೀಮಕವಿಯ ಬಸವ ಪುರಾಣವೇ ಭಾಮಿನಿ ಷಟ್ಪದಿಯ ಮೊದಲ ಕಾವ್ಯ. ಇದು ಷಟ್ಪದಿಯ ವಿಕಾಸದಲ್ಲಿ ಮತ್ತೊಂದು ಪ್ರಮುಖ ಘಟ್ಟವಾಗಿದೆ. ಮುಂದೆ ಭಾಮಿನಿ ಷಟ್ಪದಿ ಹೆಚ್ಚು ಜನ ಕವಿಗಳಿಗೆ ಪ್ರಿಯವಾಯಿತು. ಹದಿನೈದನೆಯ ಶತಮಾನದಲ್ಲಿ ಷಟ್ಪದಿಗೆ ಹೆಚ್ಚಿನ ಮಹತ್ವ ದೊರೆಯಿತು. ಕುಮಾರವ್ಯಾಸನ ಗದುಗಿನ ಭಾರತ, ಚಾಮರಸನ ಪ್ರಭುಲಿಂಗಲೀಲೆ, ಕುಮಾರ ವಾಲ್ಮೀಕಿಯ ತೊರವೆ ರಾಮಾಯಣದಂಥ ಭಾಮಿನಿ ಷಟ್ಪದಿಯ ಕಾವ್ಯಗಳು ಈ ಕಾಲದಲ್ಲಿ ಹುಟ್ಟಿದವು. ಈ ಶತಮಾನದ ಉಳಿದ ಷಟ್ಪದಿಕಾರರಲ್ಲಿ ದೇವ ರಾಜ. ಭಾಸ್ಕರ, ಲಕ್ಕಣ ದಂಡೇಶ, ಮಗ್ಗೆಯ ಮಾಯಿದೇವ, ಗುರುಬಸವ, ಬೊಮ್ಮರಸ ಮುಂತಾದವರನ್ನು ಹೆಸರಿಸಬಹುದು. ಹದಿನಾರನೆಯ ಶತ ಮಾನದಲ್ಲಿ ಷಟ್ಪದಿ ಮತ್ತು ಸಾಂಗತ್ಯಗಳೆರಡೂ ಸಮಸಮವಾಗಿ ಸ್ಪರ್ಧಿಸಿದವು. ಈ ಶತಮಾನದ ಷಟ್ಪದಿ ಕವಿಗಳಲ್ಲಿ ಮಂಗರಸ, ತಿಮ್ಮಣ್ಣಕವಿ, ಗುಬ್ಬಿಯ ಮಲ್ಲಣಾರ್ಯ, ಚಾಟು ವಿಠಲನಾಥ, ಕನಕದಾಸ, ಸಾಳ್ವ, ಲಕ್ಷ್ಮೀಶ, ವಿರೂ ಪಾಕ್ಷ ಪಂಡಿತರಂತವರು ಗಣ್ಯರಾಗಿದ್ದಾರೆ. ಹದಿನೇಳನೆ ಶತಮಾನದಿಂದ ಮುಂದೆ ಕನ್ನಡ ಸಾಹಿತ್ಯದಲ್ಲಿ ಷಟ್ಪದಿಯ ಪ್ರಭಾವ ಇಳಿಮುಖವಾಯಿತು. ಅಂದರೆ ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶರಂಥ ಕವಿಗಳು ಆಗ ಹುಟ್ಟಿಬರಲಿಲ್ಲ. ಆದರೂ ಹದಿನೇಳನೇ ಶತಮಾನದ ಗೋಪಕವಿ, ನಾಗರಸ, ರಂಗನಾಥನಂತಹವರು ಷಟ್ಪದಿಯ ಸಂಪ್ರದಾಯವನ್ನು ಮುಂದು ವರಿಸಿದರು. ಮುಂದೆ ಜಗನ್ನಾಥದಾಸರ (1775) 'ಹರಿಕಥಾಮೃತ ಸಾರ' ಮತ್ತು ಮುದ್ದಣನ (1900) 'ರಾಮ ಪಟ್ಟಾಭಿಷೇಕ' ಗಮನಿಸಬಹುದಾದ

ಕೃತಿಗಳು. ಹೊಸಗನ್ನಡ ಕಾವ್ಯದ ಆರಂಭ ಕಾಲದಲ್ಲಿ ಷಟ್ಪದಿ ಮುಂತಾದ ದೇಸಿ ಛಂದಸ್ಸಿನಲ್ಲಿಯೇ ಭಾವಗೀತೆ ಉದಯಿಸಿತು. ಷಟ್ಪದಿಯು ತಳಹದಿಯ ಮೇಲೆ ಹೊಸ ಹೊಸ ಪ್ರಯೋಗಗಳೂ ನಡೆದವು.

ಅಡಿ ಟಿಪ್ಪಣಿಗಳು

1. ರಂ. ಶ್ರೀ. ಮುಗಳಿ : ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ಪು. 183
2. ಎಸ್. ಶಿವಣ್ಣ : ಅಪ್ರಕಟಿತ ಗ್ರಂಥಸೂಚಿಯೊಂದರಿಂದ.
3. ಡಿ. ಎಸ್. ಕರ್ಕಿ ; ಕನ್ನಡ ಛಂದೋವಿಕಾಸ, ಪು. 190
4. ಎಂ. ಎಂ. ಕಲಬುರ್ಗಿ : ಕನ್ನಡದಲ್ಲಿ ಷಟ್ಪದಿ ಸಾಹಿತ್ಯ, ಪು. 6 (ಷಟ್ಪದಿಯ ಉಗಮ ಮತ್ತು ವಿಕಾಸ)
5. ಡಿ. ಎಸ್. ಕರ್ಕಿ : ಕನ್ನಡ ಛಂದೋವಿಕಾಸ, ಪು. 174
6. ಅದೇ : ಪು. 177–180
7. ಎಂ. ಚಿದಾನಂದ ಮೂರ್ತಿ ; ಸಂಶೋಧನ ತರಂಗ–2, ಪು. 137 (ಇನ್ನೊಂದು ''ಷಟ್ಪದ'')

# ರಾಘವಾಂಕ

ಷಟ್ಪದಿ ದೇಸಿ ಸಂಪ್ರದಾಯಕ್ಕೆ ಸೇರಿದ ಹಾಡುಗಬ್ಬ. ರಾಘವಾಂಕ ಇದನ್ನು ಬಳಸಿ ಮಹಾಕಾವ್ಯಗಳನ್ನು ರಚಿಸಿದ ಮೊದಲ ಕವಿ. ಆದರೆ ಯಾವುದೇ ಒಂದು ಸಂಪ್ರದಾಯದಲ್ಲಿ ಇದ್ದಕ್ಕಿದ್ದಂತೆ ಮಹಾಕಾವ್ಯವೊಂದು ಹುಟ್ಟುವುದಿಲ್ಲ. ಈ ಮಾತನ್ನು ಒಪ್ಪಿಕೊಳ್ಳುವುದಾದರೆ ರಾಘವಾಂಕನನ್ನು ಷಟ್ಪದಿಯ ನಿರ್ಮಾಪಕನೆಂದು ಹೇಳುವಂತಿಲ್ಲ. ಷಟ್ಪದಿಯ ಬಿಡಿ ಪದ್ಯಗಳು ಹಿಂದೆ ಪ್ರಯೋಗವಾಗಿದ್ದವು ಮಾತ್ರವಲ್ಲ. ಶಿವಶರಣರಲ್ಲಿ ಕೆಲವರು ಷಟ್ಪದಿಗಳನ್ನು ರಚಿಸಿರುವ ಉದಾಹರಣೆಗಳನ್ನು ವಿದ್ವಾಂಸರು ತೋರಿಸಿದ್ದಾರೆ. ರಗಳೆಯ ತಳಹದಿಯ ಮೇಲೆ ಷಟ್ಪದಿ ರೂಪ ಪಡೆಯಿತೆಂಬ ಹೇಳಿಕೆಯೂ ಇದೆ. ರಾಘವಾಂಕನ ಸಮಕಾಲೀನನೆಂದು ಭಾವಿಸಲಾಗಿರುವ ಪೋಲಾಳ್ವದಂಡನಾಥನೆಂಬುವನು 'ಹರಿಚಾರಿತ್ರ'ವನ್ನು ಷಟ್ಪದದಲ್ಲಿ ಹೇಳಿದನೆಂಬುದಕ್ಕೆ ಶಾಸನಾಧಾರವಿದೆ. ಆದರೆ ಆತನ ಕಾವ್ಯ ದೊರೆತಿಲ್ಲ.

ಷಟ್ಪದಿಯಂತಹ ದೇಸಿ ಛಂದಸ್ಸನ್ನು ರಾಘವಾಂಕನಂತಹ ಪ್ರತಿಭಾವಂತ ಕವಿ ಬಳಸಲು ಕಾರಣವಾದ ಸಾಹಿತ್ತಿಕ ಹಿನ್ನಲೆಯನ್ನಿಷ್ಟು ಈಗ ಗಮನಿಸಬಹುದು. ಇದಕ್ಕೆ ಸ್ಫೂರ್ತಿ ಕೊಟ್ಟ ಧಾರ್ಮಿಕ ಕಾರಣಗಳನ್ನೂ ಇಲ್ಲಿ ಪರಿಶೀಲಿಸಬೇಕಾಗುತ್ತದೆ. ರಾಘವಾಂಕ ಷಟ್ಪದಿ ಸಂಪ್ರದಾಯದ ಮೊದಲ ಕವಿಯಾದುದರಿಂದ ಈ ಹಿನ್ನೆಲೆಯನ್ನು ತಿಳಿದುಕೊಳ್ಳುವ ಅಗತ್ಯವಿದೆ. ಷಟ್ಪದಿಯ ಉಗಮ ವಿಕಾಸಗಳ ದೃಷ್ಟಿಯಿಂದಲೂ ಈ ಅರಿವು ಅನಿವಾರ್ಯವಾದುದು.

ಧಾರ್ಮಿಕ ಪರಿಸ್ಥಿತಿಯ ದೃಷ್ಟಿಯಿಂದ ಹನ್ನೆರಡು ಮತ್ತು ಹದಿಮೂರನೆ ಶತಮಾನಗಳು ಕನ್ನಡ ನಾಡಿನ ಇತಿಹಾಸದಲ್ಲಿ ತುಂಬಾ ಮಹತ್ವದ ಕಾಲಗಳು. ರಾಮಾನುಜರು, ಬಸವಣ್ಣನವರು ಮತ್ತು ಮಧ್ವಾಚಾರ್ಯರು ಮೂರು ರೀತಿಯ ಧಾರ್ಮಿಕ ತತ್ವಗಳನ್ನು ಈ ಕಾಲದಲ್ಲಿ ಪ್ರಸಾರಗೊಳಿಸಿದರು.

ರಾಮಾನುಜರು ಮತ್ತು ಮಧ್ವಾಚಾರ್ಯರು ತಮಗಿಂತ ಹಿಂದೆ ಇದ್ದ ವೈದಿಕ ಪರಂಪರೆಯನ್ನು ನಿರಾಕರಿಸದೆ ಅದರ ತಳಹದಿಯ ಮೇಲೆ ತಮ್ಮ ಹೊಸ ಧರ್ಮಗಳನ್ನು ನೆಲೆಗೊಳಿಸಿದರು. ಬಸವಣ್ಣನವರು ಮಾತ್ರ ವೈದಿಕ ಧರ್ಮವನ್ನು ನಿರಾಕರಿಸಿದರು. ಅದು ಬೋಧಿಸುವ ಕರ್ಮಕಾಂಡವನ್ನು ತಿರಸ್ಕರಿಸಿದರು. ವರ್ಣಾಶ್ರಮ ಪದ್ಧತಿ ಮತ್ತು ವೇದ ಪ್ರಾಮಾಣ್ಯವನ್ನು ಅಲ್ಲಗಳೆದರು. ಅವರು ಪ್ರತಿಪಾದಿಸಿದ ವೀರಶೈವ ಧರ್ಮದಲ್ಲಿ ವಿಪ್ರ ಮೊದಲಾಗಿ ಅಂತ್ಯಜ ಕಡೆತನಕ ಎಲ್ಲರಿಗೂ ಸಮಾನ ಹಕ್ಕು ದೊರೆಯಿತು. ಸ್ತ್ರೀಗೆ ವಿಶೇಷ ಮನ್ನಣೆ ಸಿಕ್ಕಿತು. ಆರ್ಥಿಕವಾಗಿ ಅವರು ಪ್ರತಿಪಾದಿಸಿದ ಕಾಯಕತತ್ವ ಶ್ರಮಜೀವಿಗೆ ಆತ್ಮವಿಶ್ವಾಸವನ್ನು ತಂದಿತು.

ಹನ್ನೆರಡನೆಯ ಶತಮಾನದ ಮಧ್ಯಭಾಗವು ಜೈನ ಧರ್ಮವು ಜನಪ್ರಿಯತೆ ಕಳೆದುಕೊಳ್ಳುತ್ತಿದ್ದ ಕಾಲ. ಕನ್ನಡ ನಾಡಿನಲ್ಲಿ ಅಲ್ಲಿಯವರೆಗೆ ಜೈನಧರ್ಮಕ್ಕೆ ವಿಶೇಷವಾದ ರಾಜಾಶ್ರಯ ಮತ್ತು ಪ್ರೋತ್ಸಾಹಗಳು ದೊರೆತಿದ್ದವು. ಆದರೆ ಹನ್ನೆರಡನೆ ಶತಮಾನದಿಂದೀಚೆಗೆ ರಾಜಕೀಯವಾಗಿ ಜೈನಧರ್ಮದ ಶಕ್ತಿ ಕುಂದುತ್ತಾ ನಡೆಯಿತು. ವೈದಿಕ ಧರ್ಮವು ಶುಷ್ಕವಾದ ಮತಾಚರಣೆಗಳು, ಕರ್ಮಕಾಂಡ ಮತ್ತು ವರ್ಣಾಶ್ರಮ ಪದ್ಧತಿಯ ಗೋಜಲಿನಲ್ಲಿ ಸಿಕ್ಕಿಹಾಕಿಕೊಂಡಿತ್ತು. ಧಾರ್ಮಿಕವಾದ ಶೋಷಣೆ ಮತ್ತು ಮೇಲುಕೀಳಿನ ಅಂತರದಿಂದಾಗಿ ಸಾಮಾಜಿಕವಾಗಿ ಕೆಳವರ್ಗಕ್ಕೆ ಸೇರಿದವರು ವೀರಶೈವ ಧರ್ಮದ ಆಕರ್ಷಣೆಗೆ ಒಳಗಾದರು. ಕಲ್ಯಾಣದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಒಂದು ಹೊಸ ಸಮಾಜವನ್ನು ಕಟ್ಟುವ ಪವಿತ್ರತಮವಾದ ಕೆಲಸದಲ್ಲಿ ಪ್ರಭುದೇವ, ಸಿದ್ಧರಾಮ, ಚೆನ್ನಬಸವಣ್ಣನವರಂಥ ಜ್ಞಾನಿಗಳು; ಅಕ್ಕಮಹಾದೇವಿ, ಮುಕ್ತಾಯಕ್ಕನಂತಹ ಶರಣೆಯರು; ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಮಾದಾರ ಚನ್ನಯ್ಯ, ಹರಳಯ್ಯ, ನುಲಿಯ ಚಂದಯ್ಯನಂತಹ ದಲಿತವರ್ಗದ ನಾಯಕರು ಹೆಗಲಿಗೆ ಹೆಗಲು ಕೊಟ್ಟು ದುಡಿದರು. ಈಗಾಗಲೇ ಪ್ರತಿಷ್ಠಿತವಾಗಿದ್ದ ವೈದಿಕ ಜೈನಧರ್ಮಗಳೊಡನೆ ಸೆಣಸಿ ನೆಲೆಯೂರಬೇಕಾಗಿದ್ದ ವೀರಶೈವ ಧರ್ಮ ಸಹಜವಾಗಿಯೇ ತನ್ನ ಪ್ರತಿಕ್ರಿಯೆಯಲ್ಲಿ ಮಾಹೇಶ್ವರ ನಿಷ್ಠೆಯನ್ನು ಅಳವಡಿಸಿಕೊಂಡಿತು. ಈ ಪರಂಪರೆಯಲ್ಲಿ ಮುಂದೆ ಬಂದ ಕವಿಗಳಾದ ಹರಿಹರ ರಾಘವಾಂಕರ ಮನೋಧರ್ಮದಲ್ಲಿ ಕಾಣಬರುವ ಸ್ವಮತ ನಿಷ್ಠೆಯ ಪರಾಕಾಷ್ಠೆಯನ್ನು ಈ ಸಂಗತಿಯ ಹಿನ್ನೆಲೆಯಲ್ಲಿ ಗಮನಿಸಬೇಕು. ವಸ್ತುವಿನ

ದೃಷ್ಟಿಯಿಂದ ಶಿವಶರಣರ ಚರಿತ್ರೆ ಮತ್ತು ಶಿವಕಥೆಗಳಿಗೇ ತಮ್ಮನ್ನು ಅವರು ಮೀಸಲಿರಿಸಿಕೊಂಡರು. ಚಕ್ರವರ್ತಿಗಳನ್ನು ಹೊಗಳಿ ದತ್ತಿಗಳನ್ನು ಗಿಟ್ಟಿಸಿಕೊಂಡು ಐಶ್ವರ್ಯವಂತರಾಗಿ ಸುಖ ಸಂಪತ್ತಿನಲ್ಲಿ ಮುಳುಗೇಳುತ್ತಿದ್ದ ಹಿಂದಿನ ಕವಿಗಳಂತಲ್ಲದೆ ಶಿವನನ್ನು ಮತ್ತು ಅವನ ಶರಣರ ಸಮೂಹವನ್ನು ಸ್ತುತಿಸುವ ಹೊಸ ಸಂಪ್ರದಾಯವನ್ನು ಆರಂಭಿಸಿದ ಹರಿಹರ ತನ್ನ 'ಪಂಪಾ ಶತಕ'ದಲ್ಲಿ ಹೀಗೆ ಹೇಳಿದ್ದಾನೆ:

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದುನೀ
ನನವರತಂ ಪೊಗಳ್ದು ಕಿಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯೊಳ್ದನಂ

ಹರಿಹರ ಸಂಪ್ರದಾಯದಲ್ಲಿ ಹೆಜ್ಜೆ ಇಟ್ಟ ಮೊದಲ ಕವಿಯೂ ಆತನ ವರಸುತನೂ ಆದ ರಾಘವಾಂಕನೇ ಈ ಮಾತನ್ನು ನಿಷ್ಠೆಯಿಂದ ಒಪ್ಪಿಕೊಂಡಿದ್ದಾನೆ:

ಎನಿತು ಸಿರಿ ಸಾರ್ದಡಂ ಮಾಣ್ಬಡಂ ನಿತ್ಯತ್ವ
ವನುವಪ್ಪಡಂ ಸಾವಡಂ ಮತ್ತೆ ಹಂಪೆಯರ
ಸನ ಪೊಗಳ್ವ ನಾಲಗೆಯೊಳನ್ಯದೈವವ ಭವಿಗಳಂ ಕೀರ್ತಿಸಿದೆನಾ ಡೆ
ಮನಸಿಜಾರಿಯ ಭಕ್ತನಲ್ಲ ತಾನೆನಿಪ ಬಿರು
ದಿನ ಕವಿಯೆನಿಪ್ಪ ಹಂಪೆಯ ರಾಘವಾಂಕನೊ
ಯ್ಯನೆ ಪೇಳ್ದನೆಂಬಾಗಳೀ ಕೃತಿಯನಾವ ಸಜ್ಜನರು ಕೊಂಡಾಡದಿಪರು

ಎಂದು ಹರಿಶ್ಚಂದ್ರ ಕಾವ್ಯದಲ್ಲಿ ಹೇಳಿರುವ ರಾಘವಾಂಕನೂ ತನ್ನ ಪ್ರತಿಭೆಯನ್ನು ಮಾರಿಕೊಂಡಿದ್ದಾನೆ: ಆದರೆ ಅವನು ಮಾರಿಕೊಂಡಿರುವುದು ಲೌಕಿಕದ ಅರಸುಗಳಿಗಲ್ಲ; ಶಿವಭಕ್ತರಿಗೆ ಮತ್ತು ಶಿವನಿಗೆ. ಹೀಗೆ ವಸ್ತುವನ್ನು ಕುರಿತ ಸ್ವತಂತ್ರ ದೃಷ್ಟಿ ಹರಿಹರ ರಾಘವಾಂಕರಿಂದ ಪ್ರತಿಪಾದಿತವಾಗಿ ಈ ಪರಂಪರೆಯಲ್ಲಿ ಮುಂದೆ ಬಂದ ಎಲ್ಲ ವೀರಶೈವ ಕವಿಗಳಿಂದಲೂ ಮಾನ್ಯತೆ ಪಡೆಯಿತು.

ವಸ್ತುವಿನ ದೃಷ್ಟಿಯಿಂದ ಊಳಿಗಮಾನ್ಯ ಪದ್ಧತಿಯಿಂದ ಮುಕ್ತರಾದ ವೀರಶೈವ ಕವಿಗಳು ಭಾಷೆ ಮತ್ತು ಛಂದಸ್ಸಿನ ದೃಷ್ಟಿಯಿಂದಲೂ ಒಂದು ಕ್ರಾಂತಿಯನ್ನೇ ಉಂಟುಮಾಡಿದರು. ವೈದಿಕ ಮತ್ತು ಜೈನ ಧರ್ಮಗಳು

ಸಂಸ್ಕೃತ ಭಾಷೆಯ ಸೊತ್ತಾಗಿದ್ದವು. ಈ ಧರ್ಮದ ಕನ್ನಡ ಕವಿಗಳೂ ಸಹ ಹನ್ನೆರಡನೆಯ ಶತಮಾನದವರೆಗೆ - ಮುಂದೆಯೂ ಬಹುಪಾಲು ಜೈನರ ಪಟ್ಟಿಗೆ - ಕೇವಲ ಮಾರ್ಗಪದ್ಧತಿಯನ್ನೇ ಪುರಸ್ಕರಿಸಿದವರು. ಚಂಪೂ ಕಾವ್ಯವನ್ನು ಬರೆಯದವನು ಕವಿಯೇ ಅಲ್ಲ ಎಂಬ ದಾಸ್ಯಮನೋಭಾವ ಅವರನ್ನು ಆವರಿಸಿತ್ತು. ಈ ಪರಂಪರೆಯಲ್ಲಿಯೇ ಪಂಪ, ರನ್ನ, ನಾಗಚಂದ್ರನಂತಹವರು ಕನ್ನಡ ಸಾಹಿತ್ಯಕ್ಕೆ ಉತ್ತಮ ಚಂಪೂ ಕಾವ್ಯಗಳನ್ನು ನೀಡಿದರು ; ಬ್ರಹ್ಮಶಿವ, ನಯಸೇನನಂತಹವರು ದೇಸಿನಿಷ್ಠ ಕಾವ್ಯ ರಚಿಸಿದರು. ಆದರೆ ಸತ್ವವಿಲ್ಲದವರು ಒಣಪ್ರತಿಷ್ಠೆಗೆ ಸೋತು ಬಿದ್ದರು. ಹರಿಹರನನ್ನು 'ರಗಳೆಯ ಕವಿ'ಯೆಂದು ಹಾಸ್ಯ ಮಾಡಿದವರು ಬಹುಶಃ ಈ ಎರಡನೆಯ ವರ್ಗದ ಜನಗಳೇ ಎಂದು ಕಾಣುತ್ತದೆ.

ಹನ್ನೆರಡನೆ ಶತಮಾನದ ಶಿವಶರಣರ ವಚನಗಳು ಈ ಬಗೆಯ ಪಂಡಿತ ಕವಿಗಳ ಜೊಳ್ಳನ್ನು ಬಯಲಿಗೆಳೆದವು. ಆಧ್ಯಾತ್ಮ, ಅನುಭಾವದಂತಹ ಗಂಭೀರ ಸಂವೇದನೆಗಳನ್ನು ಸರಳವಾದ ಮಾತುಗಳಲ್ಲಿ ಹೇಳುವ ವಚನಕಾರರು ಕನ್ನಡ ಭಾಷೆಯ ಸತ್ವವನ್ನು ಮೊತ್ತಮೊದಲಿಗೆ ತೋರಿಸಿಕೊಟ್ಟವರು. ಗಹನವಾದ ವಿಚಾರಗಳಿಗೆ ಮಾಧ್ಯಮವಾಗಲು ಸಂಸ್ಕೃತದಂತಹ ದೇವಭಾಷೆಗೆ ಮಾತ್ರ ಸಾಧ್ಯ ಎಂಬ ನಂಬಿಕೆಗೆ ಸವಾಲು ಹಾಕಿದಂತಿತ್ತು ಅವರ ಪ್ರಯೋಗದ ಸಾಫಲ್ಯ. ಶಿವಶರಣರು ಪ್ರತಿಪಾದಿಸಿದ ಧರ್ಮ ಸರಳವಾದುದು. ಈ ಧರ್ಮವನ್ನು ಪ್ರಸಾರಮಾಡಲು ಅವರು ಅವಲಂಬಿಸಿದ ಮಾಧ್ಯಮ ಇನ್ನೂ ಸರಳವಾದುದು. ಸಮಾಜದ ದಲಿತವರ್ಗವನ್ನು ತನ್ನಲ್ಲಿ ಹುದುಗಿಕೊಂಡು ಧನ್ಯವಾಗಹೊರಟ ಈ ಧರ್ಮ ಜನಸಾಮಾನ್ಯರಿಗೆ ಮುಟ್ಟುವ ಪರಿಭಾಷೆಯನ್ನೂ ಕಲ್ಪಿಸಿಕೊಟ್ಟಿತು. ವಚನಕಾರರು ಭಾಷಾ ಮಾಧ್ಯಮದ ಕ್ಷೇತ್ರದಲ್ಲಿ ಹಾಕಿಕೊಟ್ಟ ಮೇಲ್ಪಂಕ್ತಿಯನ್ನೇ ಅನುಸರಿಸಿ ಮುಂದೆ ಬಂದ ವೀರಶೈವ ಕವಿಗಳಾದ ಹರಿಹರ ರಾಘವಾಂಕರು ದೇಸಿ ಛಂದಸ್ಸನ್ನು ಪುನರುಜ್ಜೀವನಗೊಳಿಸಿದರು. ಹರಿಹರ ರಗಳೆಗೆ, ರಾಘವಾಂಕನು ಷಟ್ಪದಿಗೆ, ಆದಿ ಮಹಾಕವಿಗಳಾದರು. ಅಲ್ಲಿಯವರೆಗೆ ಚಂಪೂಕಾವ್ಯದ ಸಂದುಗೊಂದಿನಲ್ಲಿ ಕಾಲ ಕಸವಾಗಿ ಬಿದ್ದಿರುತ್ತಿದ್ದ ರಗಳೆ ಷಟ್ಪದಿಗಳು ಮೊತ್ತಮೊದಲ ಬಾರಿಗೆ ಮಹಾಕಾವ್ಯಗಳಿಗೆ ಶರೀರವಾದವು. ಶಿವಶರಣರು ಕನ್ನಡ ನಾಡಿನ ಮೂಲ ನಿವಾಸಿಗಳಾಗಿದ್ದಿರಬಹುದಾದ ದಲಿತ ವರ್ಗಕ್ಕೆ ಮಹತ್ವ ಕೊಟ್ಟಂತೆ ವೀರಶೈವ ಕವಿಗಳು

ಕನ್ನಡದ ದೇಸಿ ಛಂದಸ್ಸುಗಳಾದ ರಗಳೆ, ಷಟ್ಪದಿ, ತ್ರಿಪದಿ ಮುಂತಾದವಕ್ಕೆ ಜೀವ ತುಂಬಿದರು. ಮುಂದೆ ಬಂದ ವೈದಿಕ ಜೈನ ಕವಿಗಳೂ ಅವರನ್ನು ಅನುಸರಿಸದೆ ಗತ್ಯಂತರವಿರಲಿಲ್ಲ.

## 2

ರಾಘವಾಂಕನ ಕಾಲ ಕ್ರಿ.ಶ. ಸುಮಾರು 1225. ಆತನ ತಂದೆ ತಾಯಿಗಳು ಮಹಾದೇವ ಮತ್ತು ರುದ್ರಾಣಿಯೆಂಬುವರು ; ಆರಾಧ್ಯ ಬ್ರಾಹ್ಮಣರು. ತನ್ನನ್ನು ಆತ 'ಮಹಾಲಿಂಗಭಕ್ತರ ಭಕ್ತ' ಎಂದು ಹೇಳಿಕೊಂಡಿದ್ದಾನೆ. ವೀರಶೈವ ಕವಿ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾದ ಅಗತ್ಯವಿಲ್ಲ. ಹಂಪೆ ಆತನು ಹುಟ್ಟಿ ಬೆಳೆದ ಊರು. ಮಹಾಕವಿ ಹರಿಹರ ಆತನ ವಿದ್ಯಾಗುರು ಮತ್ತು ದೀಕ್ಷಾಗುರು. ಆತನೇ ಹೇಳಿಕೊಂಡಿರುವ ಗುರು ಪರಂಪರೆಯು ಹೀಗಿದೆ : ಹಂಪೆಯ ಶಂಕರ ಪ್ರಭು, ಹಂಪೆಯ ಮಾದಿರಾಜ, ಹಂಪೆಯ ಮಹಾದೇವ, ಹಂಪೆಯ ಹರೀಶ್ವರ. ರಾಘವಾಂಕನು ಹರಿಹರನ ಸೋದರ ಳಿಯನೆಂದೂ ಹೇಳುತ್ತಾರೆ. ಆತ ಸ್ವತಃ ಯಾವ ರಾಜರನ್ನೂ ಆಶ್ರಯಿಸಿದವನಲ್ಲ. ಆದರೆ ವೀರಶೈವ ಕಾವ್ಯಗಳ ಪ್ರಕಾರ ಆತನನ್ನು ಹಂಪೆಯ ದೇವರಾಜೇಂದ್ರ ಭೂಪಾಲನಂಥವರು ಮನ್ನಿಸಿದ್ದರು. ಬಿರುದು, ಪಾದ ಪೆಂಡೆಯವನ್ನು ಕೊಟ್ಟಿದ್ದರು. ಓರಂಗಲ್ಲ ಕಾಕತೀಯ ಪ್ರತಾಪರುದ್ರನ ಆಸ್ಥಾನದಲ್ಲಿ ಪರವಾದಿಗಳನ್ನು ರಾಘವಾಂಕ ಜಯಿಸಿದ್ದನಂತೆ. ಕೆರೆಯ ಪದ್ಮರಸರ ಸನ್ನಿಧಿಯಲ್ಲಿ ಬೇಲೂರಿನಲ್ಲಿ ಶಿವ ಸಮಾಧಿಯನ್ನು ಹೊಂದಿದ ರಾಘವಾಂಕನ ಸಮಾಧಿಸ್ಥಳವನ್ನು ಈಗಲೂ ಯಾತ್ರಿಕರಿಗೆ ತೋರಿಸುತ್ತಾರೆ. ಹರಿಶ್ಚಂದ್ರ ಕಾವ್ಯ, ಸಿದ್ಧರಾಮ ಚಾರಿತ್ರ, ಸೋಮನಾಥ ಚಾರಿತ್ರ, ವೀರೇಶ ಚರಿತೆ—ಇವು ರಾಘವಾಂಕನ ಉಪಲಬ್ಧ ಕಾವ್ಯಗಳು. ಶರಭ ಚಾರಿತ್ರ ಮತ್ತು ಹರಿಹರ ಮಹತ್ವ ಎಂಬ ಆತನ ಎರಡು ಕಾವ್ಯಗಳು ಇನ್ನೂ ಸಿಕ್ಕಿಲ್ಲ. ವೀರೇಶ ಚರಿತೆ ಉದ್ದಂಡ ಷಟ್ಪದಿಯಲ್ಲಿದೆ ; ಉಳಿದ ಮೂರು ಕಾವ್ಯಗಳೂ ವಾರ್ಧಕ ಷಟ್ಪದಿಯಲ್ಲಿವೆ.

ರಾಘವಾಂಕನು ತನ್ನ ಕಾವ್ಯಗಳನ್ನು ರಚಿಸಿದ ಕ್ರಮವನ್ನು ಕುರಿತು ವಿದ್ವಾಂಸರಲ್ಲಿ ಒಮ್ಮತವಿಲ್ಲ. ಕವಿಯ ಆತ್ಮವಿಕಾಸ, ಶೈಲಿ ಮುಂತಾದ ಪ್ರಮಾಣಗಳನ್ನನುಸರಿಸಿ–ಸೋಮನಾಥ ಚಾರಿತ್ರ, ವೀರೇಶ ಚರಿತೆ, ಸಿದ್ಧರಾಮ

ಚಾರಿತ್ರ, ಹರಿಶ್ಚಂದ್ರ ಕಾವ್ಯ, ಈ ಕ್ರಮದಲ್ಲಿ ಒಂದಾದಮೇಲೊಂದರಂತೆ ಗ್ರಂಥರಚನೆ ನಡೆದಿರಬೇಕೆಂದು ಕೆಲವರು ಹೇಳುತ್ತಾರೆ. ರಾಘವಾಂಕನನ್ನು ಕುರಿತು ಪ್ರಚಾರದಲ್ಲಿರುವ ದಂತಕಥೆಯೊಂದನ್ನು ಅನುಸರಿಸಿ ಹರಿಶ್ಚಂದ್ರಕಾವ್ಯ ಆತನ ಮೊದಲ ಕಾವ್ಯವೆಂದೂ ಉಳಿದವುಗಳನ್ನು ಆಮೇಲೆ ಬರೆದನೆಂದೂ ಮತ್ತೆ ಕೆಲವರ ಅಭಿಪ್ರಾಯ.

ಸಿದ್ಧನಂಜೇಶನ 'ರಾಘವಾಂಕ ಚರಿತೆ'ಯಲ್ಲಿ ಈ ಕಥೆ ಕಂಡುಬರುತ್ತದೆ. ಹರಿಶ್ಚಂದ್ರ ಕಾವ್ಯವನ್ನು ಮೆಚ್ಚಿದ ಹಂಪೆಯರಸು ದೇವರಾಜೇಂದ್ರ ಭೂಪಾಲನು ರಾಘವಾಂಕನಿಗೆ 'ಕವಿಶರಭ ಭೇರುಂಡ'ನೆಂಬ ಬಿರುದನ್ನೂ ಪಾದ ಪೆಂಡೆಯವನ್ನೂ ಕೊಟ್ಟನಂತೆ. ರಾಘವಾಂಕನು ತನ್ನ ರಾಜ ಪುರಸ್ಕೃತ ಕಾವ್ಯವನ್ನು ಚಿನ್ನದ ಹರಿವಾಣದಲ್ಲಿಟ್ಟುಕೊಂಡು ಗುರುವಿನಲ್ಲಿಗೆ ಒಯ್ದನಂತೆ. ಪದತಲದಲ್ಲಿಟ್ಟು ನಮಸ್ಕರಿಸಿದರೂ ಹರಿಹರ ಮುಖ ತಿರುಗಿಸಲಿಲ್ಲ; ಮಾತಾಡಲಿಲ್ಲ. ರಾಘವಾಂಕನು ವಿನಯದಿಂದ 'ತಮ್ಮ ಅನುಗ್ರಹದಿಂದ ಈ ಕಾವ್ಯ ಜಗತ್ತಿನಲ್ಲಿ ಕೀರ್ತಿ ಪಡೆಯಲಿ' ಎಂದು ಕೇಳಿದಾಗ, ಹರಿಹರನು 'ಶಿವ ಕಥೆಯಲ್ಲದೆ ಕೇವಲ ಮನುಷ್ಯನ' ಕಥೆಯನ್ನು ಬರೆದ ಶಿಷ್ಯನನ್ನು ಜರೆದನಂತೆ. ಆಗ ರಾಘವಾಂಕನು ಹರಿಶ್ಚಂದ್ರನು ಶಿವಭಕ್ತನೆಂದೂ, ಹಾಗೆ ನೋಡಿದರೆ ಸ್ವತಃ ಹರಿಹರನೇ ಚೋಳನಂತ ಮಾನವ ಶಿವಭಕ್ತರ ಕಥೆ ಹೇಳಿರುವನೆಂದೂ ಮಾರುತ್ತರ ಕೊಟ್ಟನಂತೆ. 'ಚೋಳನು ಶಿವನೊಲಿದಾಗ ಕೈವಲ್ಯವನ್ನೊಪ್ಪಿದರೆ, ಹರಿಶ್ಚಂದ್ರನು ರಾಜ್ಯದ ಸಿರಿಯನ್ನು ಶಿವನಿಂದ ಪಡೆದ. ಅವರಿಬ್ಬರೂ ಸಮನಲ್ಲ' ಎಂದು ಹರಿಹರ ವಾದ ಮಾಡಿದ. 'ಗುರುವೇ ಕಿರಿಯರು ಹರಿಶ್ಚಂದ್ರನಿಂದವರು' ಎಂದು ರಾಘವಾಂಕ ಹೇಳಿದ್ದೇ ತಡ, ಗುರುವಿಗೆ ಕೋಪ ಉಕ್ಕೇರಿ ತನ್ನ ಎಡದ ಪಾದುಕೆಯಿಂದ ರಾಘವಾಂಕನಿಗೆ ಒದ್ದ; ಕೂಡಲೆ ಶಿಷ್ಯನ ಐದು ಹಲ್ಲುಗಳು ಉದುರಿದವು. ರಾಘವಾಂಕನಿಗೆ ಪಶ್ಚಾತ್ತಾಪವಾಯಿತು. ಗುರುವಿನ ಅಪ್ಪಣೆಯಂತೆ ಶೈವಕೃತಿ ಪಂಚಕವನೊರೆದು, ತನ್ನ ಹಲ್ಲುಗಳನ್ನು ಮರಳಿ ಪಡೆದ.

ಈ ಕಥೆಯ ತಾತ್ಪರ್ಯವಿಷ್ಟೆ : ವಸ್ತುವನ್ನು ಕುರಿತು ಹರಿಹರನು ತನ್ನ ಸಂಪ್ರದಾಯದ ಕವಿಗಳಿಗೆ ಹಾಕಿಕೊಟ್ಟ ಮೇಲ್ಪಂಕ್ತಿ, ಉಲ್ಲಂಘಿಸಲಾಗದ ಶಾಸನ. ಇದನ್ನು ಮೀರಲು ಯತ್ನಿಸಬಹುದಾದ ಕವಿಗಳನ್ನು ಎಚ್ಚರಿಸಲು ಇಂಥ ದಂತಕಥೆ ಹುಟ್ಟಿರಬಹುದು. ಅಥವಾ ಘಟನೆ ನಡೆದಿರಲೂಬಹುದು.

ಹರಿಹರ ರಾಘವಾಂಕನ ಹಲ್ಲುದುರಿಸಿರದಿದ್ದರೂ ಚೆನ್ನಾಗಿ ಛೀಮಾರಿ ಹಾಕಿರಬಹುದು.

## 3

ಹರಿಶ್ಚಂದ್ರ ಕಾವ್ಯ ರಾಘವಾಂಕನ ಪ್ರಥಮ ಕಾವ್ಯವಾಗಿರಲಿ ಬಿಡಲಿ, ಅದು ಅವನ ಶ್ರೇಷ್ಠ ಕಾವ್ಯ ; ಕನ್ನಡದ ಕೆಲವೇ ಮಹಾಕಾವ್ಯಗಳಲ್ಲಿ ಒಂದು.

ವೇದ ಪುರಾಣೇತಿಹಾಸಗಳಲ್ಲಿ ಪ್ರಸಿದ್ಧವಾದ ಹರಿಶ್ಚಂದ್ರನ ಕಥೆಯನ್ನೇ ತನ್ನ ಕಾವ್ಯಕ್ಕೆ ವಸ್ತುವಾಗಿ ಆರಿಸಿಕೊಂಡಿರುವ ರಾಘವಾಂಕ ಅದನ್ನು ಹೇಳುವ ರೀತಿಯಲ್ಲಿ ಹೊಸತನವನ್ನು ಮೆರೆದಿದ್ದಾನೆ—ಇದೊಂದು ನಾಟಕೀಯ ದೃಶ್ಯ ಕಾವ್ಯ. ರನ್ನನ 'ಸಾಹಸ ಭೀಮ ವಿಜಯ' ವೊಂದೆ ಇದರೊಂದಿಗೆ ಹೋಲಿಕೆ ಪಡೆಯಬಲ್ಲ ಮತ್ತೊಂದು ಕನ್ನಡ ಕೃತಿ. ಸಂವಿಧಾನ ಕಲ್ಪನೆ, ಪಾತ್ರ ಚಿತ್ರಣ, ಸಂವಾದ ಕೌಶಲ—ಹೀಗೆ ಯಾವುದೇ ಮಗ್ಗುಲಿನಿಂದ ಪರಿಶೀಲಿಸಿದರೂ ಈ ಕಾವ್ಯದ ಅನುಭವ ಶ್ರೇಷ್ಠ ಮಾದರಿಯ ನಾಟಕದಂತಿದೆ.

ರಾಘವಾಂಕನ ಪ್ರಕಾರ 'ಹರನೆಂಬುದೇ ಸತ್ಯ ; ಸತ್ಯವೆಂಬುದೆ ಹರನು'. ಈ ಮಾತನ್ನು ಬದುಕಿ ತೋರಿದವನು ಹರಿಶ್ಚಂದ್ರ. ಕಥಾರಂಭದಲ್ಲಿಯೇ ತನ್ನ ನಾಯಕನನ್ನು ಕವಿ ಹೀಗೆ ಪರಿಚಯ ಮಾಡಿಕೊಡುತ್ತಾನೆ :

ಸುರಪತಿಯ ಭೋಗವಗ್ನಿಯ ತೇಜ ವಂತಕನ
ಭರದದಟು ನೈರುತಿಯ ಕಾಯ್ಪು ರತ್ನಾಕರೇ
ಶ್ವರನ ಗಂಭೀರವಸಿಲನ ಬಲಂ ವಿತ್ತಪನ ಸಿರಿ ರುದ್ರನುಗ್ರತ್ವವು
ತರಣಿಯ ಪ್ರಭೆ ಧರೆಯ ಧೈರ್ಯ ಚಂದ್ರನ ಶಾಂತಿ
ವೆರಸಿ ರೂಪಾದುದೆನಿಸುವ ಹರಿಶ್ಚಂದ್ರ ಭೂ
ವರನಾ ಪುರಕ್ಕೊಡೆಯನಂ ಶರಧಿ ವಡಬನಾರಾತಿ ಗಜಪಂಚಾಸ್ಯನು

ಹರಿಶ್ಚಂದ್ರನ ಈ ಸತ್ವವನ್ನೇ ಪಣಕ್ಕಿಟ್ಟು ಜೂಜಾಡುತ್ತಾರೆ ವಸಿಷ್ಠ ವಿಶ್ವಾಮಿತ್ರ ಮಹಾಮುನಿಗಳು. ನಿಜವಾಗಿ ಹರಿಶ್ಚಂದ್ರನ ಕಥಾಬೀಜವಿರುವುದು ವಸಿಷ್ಠ ವಿಶ್ವಾಮಿತ್ರರ ಸ್ಪರ್ಧೆಯಲ್ಲಿ. ಆದುದರಿಂದ ಅವನ ಜೀವನ ನಾಟಕದ ಪ್ರಥಮ ಅಂಕದ ತೆರೆ ಸರಿದ ಕೂಡಲೆ ಗೋಚರವಾಗುತ್ತದೆ, ದೇವೇಂದ್ರನ ಆಸ್ಥಾನ. ಅಂದಿನ ಇರುಳ ಓಲಗದಲ್ಲಿ ಮಂಡಿಸಿದ್ದ ವಸಿಷ್ಠ ವಿಶ್ವಾಮಿತ್ರರೇನು ಸಾಮಾನ್ಯರೇ ? ಕವಿ ಅತ್ಯಂತ ಸಮರ್ಥವಾಗಿ ಕಣ್ಣಿಗೆ

ಕಟ್ಟುವಂತೆ ಅವರ ಮಹತ್ವವನ್ನು ಹೇಳುತ್ತಾನೆ. ದೇವೇಂದ್ರನ ಓಲಗದಲ್ಲಿ ಅವರಿಬ್ಬರೂ ಹೇಗೆ ಕುಳಿತಿದ್ದರೆಂದರೆ :

ಒಡಲ ನಾವರಿಸಿದಂಗೋಪಾಂಗ ಸಂಕುಳದ
ನಡುವೆ ನಯನ ದ್ವಯಂಗಳು ಸಲೆ ನವಗ್ರಹದ
ನಡುವೆ ಚಂದ್ರಾದಿತ್ಯರುರ್ವಿಯಂಪರ್ವಿ ಪಸರಿಸಿದ ನಾನಾ ನದಿಗಳ
ನಡುವೆ ಸುರುಚಿರ ಗಂಗೆ ತುಂಗಭದ್ರೆಗಳೊಪ್ಪ
ವಡೆದು ಮಹಿಮೆಯೊಳೆಸೆವ ತೆರದಿ ಸುರಪನ ಸಭೆಯು
ನೆಡೆಗೊಂಡ ಮುನಿಕುಲದ ನಡುವಿರ್ದರಧಿಕ ವಿಶ್ವಾಮಿತ್ರ ವಾಸಿಷ್ಠರು

ಸಮಾನ ಶಕ್ತರೂ ಮಹಿಮಾವಂತರೂ ಅಘಟಿತಘಟನಾ ಚತುರರೂ ಆದ ತಪಸ್ವಿಗಳಿಬ್ಬರೂ ಕುಳಿತಿರುವ ಸಭೆಯಲ್ಲಿ ದೇವೇಂದ್ರನು ಒಂದು ಪ್ರಶ್ನೆ ಹಾಕುತ್ತಾನೆ, ವಸಿಷ್ಠರನ್ನು ಉದ್ದೇಶಿಸಿ : "ಇಕ್ಷ್ವಾಕುವಂಶದ ಅರಸರಲ್ಲಿ ಮನ ವಚನ ಕಾಯದೊಳಗೊಮ್ಮೆಯುಂ ಹುಸಿ ಹೊದ್ದದಂತೆ ನಡೆವ ಕಲಿಗಳಾರು"? ಇಕ್ಷ್ವಾಕು ವಂಶದ ರಾಜಗುರು ವಸಿಷ್ಠನಿಗೆ ಗೊತ್ತಿಲ್ಲವೇ ತನ್ನ ಶಿಷ್ಯನ ಮಹತ್ವ ? ತಟ್ಟನೆ ಉತ್ತರ ಕೊಟ್ಟರು, 'ಹರಿಶ್ಚಂದ್ರನೆಂದು.' ಈ ಮಾತು ವಿಶ್ವಾಮಿತ್ರನನ್ನು ಕೆರಳಿಸಿತು. ವಿಶ್ವಾಮಿತ್ರನ ಕೋಪಕ್ಕೆ ಕಾರಣ ವನ್ನು ಕೊಡುವಲ್ಲಿ ಕವಿ ಕೌಶಿಕ ಸ್ವಭಾವದ ಆಳಕ್ಕೇ ಕನ್ನಡಿ ಹಿಡಿದಿದ್ದಾನೆ :

ತೀವಿದೊಡ್ಡೋಲಗದ ನಡುವೆ ತನ್ನಂ ಮೊದಲೊ
ಳೋವಿ ನುಡಿಸದ ಕೋಪವೊಂದಾ ವಸಿಷ್ಠಮುನಿ
ಯಾವುದಂ ಪೇಳ್ದಡದನಲ್ಲೆಂಬ ಭಾಷೆಯೆರಡಖಿಳ ಜೀವಾವಳಿಯಲಿ
ಭಾವಿಪಡೆ ಕುಂದನಲ್ಲದೆ ಲೇಸ ಕಾಣದಿಹ
ಭಾವ ಮುಪ್ಪುರಿಗೊಂಡು ಕುಡಿವರಿದು ಕಡುಗೋಪ
ವಾವರಿಸಿ ಕೌಶಿಕಂ ನಿಂದು, 'ನಿಲ್ ನುಡಿಯಬೇಡೆಂ'ದು ಜರೆದಿಂತೆಂದನು

ಆತನು ನಾಟಕೀಯವಾಗಿ ಎದ್ದು ನಿಂತು ವಸಿಷ್ಠರನ್ನು ತಡೆದ ಕೂಡಲೆ ಇಬ್ಬರೂ ಮುಖಾಮುಖಿಯಾದರು. ಅನೇಕ ವರ್ಷಗಳಿಂದ್ಯ ಪೋಷಿಸಿಕೊಂಡು ಬಂದಿದ್ದ ವೈರ ಭುಗಿಲೆಂದು ಮೇಲಿದ್ದಿತು. ಹರಿಶ್ಚಂದ್ರನ ಕಾರಣ ನೆಪಮಾತ್ರ. 'ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತೆಂಬ' ಗಾದೆಯಂತೆ ಹರಿಶ್ಚಂದ್ರನ ಸ್ಥಿತಿಯಾಯಿತು. ವಸಿಷ್ಠ ವಿಶ್ವಾಮಿತ್ರರ ನಡುವೆ ವಾಗ್ವಾದ ಉಂಟಾಯಿತು.

ವಿಶ್ವಾ—ಬೇಸರವೆ ಕೇಳ್ವ ದೇವೇಂದ್ರನುಂಟೆಂದಿಂತು ಹೇಸದಕಟ
ಕಟ ಸೊರಹುವರೆ ವಾಸಿಷ್ಠ ?
ವಸಿ —ನಾ ಸೊರಹಿದಾತನೆ ? ಅವನಧಿಕನಲ್ಲದನೆ ಹೇಳ್ ?

ವಿಶ್ವಾ—ರಾಸಿ ಹೊನ್ನುಂಟು ; ಅಧಿಕನಹನ್ !
ವಸಿ —ಹೊನ್ನಮಾತೀ ಸಭೆಯೊಳೇಕೆ ? ಸತ್ವನೇ ? ಹೇಳ್ !
ವಿಶ್ವಾ—ಸತ್ಯಲೇಶವಂತವನಾಳ್ವ ದೇಶದೊಳು ಕೇಳ್ದರಿಯೆ !

ಮುಗಿಯಿತು. 'ಕುಂಬಾರನಿಗೆ ವರ್ಷ, ದೊಣ್ಣೆಗೆ ನಿಮಿಷ'ದಂತೆ ಹರಿಶ್ಚಂದ್ರನ ಸತ್ಯ ಜೀವನವನ್ನು ವಿಶ್ವಾಮಿತ್ರ ಒಂದೇ ಮಾತಿನಲ್ಲಿ ನಿರಾಕರಿಸಿಬಿಟ್ಟ. ಮಾತ್ರವಲ್ಲ ತನ್ನ ಮಾತಿಗೆ ಕೆಲವು ಆಧಾರಗಳನ್ನು ಹುಡುಕಿ ಹೇಳಿದ. ವಿಶ್ವಾಮಿತ್ರನೊಡನೆ ವ್ಯರ್ಥ ಚರ್ಚೆಗಿಳಿಯಲು ಆಸಕ್ತಿಯಿಲ್ಲದ ವಸಿಷ್ಠನು, 'ಹರಿಶ್ಚಂದ್ರ ಭೂನಾಥನೊಳಗಸತ್ಯವನು ಕಾಣಿಸಲು ಬಲ್ಲರು ಧಾತ್ರಿಯೊಳು ಮುನ್ನ ಹುಟ್ಟಿವರಿಲ್ಲ ; ಇನ್ನು ಹುಟ್ಟುವರ ಕಾಣೆ' ಎಂದು ಕೈ ತೊಳೆದು ಕೊಳ್ಳ ಹೋದರೆ, ವಿಶ್ವಾಮಿತ್ರ ಬಿಡಲಿಲ್ಲ. ವಸಿಷ್ಠನು ಹರಿಶ್ಚಂದ್ರನು ಕೊಡುವ ಹಣದಾಸೆಗೆ ಸುಳ್ಳು ಹೇಳುತ್ತಿರುವನೆಂದು ಹರಿಶ್ಚಂದ್ರನನ್ನು ಸುಳ್ಳು ಮಾಡುವ ಹೊಣೆ ಹೊತ್ತು 'ಆತ ಹುಸಿದನಾದಡೆ ನಿನ್ನನೇಗೆಯ್ಯಬಹುದು'? ಎಂದು ಕೆಣಕಿ ಪ್ರಶ್ನಿಸಿದ. ಇನ್ನು ವಸಿಷ್ಠ ಸ್ಪರ್ಧೆಯಿಂದ ಹಿಂದೆಗೆಯುವಂತೆಯೇ ಇಲ್ಲ. ದೇವೇಂದ್ರನ ಸಮ್ಮುಖದಲ್ಲಿ ಇಬ್ಬರೂ ಪಣ ತೊಟ್ಟರು. ಹರಿಶ್ಚಂದ್ರನು ಸುಳ್ಳಾಡಿದರೆ, ತಾನು 'ವ್ರತಗೆಟ್ಟು, ಸತಿಯನುಳಿದತಿ ದಿಗಂಬರನಾಗಿ, ತಲೆ ಬೋಳಿಸಿಕೊಂಡು, ನರಕಪಾಲದಲ್ಲಿ ಹೆಂಡ ಕುಡಿಯುತ್ತಾ ತೆಂಕ ದಿಕ್ಕಿಗೆ ಹೋಗುವೆ'ನೆಂಬ ಉಗ್ರ ಪ್ರತಿಜ್ಞೆಯನ್ನು ವಸಿಷ್ಠ ತೊಡುತ್ತಾನೆ. ವಿಶ್ವಾಮಿತ್ರನು ಕೂಡ ಹರಿಶ್ಚಂದ್ರನು ಸುಳ್ಳಾಡದಿದ್ದರೆ, 'ಇಂದ್ರನು ಹದಿನಾಲ್ಕು ಜನ್ಮಗಳನ್ನೆತ್ತಿ ಬರುವವರೆಗೂ ತಾನು ದೇವಲೋಕದತ್ತ ಸುಳಿಯುವುದಿಲ್ಲ ವೆಂದೂ ತನ್ನ ತಪಸ್ಸಿನಲ್ಲಿ ಅರ್ಧಭಾಗವನ್ನು ಹರಿಶ್ಚಂದ್ರನಿಗೆ ಧಾರೆಯರೆದು ಕೊಡುವೆ ನೆಂದೂ' ಪಣವಿಡುತ್ತಾನೆ. ಮಹಾತಪಸ್ವಿಗಳ ಜಗಳದ ಗೊಡವೆ ತಮಗೇಕೆಂದು ಇಂದ್ರ ಸಮೇತ ಸಭಿಕರೆಲ್ಲ ಸ್ತಂಭೀಭೂತರಾಗುತ್ತಾರೆ.

ವಿಶ್ವಾಮಿತ್ರ ಹರಿಶ್ಚಂದ್ರನನ್ನು ಪರೀಕ್ಷಿಸಲು ಇನ್ನು ಹೊರಡಬೇಕು. ಹೋಗುವಾಗ, ವಸಿಷ್ಠನಿಗೆ, 'ನಿನ್ನ ಶಿಷ್ಯನಿಗೆ ಮುನ್ನೆಚ್ಚರಿಕೆ ಕೊಡು'ಎಂದು ಚುಚ್ಚುತ್ತಾನೆ. ವಸಿಷ್ಠನು ಈ ಕೊಂಕಿಗೆ ಲೆಕ್ಕಿಸದೆ ವಿಶ್ವಾಮಿತ್ರನನ್ನು 'ರಾಜರ್ಷಿ'ಯೆಂದು ಕರೆದು ಅವನಾಡುವ ಮಾತುಗಳು ಅವನಲ್ಲಿ ಇನ್ನೂ ಇರುವ ಕ್ಷತ್ರಿಯತ್ವವನ್ನು ಎತ್ತಿ ತೋರಿಸುತ್ತವೆ ಯೆನ್ನುತ್ತಾನೆ. ಈ ಮಾತು ವಿಶ್ವಾಮಿತ್ರನನ್ನು ಸೂಕ್ಷ್ಮ ಜಾಗದಲ್ಲಿ ತಿವಿದಂತಾಗುತ್ತದೆ. ಅನೇಕ ವರ್ಷ

ಗಳ ತಪದಿಂದ, ಬ್ರಹ್ಮರ್ಷಿ ಪಟ್ಟವನ್ನು ಪಡೆದ ವಿಶ್ವಾಮಿತ್ರ ಇದರಿಂದ ಸಿಟ್ಟಿಗೆದ್ದು ತಕ್ಕ ಪ್ರತೀಕಾರವೆಸಗಲು ಸಭೆಯಿಂದ ನಿರ್ಗಮಿಸುತ್ತಾನೆ.

ಮುಂದೆ ಹರಿಶ್ಚಂದ್ರ ಕಾವ್ಯದ ದೃಶ್ಯವು ಇಂದ್ರಲೋಕದಿಂದ ಭೂಲೋಕಕ್ಕೆ ಸ್ಥಳಾಂತರವಾಗುತ್ತದೆ. ವಿಶ್ವಾಮಿತ್ರನ ಕುಟಿಲೋಪಾಯಗಳ ಪರಂಪರೆಯೇ ಇಲ್ಲಿಂದ ಆರಂಭವಾಗುತ್ತದೆ. ಒಂದಾದ ಮೇಲೊಂದರಂತೆ ಅಸ್ತ್ರಗಳನ್ನು ಹರಿಶ್ಚಂದ್ರನ ಮೇಲೆ ಪ್ರಯೋಗಿಸುತ್ತಾನೆ. ಮೊತ್ತಮೊದಲನೆಯದಾಗಿ ಕುಟಿಲಮರಿಯದ ಕೆಲವು ಮುನಿಗಳ ಮೂಲಕ ಹರಿಶ್ಚಂದ್ರನು 'ಬಹು ಸುವರ್ಣಯಾಗ'ಮಾಡಲು ಪ್ರೇರೇಪಿಸುತ್ತಾನೆ. ರಾಜನು ಯಾಗ ಮಾಡಿ ದಕ್ಷಿಣೆಯನ್ನು ಕೊಡುತ್ತಿರುವ ಸಮಯಕ್ಕೆ—ವಸಿಷ್ಠ ಹೋದ ಹೊತ್ತನರಿದು—ವಿಶ್ವಾಮಿತ್ರನು ಬರುತ್ತಾನೆ. ಮುಗ್ಧನಾದ ಹರಿಶ್ಚಂದ್ರನು 'ನೆನಸಿದರ್ಥಮಂ ಬೆಸಸಿ' ಎಂದು ಪ್ರಾರ್ಥಿಸಲು 'ಪಿರಿಯ ಕರಿಯಂ ಮೆಟ್ಟಿ ಕವಡೆಯಂ ಮಿಡಿದಡೆನಿತುದ್ದಕ್ಕೆ ಹೋಹುದದರ ಸರಿಯೆನಿಸಿ ಸುರಿದ ಹೊಸ ಹೊನ್ನರಾಸಿಯನೀವುದು'ಎಂದು ಕೇಳುತ್ತಾನೆ. ಋಷಿಯೊಬ್ಬನು ಇಷ್ಟು ಅರ್ಥಮೋಹವನ್ನು ವ್ಯಕ್ತಪಡಿಸಿದರೆ ಸ್ವಲ್ಪವೂ ವಿಚಲಿತನಾಗದ ದೊರೆ ಕೊಡಲನುವಾಗುತ್ತಾನೆ. 'ನಿನ್ನ ಮೇಲಿರಲಿ ಬೇಕಾದಾಗ ಪಡೆಯುತ್ತೇನೆ' ಎಂದು ವಿಶ್ವಾಮಿತ್ರನೇ ತಡೆಯುತ್ತಾನೆ. ಮುಂದಿನ ಉಪಾಯವೆಂದರೆ, ಹರಿಶ್ಚಂದ್ರನ ರಾಜ್ಯದ ಮೇಲೆ ನಾನಾ ಮೃಗ ಸಂಕುಳಗಳನ್ನು ಹುಟ್ಟಿಸಿ ಛೂ ಬಿಡುವುದು. ಅವುಗಳನ್ನು ಬೇಟೆಯಾಡುವ ಸಲುವಾಗಿ ಅರಣ್ಯಕ್ಕೆ ಬಂದ ರಾಜನನ್ನು ಉಪಾಯಾಂತರದಿಂದ ಮೋಸಗೊಳಿಸುವುದು. ಇದನ್ನು ಯೋಚಿಸಿದ ವಿಶ್ವಾಮಿತ್ರ ತನಗೆ ತಾನೆ ಬೆನ್ನು ಚಪ್ಪರಿಸಿಕೊಳ್ಳುತ್ತಾನೆ :

ಅನುವುಳ್ಳ ಬುದ್ಧಿಯಂ ಕಂಡೆನೆಂದತಿ ಮೆಚ್ಚಿ
'ತನಗೆ ತಾ ತೂಪಿರಿದುಕೊಂಡು' ಕಣ್ಮುಚ್ಚುತಂ
ಮನದೊಳುತ್ಪತ್ತಿ ಮಂತ್ರವ ಮಂತ್ರಿಸಿದ ಜಲವನೊಸೆದುದೆಸೆದೆಸೆಗೆತಳಿದು
ವಿನಯದಿಂ ನೋಡನೋಡಲು ದಿಕ್ಕು ಧರಣಿ ತೆ
ಕ್ಕನೆ ತೀವಿ ನಿಂದ ನಾನಾ ಪಕ್ಷಿ ಮೃಗ ಕುಲಕೆ
ಕೊನೆವೆರಳನಲುಗಿ ತಲೆದೂಗಿ ಕೈವೀಸಿದಂ ದೇಶಮಂ ಗೋಳಿಡಿಸಲು

ಇಲ್ಲಿ 'ತನಗೆ ತಾ ತೂಪಿರಿದುಕೊಂಡು' ಎಂಬ ಮಾತು ವ್ಯಂಗ್ಯದ ಪರಾಕಾಷ್ಠೆಯಾಗಿದೆ. ಹರಿಶ್ಚಂದ್ರ ಕಾವ್ಯದಲ್ಲಿ ಬೇಟೆಯ ವರ್ಣನೆಗೆ ಕಲ್ಪಿಸಿಕೊಂಡಿರುವ ಸನ್ನಿವೇಶ ಎಷ್ಟು ಸಹಜವಾಗಿದೆಯೋ ಅಷ್ಟೇ ಸಹಜವಾಗಿದೆ ರಾಘವಾಂಕನ

ಬೇಟೆಯ ಚಿತ್ರಣ. ಕನ್ನಡ ಸಾಹಿತ್ಯದಲ್ಲಿಯೇ ಇಷ್ಟೊಂದು ಉತ್ತಮ 'ಬೇಟೆ ವರ್ಣನೆ' ಮತ್ತೆಲ್ಲಿಯೂ ಕಂಡುಬರುವುದಿಲ್ಲ. ಸ್ವತಃ ಕವಿ ಬೇಟೆಯ ಅನುಭವವನ್ನು ಪಡೆಯದಿದ್ದರೆ ಈ ಬಗೆಯ ಸಹಜ ಚಿತ್ರಗಳನ್ನು ನಿರ್ಮಿಸಲು ಸಾಧ್ಯವೇ ? ಎಂದು ಯೋಚಿಸುವಂತಾಗುತ್ತದೆ. ಅದರ ವಿಸ್ತಾರವಾದ ಪರಿಚಯಕ್ಕೆ ತೊಡಗದೆ, ಕೊಬ್ಬಿದ ಕಾಡುಹಂದಿಗೆ ಹೆದರಿ ನಾಗಾಲೋಟ ನಿರತನಾಗಿದ್ದ ಬೇಡನೊಬ್ಬನ ಚಿತ್ರವನ್ನು ಕೊಡುವ ಒಂದು ಪದ್ಯವನ್ನು ಮಾತ್ರ ಉದಾಹರಿಸುತ್ತೇವೆ. ಇದು ರಾಘವಾಂಕನ ಹಾಸ್ಯಪರ ಮನೋ ವೃತ್ತಿಗೂ ಒಳ್ಳೆಯ ನಿದರ್ಶನವಾಗಿದೆ :

ಬಟ್ಟೆ ತಲೆ ಗಿಡುಹಿಡಿದು ಕಳೆದುಡುಗೆ ಕಾಡ ಮುಳು
ನಟ್ಟು ಕುಂಟುವ ಪದಂ ಬೆನ್ನ ಬಿಗುಹಳಿದೆಳಲ್ವ
ಮೊಟ್ಟೆ ಗೂಳೆಡಹಿ ಕೆಡೆದೊಡೆದ ಮೊಳಕಾಲ್ ತೇಕುವಳ್ಳೆಗಳುವೆರಸೊರಲುತ
ಕೆಟ್ಟೋಡುತಿರಲೋರ್ವನವನ ಕಂಡಿದಿರಡ್ಡ
ಗಟ್ಟಿ ಕೇಳಲು ಹುಹು ಹುಲಿಯಲ್ಲ ಹಂದಿಯರೆ
ಯಟ್ಟಿ ಬರುತಿರ್ದುದೆನೆ ಯೆಲ್ಲಿ ತೋರೆನಲು ನೀವೆ ಅರಸಿಕೊಂಬುದೆಂದ

ವಿಶ್ವಾಮಿತ್ರನ ಈ ಮಾಯಾವರಾಹವನ್ನು ಅಟ್ಟಿಸಿಕೊಂಡು ತೊಳಲುತ್ತಾ ಹರಿಶ್ಚಂದ್ರನು ವಸಿಷ್ಠನ ಆಶ್ರಮವನ್ನು ಪ್ರವೇಶಿಸುತ್ತಾನೆ. ಹೇಳಿಯೂ ಹೇಳದಂತೆ ಸೂಕ್ಷ್ಮವಾಗಿ ವಿಶ್ವಾಮಿತ್ರನ ಬಗ್ಗೆ ಈ ಸಮಯದಲ್ಲಿ ವಸಿಷ್ಠನು ಎಚ್ಚರಿಸುತ್ತಾನೆ, ತಪ್ಪಿಯಾದರೂ ವಿಶ್ವಾಮಿತ್ರನ ಆಶ್ರಮದತ್ತ ಸುಳಿಯ ಬಾರದೆಂದು. ಆದರೆ ಹರಿಶ್ಚಂದ್ರನ ವಿಧಿ ಅವನನ್ನು ಅಲ್ಲಿಗೇ ಕೊಂಡೊಯ್ಯು ತ್ತದೆ. ಕೊಬ್ಬಿದ ಹಂದಿಯನ್ನು ವಿಶ್ವಾಮಿತ್ರನ ಆಶ್ರಮದವರೆಗೂ ಅಟ್ಟಿಸಿ ಕೊಂಡು ಹೋಗಿ ಬಾಣ ಬಿಡುತ್ತಾನೆ. ಏಟು ತಿಂದ ಹಂದಿ ತನ್ನ ಒಡೆಯ ವಿಶ್ವಾಮಿತ್ರನಲ್ಲಿ ಧಾವಿಸುತ್ತದೆ. ಹಂದಿಯನ್ನು ಕಾಣದೆ ಹರಿಶ್ಚಂದ್ರ ಬಳಲಿ ತನ್ನ ಸತಿಯಾದ ಚಂದ್ರಮತಿಯ ತೊಡೆಯ ಮೇಲೆ ತಲೆಯಿಟ್ಟು ನಿದ್ರಿಸು ತ್ತಾನೆ; ದುಸ್ವಪ್ನದಿಂದ ಗಾಭರಿಯಾಗಿ ಮೇಲೇಳುತ್ತಾನೆ. ಇಲ್ಲಿ ಸ್ವಪ್ನ ವೊಂದರ ರೂಪಕದ ಮೂಲಕ ಕವಿ ಹರಿಶ್ಚಂದ್ರನ ಭವಿಷ್ಯವನ್ನು ಸುಂದರ ವಾಗಿ ನಿರೂಪಿಸಿದ್ದಾನೆ. ಮನಶ್ಶಾಸ್ತ್ರದ ಪ್ರಕಾರವೂ ಇಂತಹ ಸ್ವಪ್ನಗಳ ಸಾಂಕೇತಿಕ ಅಭ್ಯಾಸ ನಡೆಸುವ ಪರಿಪಾಠ ಇತ್ತೀಚೆಗೆ ಬೆಳೆಯುತ್ತಿದೆ. ಹರಿಶ್ಚಂದ್ರ ಕಾವ್ಯದಲ್ಲಿ ರಾಘವಾಂಕನು ಕಲ್ಪಿಸಿರುವ ಈ ಸ್ವಪ್ನರೂಪಕವು ಇಂಥ ಅಭ್ಯಾಸಕ್ಕೆ ತಕ್ಕ ವಸ್ತುವನ್ನೊದಗಿಸುವಂತಿದೆ. ಅದನ್ನು ಕಲ್ಪಿಸಿದ

ರಾಘವಾಂಕನ ಕೌಶಲವನ್ನು ಎಷ್ಟು ಕೊಂಡಾಡಿದರೂ ಸಾಲದು. ಚಂದ್ರಮತಿಗೆ ತನ್ನ ಸ್ವಪ್ನದ ವಿವರವನ್ನು ಹೇಳಿದ ಹರಿಶ್ಚಂದ್ರ ಅದರ ವ್ಯಾಖ್ಯಾನವನ್ನು ಆಕೆಯಿಂದ ಬಯಸುತ್ತಾನೆ :

ಘುಡುಘುಡಿಸುತೊಬ್ಬ ಮುನಿ ಬಂದು ನಾನೋಲಗಂ
ಗೊಡುವ ಮಣಿ ಮಂಟಪದ ಕಂಭವೆಲ್ಲವನು ತಡೆ
ಗಡಿದು ಹೊಂಗಳಸಂಗಳಂ ಮಾಣದೊಡೆ ಬಡಿದು ನೆರೆದ ಸಭೆಯೊಳಗೆನ್ನನು
ಕೆಡಪಿ ಸಿಂಹಾಸನವನೊಯ್ವಾಗಳನ್ನೆದೆಯು
ನಡದೊಂದು ಕಾಗೆ ಕರೆದುದು ಬಳಿಕ್ಕಾಂ ಗಿರಿಯ
ನಡರ್ದು ಶಿವಿರದೊಳೆಸೆವ ಮಣಿ ಗೃಹಂಬೊಕ್ಕೆನಿದರಂತಸ್ಥವೇನೆಂದನು

ಹರಿಶ್ಚಂದ್ರನಿಗೆ ಮುಂದೊದಗಲಿರುವ ಕಷ್ಟ ಪರಂಪರೆಗಳು, ಅದನ್ನು ಸ್ಥೈರ್ಯದಿಂದ ಎದುರಿಸಿದರೆ ಸಿಗಬಹುದಾದ ಉನ್ನತ ಗೌರವಗಳನ್ನು ಈ ಸ್ವಪ್ನ ಸೂಚಿಸುತ್ತಿದೆಯೆಂಬುದನ್ನು ಹೇಳಿದ ಚಂದ್ರಮತಿ, 'ಏನೇ ಬಂದರೂ ಸತ್ಯವನ್ನು ಬಿಡಬೇಡ'ವೆಂದು ಪ್ರಾರ್ಥಿಸುತ್ತಾಳೆ. ಇತ್ತ ಏಟು ತಿಂದ ಹಂದಿ ವಿಶ್ವಾಮಿತ್ರನಲ್ಲಿಗೆ ಧಾವಿಸಿ ಅವನ ಪದತಲದಲ್ಲಿ ಮರಣಿಸುತ್ತದೆ.

ವಿಶ್ವಾಮಿತ್ರನಿಗಂತೂ ಹುಡುಕುತ್ತಿದ್ದ ನಿಧಿ ಕಾಲಿಗೆ ತೊಡರಿದಂತಾಗುತ್ತದೆ. ಇಬ್ಬರು ಮಾಯದಬಲೆಯರನ್ನು ಸೃಷ್ಟಿಸಿ ಹರಿಶ್ಚಂದ್ರನನ್ನು ಬೇಟದ ಬೇಟೆಯಲ್ಲಿ ಸಿಲುಕಿಸಲು ಹವಣಿಸುತ್ತಾನೆ. ಈ ಇಬ್ಬರು ತರುಣಿಯರೂ ಬ್ರಹ್ಮರ್ಷಿ ವಿಶ್ವಾಮಿತ್ರನ ಮಕ್ಕಳಾಗಿದ್ದರೂ ಹೊಲತಿಯರಾಗಿ ಹುಟ್ಟುತ್ತಾರೆ. ಹರಿಶ್ಚಂದ್ರನತ್ತ ವೈಯ್ಯಾರದಿಂದ ಬಂದ ಅವರ ರೂಪು ಅವರ ಗುಣವನ್ನು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತಿರುತ್ತದೆ :

ಸಂದ ಕಾರಿರುಳ ಕನ್ನೆಯರು ಹಗಲಂ ನೋಡ
ಲೆಂದು ಬಂದರೊ ಸುರಾಸುರರಬುಧಿಯಂ ಮಥಿಸು
ವಂದು ಹೊಸ ವಿಷದ ಹೊಗೆ ಹೊಯ್ದು ಕಗ್ಗನೆ ಕಂದಿ ಜಲದೇವಿಯರು ಮನದಲಿ
ನೊಂದು ಮಾನಿಸರಾದರೊ ಕಮಲಜಂ ನೀಲ
ದಿಂದ ಮಾಡಿದ ಸಾಲಭಂಜಿಕೆಗಳೊದವಿಜೀ
ವಂದಳೆದವೋ ಎನಿಪ್ಪಂದದಿಂ ಬಂದರಂಗನೆಯರವನೀಶನೆಡೆಗೆ

ಇದು ಏಕೆ ಹೀಗಾಯಿತು ಎಂದು ವಿವರಿಸುವ ಕವಿಯ ವ್ಯಾಖ್ಯಾನ ಸೊಗಸಾಗಿದೆ. ತರ್ಕಬದ್ಧವಾಗಿದೆ. ಹೊಲೆತನದ ಬಗ್ಗೆ ಶಿವಶರಣರಿಗಿದ್ದ ಕಲ್ಪನೆಗೆ ಅನುಸಾರವಾಗಿದೆ :

ಮುನಿಗೆ ಹೊಲೆಯಾವುದತಿ ಕೋಪ ಬದ್ಧ ದ್ವೇಷ
ವನಿಮಿತ್ತ ವೈರವದರಿಂದ ಹುಟ್ಟಿದರಾಗಿ
ವನಿತೆಯರು ಕಡೆಗೆ ಹೊಲತಿಯರಾಗಿ ಕಲಸಾರಿ ನಿಂದು ಬೆಸನಾವುದೆನಲು
ಜನಪತಿ ಹರಿಶ್ಚಂದ್ರ ಬಂದು ನಮ್ಮಯ ತಪೋ
ವನದೊಳ್ವಿರನೆ ನೀವು ಸರ್ವ ಬುದ್ಧಿಗಳೊಳಾ
ತನ ಮರುಳು ಮಾಡುತಿರಿ ಹೋಗಿಯೆಂದಟ್ಟಿದಂ ದುರ್ಮಂತ್ರ ಬಲವಂತನು

ಗಾಣ ನಾಯಕಿಯರು ಹರಿಶ್ಚಂದ್ರನನ್ನು ತಮ್ಮ ಗಾಯನದಿಂದ ತಣಿಸಿದರು. ಹಂದಿಯ ಬೆನ್ನು ಹತ್ತಿ ಸುತ್ತಿದ ಆಯಾಸ ಪರಿಹಾರವಾಗಿ ಸ್ವಪ್ನದಿಂದ ಕಂಗೆಟ್ಟ ಮನಸ್ಸು ಪ್ರಸನ್ನಗೊಂಡಿತು. ಮಿತಿಮೀರಿದ ಹರ್ಷದಿಂದ ತನ್ನ ಕೊರಳಲ್ಲಿದ್ದ ಹಾರವನ್ನು ಅವರಿಗೆ ಉಡುಗೊರೆಯಾಗಿ ಕೊಡಹೋದ. ವಿಶ್ವಾಮಿತ್ರನ ಮಕ್ಕಳು ಇಷ್ಟು ಚಿಕ್ಕ ಉಡುಗೊರೆಗಾಗಿ ಬಂದವರೇ ? ಮುತ್ತಿನ ಬೆಳ್ಗೊಡೆ ಯನ್ನು ಬೇಡಿದರು. ಇದರಿಂದ ಹರಿಶ್ಚಂದ್ರನಿಗೆ ನಗೆ ಬಂದಿತು. ಅವರ ಹುಚ್ಚು ಬೇಡಿಕೆಯನ್ನು ತಿರಸ್ಕರಿಸಿ ಬೆಳ್ಗೊಡೆಯ ಮಹತ್ವವನ್ನು ಅವರಿಗೆ ವಿವರಿಸಿದ. ಈ ಸಂದರ್ಭ ಹರಿಶ್ಚಂದ್ರ ಕಾವ್ಯದ ಸೊಗಸಾದ ನಾಟ್ಯ ಸನ್ನಿವೇಶಗಳಲ್ಲೊಂದು. ಹರಿಶ್ಚಂದ್ರ ಮತ್ತು ಗಾಣ ನಾಯಕಿಯರ ನಡುವೆ ನಡೆದ ಸಂವಾದ ಅದರ ತರ್ಕ ಸೌಂದರ್ಯಕ್ಕೆ, ಮೊನಚಿಗೆ ಹೆಸರಾಗಿದೆ. ಅದನ್ನು ನೀರಸವಾಗಿ ವಿವರಿಸುವ ಬದಲು ಉದಾಹರಿಸುವುದೇ ಮೇಲು. ಮುತ್ತಿನ ಸತ್ತಿಗೆಯನ್ನು ಕೊಡಲು ಏಕೆ ಸಾಧ್ಯವಿಲ್ಲವೆಂದು ವಿವರಿಸಿದ ರಾಜನಿಗೆ ತರುಣಿಯರು ಹೀಗೆ ಉತ್ತರಿಸುತ್ತಾರೆ :

ಗಾ. ನಾ.—ಅನುನಯದೊಳೆಲ್ಲಮಂ ಕೊಡಬಹುದು ಬಿಡಬಹುದು
ರಾಜ—ಜನನಿಯುಂ ಜನಕನಂ ನಲ್ಲಳಂ ದೈವಮಂ ಮನವಾರೆ ನಂಬಿ ನಚ್ಚಿರ್ದ
ಪರಿವಾರಮಂ ಕೊಡುವ ಬಿಡುವತಿ ಕವಿಗಳು ಜನರೊಳಗೆ ಜನಿಸರು
ಗಾ. ನಾ, — ನೀನೀಗ ಪೇಳ್ದನಿತರೊಳು ಬೇಡಿದಡೆ ಕೊಡಬೇಡ ಕೊಡೆಯನೀಯೆನೆ
ಲೋಭವೇಕರಸ ?

ರಾಜ —ಇದಲ್ಲದೆ ಬೇರೆ ಮಾತೆ ಪಿತರಿಲ್ಲ. ಲೋಗರಿಗೆ ಕೊಡಬಾರದಾಗಿ ಸತಿ, ವಂಶ
ಗತವಾಗಿ ಬಂದುದರಿಂದ ತಂದೆ, ಪಟ್ಟವ ಕಟ್ಟುವಾಗಲರ್ಚಿಸಿಕೊಂಬುದಾಗಿ
ದೈವಂ, "ನೆಳಲತಂಪನೊಸೆದೀವುರಾಗಿ ಸಾಗಿಸುವ ತಾಯ್, ಧುರದೊಳರಿ
ಗಳಂ ನಡುಗಿಸುವುದಾಗಿ ಚತುರಂಗಬಲವೆನಿಸಿತು ಇದನರಿದಯೆ ಬೇಡುವರ
ತನಿ ಮರುಳರೆನ್ನರೇ ಮೂಜಗದೊಳು.

ಮುತ್ತಿನ ಸತ್ತಿಗೆ ಸಿಗದಿದ್ದರೆ ಹೋಯಿತು! ಅದರ ಒಡೆಯನನ್ನೇ ಏಕೆ ಮದುವೆಯಾಗಬಾರದು? ಎನ್ನಿಸುತ್ತದೆ ಹೆಣ್ಣುಗಳಿಗೆ. ಸರಿ ಹಿಂದೆ ಮುಂದೆ ಆಲೋಚಿಸದೆ ಕೇಳುತ್ತಾರೆ. ಹರಿಶ್ಚಂದ್ರ ಎರಡೂ ಕಿವಿಗಳನ್ನು ಮುಚ್ಚಿ ಕೊಂಡು ತನ್ನ ಕುಲದ ಉನ್ನತಿಗೆ ಈ ಮಾತುಗಳಿಂದ ಧಕ್ಕೆ ಬಂದಿತೆಂದು ಮರುಗುತ್ತಾನೆ. ಸತಿಯರಾದರೋ ಕುಲದ ಡೋಂಗಿಯನ್ನು ಒಪ್ಪುವುದಿಲ್ಲ:

ಗಾ.ನಾ.—ಪಾವನ ಕ್ಷೀರಮಂ ಕೊಡುವ ಕೆಚ್ಚಲ ಮಾಂಸವಾವ ಲೇಸು? ಇನಿದುಳ್ಳ ಮಧುವನೊಸೆದೀವನೊಳವಾವ ಲೇಸು? ಅಧಿಕ ಕಸ್ತೂರಿಯಂ ಕೊಡುವ ಮೃಗನಾಭಿ ತಾನಾವ ಲೇಸು? ದೇವರಿಗೆ ಸಲ್ಲವೇ? ಉತ್ತಮ ಗುಣಂಗ ಳಿರ್ದಾವ ಕುಂದಂ ಕಳೆಯಲಾರವು. ಭಾವಿಸುವೊಡಿಂದೆಮ್ಮ ರೂಪು ಜವ್ವನ ವಿರಲು ಕುಲದ ಮಾತೇಕೆ?

ರಾಜ—ಅಕ್ಕಕ್ಕು ಬಚ್ಚಲುದಕಂ ತಿಳಿದಡಾರ ಊಹಕ್ಕೆ ಯೋಗ್ಯಂ? ನಾಯ್ಗೆ ಹಾಲುಳ್ಳಡಾವನೂಟಕ್ಕೆ ಯೋಗ್ಯಂ? ಪ್ರೇತವನದೊಳಗೆ ಬೆಳೆದ ಹೂವಾರ ಮುಡಿಹಕ್ಕೆ ಯೋಗ್ಯಂ? ಮಿಕ್ಕ ಹೊಲತಿಯರು ನೀವೇನೆ, ನಿಮ್ಮ ಜವ್ವನದ ಸೊಕ್ಕು, ರೂವಿನ ಗಾಡಿ, ಜಾಣತನದೊಪ್ಪ ಆತಕ್ಕೆ ಯೋಗ್ಯಂ? ರಮಿಸಿದವ ರುಂಟೆ? ಶಿವ ಶಿವಾ ಮಾತು ಹೊಲೆ.

ಗಾ.ನಾ.- ಹಾಡನೊಲಿದಾಲಿಸಿದ ಕಿವಿಗೆ ಹೊಲೆಯಿಲ್ಲ; ಮಾತಾಡಿ ಹೊಗಳಿದ ಬಾಯೆ ಹೊಲೆಯಿಲ್ಲ: ರೂಪ ನೆರೆ ನೋಡಿದ ವಿಲೋಚನಕೆ ಹೊಲೆಯಿಲ್ಲ; ಮೆಯ್ ಮುಡಿಗಳಿಂ ಸುಳಿವ ತಂಗಾಳಿಯಿಂ ತೀಡುವ ಸುಗಂಧಮಂ ವಾಸಿಸಿದ ನಾಸಿಕಕ್ಕೆ ನಾಡೆ ಹೊಲೆಯಿಲ್ಲ; ಸೋಂಕಿಂಗೆ ಹೊಲೆಯುಂ ಟಾಯ್ತೆ? ಕೂಡಿರ್ದ ಪಂಚೇಂದ್ರಿಯಂಗಳೊಳು ನಾಲ್ಕಧಮ,ಒಂದಧಿಕವೇ?

ರಾಜ—ಕಂಡರಿವ ವೈಸಲೇ ನಯನೇಂದ್ರಿಯಂ..............ದೂರದಿಂದಲ್ಲದವು ಮುಟ್ಟಲಿಲ್ಲ............ಕೆಂಡನು ಮುಟ್ಟದಡೆ ಬೇವಂತೆ ಕೇಳ್ದಡಂ ಕಂಡು ವಾಸಿಸಿದಡಂ ಬೆಂದವೇ? ಕಾಳುಗೆಡೆಯರೆ ಹೋಗಿ!

ಇನ್ನು ಹರಿಶ್ಚಂದ್ರನೊಡನೆ ಕುಲದ ಮೇಲು ಕೀಳಿನ ವಿಚಾರದಲ್ಲಿ ವಾದಿಸಲು ಅವರಿಗೆ ತರ್ಕ ಹೊಳೆಯಲಿಲ್ಲ. ತಾವು ಕೀಳು ಕುಲದವರಾದರೂ ಹರಿಶ್ಚಂದ್ರನ ಸಂಗದಿಂದ ಶುದ್ಧವಾಗಬಹುದೆನ್ನುತ್ತಾರೆ. 'ನಿಮಗೋಸುಗೆನ್ನ ಕುಲವಂ ಕೆಡಿಪೆನೇ'? ಎಂದವನಿಗೆ, 'ಪಾಪಿಗಳ ಪಾಪವಂ ತೊಳೆವ ಗಂಗೆಗೆ ಪಾಪಲೇಪವುಂಟಾಯ್ತೆ?' ಎಂದು ಪ್ರಶ್ನಿಸುತ್ತಾರೆ. 'ಕೊಡ ಹಾಲನ್ನು ಕೆಡಿಸಲು ಒಂದೇಹನಿ ಸಾಕು' ಎಂದ ಹರಿಶ್ಚಂದ್ರನು ಅವರನ್ನು ಸುಮ್ಮನಾಗಿಸು

ತ್ತಾನೆ. ಇನ್ನು ತರ್ಕದಲ್ಲಿ ತರುಣಿಯರಿಗೆ ಆಸಕ್ತಿ ಉಳಿಯಲಿಲ್ಲ. ಭಂಡತನ ಕ್ಕಿಳಿದರು. 'ಏಗೆಯ್ದಿಡಂ ಗಂಡನಾರಲ್ಲದಾತುರಂ ಪೋಗದು ; ಇನ್ನೊಲಿದಂತೆ ಮಾಡು, ನಿನ್ನಯ ಬೆನ್ನ ಬಿಡೆವು' ಎಂಬ ನಿರ್ಧಾರವನ್ನು ಆತನಿಗೆ ತಿಳಿಸಿದರು. 'ಬಳಿವಿಡಿದು ಬಂದು ಮಾಡುವುದೇನು? ನಮ್ಮ ಬೆಂಬಳಿಯಲೆನಿಬರು ಹೊಲೆಯರಿಲ್ಲ !' ಎಂದು ಉಪಹಾಸ ಮಾಡಿದ ಹರಿಶ್ಚಂದ್ರನಿಗೆ, "ಅಹಗೆ ಬಿಡೆವು ; ಎಳಸಿ ಮುಚ್ಚಿಸಿ ಮರುಳ್ಗೊಳಿಸಿ, ಮತ್ತೊಲ್ಲನವನಿಪನೆಂದು ಮೊರೆಯಿಡುತ್ತ ಇಳೆಯೊಳಗೆ ಸಾರುತ್ತ ದೂರುತ್ತ ಬಪ್ಪೆವು" ಎಂದು ಹೆದರಿಸಿದರು. ಇನ್ನು ಹರಿಶ್ಚಂದ್ರನ ತಾಳ್ಮೆ ಮೀರಿತು. ಘುಡುಘುಡಿಸುತೆದ್ದು ಚಾವಾಟಿಯನ್ನು ಸೆಳೆದು ಮಂತ್ರಿ ಸಹಿತನಾಗಿ ಅವರಿಬ್ಬರನ್ನೂ ಓಡಾಡಿಸಿಕೊಂಡು ಹೊಡೆದು ದಣಿಯುತ್ತಾನೆ. ಚಾವಟಿಯೇಟಿನಿಂದ ತತ್ತರಿಸಿ ಬೆನ್ನುಕಿತ್ತು ರಕ್ತ ಸುರಿದು ಹುಯಿಲಿಡುತ್ತಾ ವಿಶ್ವಾಮಿತ್ರನಲ್ಲಿ ಧಾವಿಸುತ್ತಾರೆ :

ಆರ ಮನೆಯವರೆಂದು ಕೇಳ್ದಡೆರಡನೆಯ ಪುರ
ವೈರಿ ವಿಶ್ವಾಮಿತ್ರ ಮುನಿಯ ಮನೆಯವರೆಂದ
ಡಾರಾಯನೆದ್ದು ಕೈಯಾರೆ ಸದೆ ಬಡಿದ ನಮ್ಮಂ ನಿರಪರಾಧಿಗಳನು
ಕಾರುಣ್ಯ ಚಿತ್ತದಿಂ ಕಳುಹಿ ಕೊಲಿಸಿದೆ ತಂದೆ
ಯೋರಂತೆ ಕೇಳೆಂದು ಮೊರೆಯಿಟ್ಟೊಡೆನ್ನಯಮ
ನೋರಥಂ ಕೈಸಾರ್ದುದಳಲ ಬೇಡೆಂದು ಕೋಪಾಟೋಪದಿಂ ಹರಿದನು

ಹೀಗೆ ಸಿಟ್ಟಿಗೆದ್ದ ವಿಶ್ವಾಮಿತ್ರನ ಘೋರ ರೂಪದ ಚಿತ್ರವನ್ನು ಕೊಡುವಲ್ಲಿ ಕವಿ ಅತಿಶಯೋಕ್ತಿಯ ಗಡಿಯನ್ನೂ ಮೀರಿದ್ದಾನೆ :

ವಡಬಾಗ್ನಿ ಜಡೆವೊತ್ತುದೋ ಸಿಡಿಲು ಹೊಸ ಭಸಿತ
ವಿಡ ಕಲಿತುದೋ ಕಾಡ ಕಿಚ್ಚು ಕೃಷ್ಣಾಜಿನವ
ನುಡ ಕಲಿತುದೋ ಪ್ರಳಯವಹ್ನಿ ತಪವಿರ್ದುದೋ ಫಾಳಲೋಚನನ ಕೋಪ
ಕಡುಗಿ ಮುನಿಯಾಯ್ತೊ ಹೇಳೆನೆ ಕಣ್ಣಕಡೆ ತೋರ
ಗಿಡಿ ಗೆದರೆ ಮೀಸೆಗೂದಲು ಹೊತ್ತಿ ಹೊಗೆಯೆ ಬಿರು
ನುಡಿಗಳುರಿಯುಗುಳೆ ವಿಶ್ವಾಮಿತ್ರನುರವಣಿಸಿ ಬಂದನವನೀಶನೆಡೆಗೆ

ಬಂದವನೇ ಹರಿಶ್ಚಂದ್ರನ ಮೇಲೆ ಹದ್ದಿನಂತೆ ನಿಷ್ಕರುಣೆಯಿಂದ ಎರಗಿದ. ಅವನ ತಪ್ಪುಗಳನ್ನು ಪಟ್ಟಿಮಾಡಿದ. ಆಶ್ರಮದ ನಿಯಮಕ್ಕೆ ವಿರೋಧವಾಗಿ ಹಂದಿಯನ್ನು ಬೇಟೆಯಾಡಿ ಪ್ರಾಣಿಹಿಂಸೆಮಾಡಿದ್ದೇಕೆ ? ತನ್ನ ಮುದ್ದುಗುವರಿಯರನ್ನು ಗೊತ್ತಿದ್ದೂ ಸಾಯಿಸದೆ ಬಡಿದುದೇಕೆ ? ಎಂದು ಪ್ರಶ್ನಿಸಿದ.

ಹರಿಶ್ಚಂದ್ರನಾದರೋ ಅತ್ಯಂತ ವಿನಯದಿಂದ ಸಮಾಧಾನಪಡಿಸಿದರೂ ಅವನ ಕೋಪ ತಗ್ಗುವುದಿಲ್ಲ. 'ನಿನ್ನ ಪರಿವಾರವೆಲ್ಲವನ್ನೂ ಕೊಂದು ಕೂಗಿಡಿಸಿ ಸುಟ್ಟು ಬೊಟ್ಟಿಡುವೆ' ನೆಂದು ಗರ್ಜಿಸಿದನು. ಇನ್ನು ವಿವರಿಸುವುದರಲ್ಲಿ ಅರ್ಥವಿಲ್ಲವೆಂದುಕೊಂಡ ಹರಿಶ್ಚಂದ್ರ, ತಾನು ಮಾಡದೆ ಇದ್ದ ತಪ್ಪುಗಳಿಗೆ ಕ್ಷಮೆಯಾಚಿಸಿ ಸಾಷ್ಟಾಂಗವೆರಗಿದ. ಕ್ಷಮಿಸಲು ಬೇಡಿದ. ವಿಶ್ವಾಮಿತ್ರನು ಕ್ಷಮಿಸಲು ಸಿದ್ಧನಾಗುತ್ತಾನೆ; ಆದರೆ ಒಂದು ಷರತ್ತಿನ ಮೇಲೆ. 'ಎನ್ನ ಕುಮಾರಿಯರ ಮದುವೆಯಾಗು, ಎಲ್ಲಾ ನಿರೋಧಮಂ ಬಿಡುವೆನ್'. ಇದು ಹರಿಶ್ಚಂದ್ರನಿಗೆ ನುಂಗಲಾರದ ತುತ್ತು; 'ಉತ್ತಮ ರವಿ ಕುಲದಲ್ಲಿ ಹುಟ್ಟಿ' ಚಂಡಾಲ ಹೆಣ್ಣುಗಳನ್ನು ಮದುವೆಯಾಗಿ ನರಕಕ್ಕೆ ಹೋಗಲು ತನಗಿಷ್ಟವಿಲ್ಲ' ವೆನ್ನುತ್ತಾನೆ. 'ಸತಿಯರ ಹೊಲೆಯರೆಂಬ ನೆವವೇಕೆ? ಅವರ ಹಡೆದೆನ್ನನೇ ಹೊಲೆಯನೆಂದಾಡು' ಎಂದು ವಿಶ್ವಾಮಿತ್ರ ಕೋಪಿಸುತ್ತಾನೆ. ಹರಿಶ್ಚಂದ್ರ ಅವನಿಗೆ ಸಮಾಧಾನಪಡಿಸುತ್ತಾನೆ. 'ಭಸಿತಧರನೆನಲು ರುದ್ರನಂ ಬೈದವನೆ? ಹೊಲೆಗೆರೆಯ ಜಲದ ನಡುವೆ ಬಿಂಬಿಸುವ ರವಿ ಹೊಲೆಯನೆ? ನಿಮ್ಮ ಹವಣ ರಿಯದಾಡಿದಿರಿ' ಎಂದು ಹೇಳುವ ಹರಿಶ್ಚಂದ್ರನ ಮಾತೇ ಅವನಿಗೆ ಹಿಂದಿರುಗುತ್ತವೆ. 'ವಿಶ್ವಾಮಿತ್ರ ಮುನಿ ಸುತೆಯರಂ ಹರಿಶ್ಚಂದ್ರ ರಾಯಂ ತಂದ ನೆಂಬೆಮಂದು ತೋಜಮಂ ಕೊಡಬೇಕು ಭೂಪ;ಕೈಮುಗಿದು ಬೇಡಿದೆನ್'ಎಂದು ಋಷಿ ಅಂಗಲಾಚುತ್ತಾನೆ. ಹರಿಶ್ಚಂದ್ರನಿಗೆ ಈ ಸುತ್ತು ಬಳಸಿನ ತರ್ಕದಿಂದ ರೋಸಿಹೋಗುತ್ತದೆ. ಬೇಸತ್ತು 'ಎಡೆವಿಡದೆ ಬೇಡಿ ಕಾಡುವಿರಾದೊಡೆ ಎನ್ನ ಸರ್ವರಾಜ್ಯವನಾದೊಡಂ ಕೊಡಹಡೆವೆನ್ನೈ : ಸಲ್ಲದೀ ಯೊಂದು ತೇಜಮಂ ಕೊಡೆ' ಎನ್ನುತ್ತಾನೆ. ಬೆರಳು ತೋರಿಸಿದರೆ ಸಾಕು, ಹಸ್ತವನ್ನು ನುಂಗುವ ಚತುರನಾದ ವಿಶ್ವಾಮಿತ್ರ ಕೂಡಲೆ, ''ತಥಾಸ್ತು! ಹಡೆದೆಂ, ಹಡೆದೆಂ, ಅವನೀಶ ರೊಡೆಯ! ದಾನಿಲಲಾಮ! ಸತ್ಯಾವತಂಸ!" ಎಂದು ಹೊಗಳಿ, ಹರಿಶ್ಚಂದ್ರ ನಂಥ ದಾನಿಯನ್ನು ಸತ್ಕರಿಸಲು ಆಶ್ರಮದಲ್ಲಿ ತಕ್ಕ ವ್ಯವಸ್ಥೆಗೆ ತೊಡಗಿದ. ಮಾತಿನ ರಭಸದಲ್ಲಿ ನುಸುಳಿಹೋದ ಒಂದು ಅಭಿಪ್ರಾಯವೇ ಹೊರತು 'ತಾನು ನಿಜವಾಗಿ ಸರ್ವರಾಜ್ಯವನ್ನು ಕೊಡಲಿಲ್ಲ' ವೆಂದ ಹರಿಶ್ಚಂದ್ರನನ್ನು ಮತ್ತೆ ತರ್ಕದಲ್ಲಿ ತೊಡಗಿಸಿ ಹಣ್ಣುಮಾಡಲು ವಿಶ್ವಾಮಿತ್ರ ಸಿದ್ಧನಾಗುತ್ತಾನೆ. ಇದರಿಂದ ಹತಾಶನಾದ ಹರಿಶ್ಚಂದ್ರ ದೃಢ ಮನಸ್ಸಿನಿಂದಲೇ ಧಾರೆಯೆರೆಯಲು ಸಿದ್ಧನಾಗುತ್ತಾನೆ. 'ನಿನಗೆ ರಾಜ್ಯದ ಮೇಲೆ ಮನವಿನಿತು ಘನವಾದಡಿದೆಕೋ ಕೊಟ್ಟೆ' ನೆಂದು ಧಾರೆಯೆರೆಯುತ್ತಾನೆ.

ವಿಶ್ವಾಮಿತ್ರನ ಶೋಷಣೆ ಇಲ್ಲಿಗೇ ಮುಗಿಯುವುದಿಲ್ಲ. ಕೊಟ್ಟ ದಾನವನ್ನು ಆತ ಹಿಂತೆಗೆದುಕೊಳ್ಳಲು ಮಾಡುವ ಹಂಚಿಕೆ ಹೂಡುತ್ತಾನೆ. ಆತನ ರಾಜಧಾನಿಗೆ ಕೊಂಡೊಯ್ದು ಸಕಲ ಸಂಪತ್ತಿನ ನಡುವೆ ನಿಲ್ಲಿಸಿ, 'ಈಗಲೂ ಅವಕಾಶವಿದೆ ; ಮಕ್ಕಳನ್ನು ಮದುವೆಯಾಗು ; ಎಲ್ಲವನ್ನೂ ಬಳುವಳಿಯಾಗಿ ಹಿಂದಿರುಗಿಸುತ್ತೇನೆ' ಎಂದು ಆಮಿಷವೊಡ್ಡುತ್ತಾನೆ. ಹರಿಶ್ಚಂದ್ರನ ನಿರ್ಧಾರ ಅಚಲವಾದುದೆಂಬುದು ಮನದಟ್ಟಾದ ಮೇಲೆ ಮತ್ತೊಂದು ತೊಡರನ್ನು ಮುಂದೊಡ್ಡುತ್ತಾನೆ. ಹಿಂದೆ ಬಹು ಸುವರ್ಣ ಯಾಗದಲ್ಲಿ ತನಗೆ ದಕ್ಷಿಣೆಯಾಗಿ ಕೊಟ್ಟಿದ್ದ ಹಣವನ್ನು ಹಿಂದಿರುಗಿಸಲು ಕೇಳುತ್ತಾನೆ. 'ಹೇರನೊಪ್ಪಿಸಿದವಂಗೆ ಸುಂಕವೆಲ್ಲಿಯದು' ? ಎಂದು ಹರಿಶ್ಚಂದ್ರ ಪ್ರಶ್ನಿಸಿದರೆ, 'ಪ್ರಾಣ ಹೋದರೂ ಸಾಲ ಹೋಗುವುದಿಲ್ಲ' ವೆಂದು ಹೇಳಿಕೊಟ್ಟು ಮುಂದಡಿಯಿಡಲು ಅಣೆಯಿಡುತ್ತಾನೆ. ಅವಧಿಯನ್ನು ನಿರ್ಣಯಿಸಿ ನಕ್ಷತ್ರಿಕನೆಂಬ ತೆರಕಾರನನ್ನು ಹಿಂದೆ ಕಳಿಸುತ್ತಾನೆ. 'ಸಪ್ತದ್ವೀಪವೆಲ್ಲವನು ಸೇರಿಸಿಕೊಂಡು ತನ್ನ ರಾಜ್ಯದ ಎಲ್ಲೆಯಲ್ಲಿ ಎಲ್ಲಿಯೂ ಬೇಡದೆ, ಸಂಪಾದಿಸದೆ ನಾಲ್ವತ್ತೆಂಟು ದಿನದೊಳಗಾಗಿ ಎಲ್ಲ ಹಣವನ್ನೂ ಈತನಿಗೆ ನಿರ್ಣಯಿಸಿ ಕೊಡುವುದು' ಎಂದು ಹೇಳಿ ಕಳಿಸುತ್ತಾನೆ.

ಪುರಜನರ ಶೋಕವನ್ನು ಹಿಂದಕ್ಕಿ ನಡೆದ ಹರಿಶ್ಚಂದ್ರನು ದಾರಿಯಲ್ಲಿ ದಾವಾಗ್ನಿಯಾಗಿ,ಬಿಸಿಲಾಗಿ, ಮಳೆಯಾಗಿ, ನಾನಾ ಮೃಗವಾಗಿ,ಭೂತ ಬೇತಾಳವಾಗಿ ಕಾಡುವ ವಿಶ್ವಾಮಿತ್ರನ ಕಷ್ಟಪರಂಪರೆಗಳನ್ನು ಎದುರಿಸಬೇಕಾಗುತ್ತದೆ. ಇವೆಲ್ಲವನ್ನೂ ನಿವಾರಿಸಿಕೊಂಡು ಕಾಶಿಪಟ್ಟಣವನ್ನು ಸೇರುತ್ತಾನೆ. ಈ ಊರು ವಿಶ್ವಾಮಿತ್ರನ ರಾಜ್ಯಕ್ಕೆ ಸೇರಿದುದಲ್ಲ. ಅಲ್ಲಿ ತನ್ನ ಹೆಂಡತಿ ಮಕ್ಕಳನ್ನು ಬ್ರಾಹ್ಮಣನೊಬ್ಬನಿಗೆ ಮಾರಿ ಬಂದ ಹಣವನ್ನು ನಕ್ಷತ್ರಿಕನಿಗೆ ಎಣಿಸುತ್ತಾನೆ. 'ಬಂದುದೇ ನಕ್ಷತ್ರನಾಮ ಮುನಿ' ? ಎಂದು ಹರಿಶ್ಚಂದ್ರ ಕೇಳಿದರೆ, ಆತ 'ಏನು ಬಂದುದು ? ನನ್ನ ಒತ್ತಾಯ ಬಂದುದು' ಎಂದು ಉತ್ತರಿಸಿದ. 'ಈತನಿನಿತರ್ಘಮಂ ಕೊಂಬುದುಚಿತವೆ ಹೇಳು ತಾತ ಪಕ್ಷೀಕರಿಸದೆ' ಎಂದು ಪಕ್ಕದಲ್ಲಿದ್ದ ಬ್ರಾಹ್ಮಣನನ್ನು ಕೇಳಿದ. ವಿಶ್ವಾಮಿತ್ರನ ಅಪೇಕ್ಷೆಯಂತೆ ಬ್ರಾಹ್ಮಣವೇಷ ತೊಟ್ಟು ಹರಿಶ್ಚಂದ್ರನ ಹೆಂಡತಿ ಮಕ್ಕಳನ್ನು ಕೊಳ್ಳಲು ಬಂದಿದ್ದ ಅಗ್ನಿದೇವನು, 'ಮಾತಂಗದುದ ದರ್ಥದ ಸಾಲವಂ ಬೇಡ ಬಂದವರಿಗಿನಿತು ಘನವೇ' ಎಂದು ನಕ್ಷತ್ರಿಕನನ್ನು ಸಮರ್ಥಿಸಿದ. ಓತಿಕೇತನಿಗೆ ಬೇಲಿ ಸಾಕ್ಷಿಯಾದಂತಾಯಿತು. ಮುನಿಸಿನಿಂದ ಮಾತಾಡಿದ ಹರಿಶ್ಚಂದ್ರನ ಮೇಲೆ ಸಿಟ್ಟಿಗೆದ್ದ

ಬ್ರಾಹ್ಮಣನು ಅವನ ಎದುರಿಗೇ ಚಂದ್ರಮತಿ ಲೋಹಿತಾಶ್ವರನ್ನು ಹೊಡೆದು ಮನೆಗೊಯ್ದ. ಸಾಲವನ್ನು ತೀರಿಸಲು ಉಳಿದಿದ್ದ ಮಾರ್ಗವೆಂದರೆ ತನ್ನನ್ನೇ ಮಾರಿಕೊಳ್ಳುವುದು. ಈ ನಿರ್ಧಾರಕ್ಕೆ ಬಂದ ಹರಿಶ್ಚಂದ್ರನು ಬೀದಿ ಬೀದಿಗಳಲ್ಲಿ ತನ್ನನ್ನು ಕೊಳ್ಳಬಲ್ಲ ಧನಿಕನಾಗಿ ಕೂಗಿ ಕರೆಯುತ್ತಾ ಅಲೆಯುತ್ತಾನೆ. ಬಹಳ ಹೊತ್ತು ಸುತ್ತಿದ ಮೇಲೆ ಆ ಊರಿನ ಸ್ಮಶಾನದ ಒಡೆಯನಾದ ಚಂಡಾಲ ಕುಲದ ವೀರಬಾಹು ಮುಂದೆ ಬರುತ್ತಾನೆ. ಮಾರುವುದಾದರೆ ತಾನು ಕೊಂಡು ಕೊಳ್ಳುವುದಾಗಿ ಹಡಪಿಗನಿಂದ ಕೇಳಿಸಿದ. ಯಮನೇ ವಿಶ್ವಾಮಿತ್ರ ಪ್ರೇರಣೆ ಯಿಂದ ಈ ವೇಷ ತೊಟ್ಟು ಬಂದಿರುತ್ತಾನೆ. ವೀರಬಾಹುವಿನ ಭಯಂಕರ ರೂಪು ಮತ್ತು ವೃತ್ತಿಗೆ ತಕ್ಕ ಸ್ವಭಾವವನ್ನು ಕವಿ ಕಣ್ಣಿಗೆ ಕಟ್ಟುವಂತೆ ಬಣ್ಣಿ ಸಿದ್ದಾನೆ :

ಪಿಡಿರ ಸಂಬಳಿಗೋಲುಕಾರೊಡಲು ಕೆಂಗಣ್ಣು
ಕುಡಿದು ಕೊಬ್ಬಿದ ಬಸುರು ದಡದಡನೆ ತರಹರಿಸು
ವಡಿಯ ಕೆದರಿದ ತಲೆಯನಡಸಿ ಸುತ್ತಿದ ಮುಪ್ಪುರಿಯ ಬಾರಿಕದ್ದಣಿಗೆಯ
ಬಿಡದೆ ಡಗ್ರನೆ ತೇಗಿ ನೆರವಿಯಂ ಬಯ್ವು ಬಿರು
ನುಡಿಯ ಕಲಿ ವೀರಬಾಹುಕ ಬರುತ್ತಂ ಮಾರು
ವಡೆಕೊಂಡು ಹೊಂಗೊಡುವೆ ನಾನೆಂದು ತನ್ನ ಹಡಪಿಗನಿಂದ ಕೇಳಿಸಿದನು.

ಹೊಲತಿಯರನ್ನು ಮದುವೆಯಾಗುವುದಿಲ್ಲವೆಂದ ರಾಜನನ್ನು ಚಂಡಾಲನ ಆಳಾಗಿಸುವ ವಿಶ್ವಾಮಿತ್ರ ವಿಧಿಯ ಆಣಕ ಇಲ್ಲಿ ಚೆನ್ನಾಗಿದೆ. ಹರಿಶ್ಚಂದ್ರನು ಮೊದಲು ಪ್ರತಿಭಟಿಸುತ್ತಾನೆ. ಬಳಿಕ ಯಾವ ದಾರಿಯೂ ಇಲ್ಲ, ಸಾಲದಿಂದ ಹಂಗಿಗನಾಗಿ ಉಳಿಯುವುದಕ್ಕಿಂತ ಚಂಡಾಲನ ಸೇವಕನಾಗಿ ಕೊಟ್ಟಮಾತನ್ನು ಉಳಿಸಿಕೊಳ್ಳಬೇಕೆಂದು ನಿರ್ಧರಿಸುತ್ತಾನೆ. ಇಲ್ಲಿ ಹೊಲೆತನವೆಂಬುದು ಮೈ ಗಂಟಿದ ಕೊಳೆಯಾಗಿರದೆ ಶೀಲಕ್ಕಂಟಿದ ಕಳಂಕವೆಂಬ ತತ್ವವನ್ನು ಕವಿ ಪ್ರತಿ ಪಾದಿಸಿದ್ದಾನೆ.

ಹರಿಶ್ಚಂದ್ರನು ಕೇಳಿದಷ್ಟು ಹಣ ಕೊಟ್ಟು ಅವನನ್ನು ಕೊಂಡುಕೊಂಡ ಬಳಿಕ ವೀರಬಾಹು ಅವನನ್ನು ಪರೀಕ್ಷಿಸುವ ಸಂದರ್ಭ ಮಾರ್ಮಿಕವಾಗಿದೆ. ಸುತ್ತಮುತ್ತ ಅಸಹ್ಯ ಭಯಂಕರದ ವಾತಾವರಣವನ್ನು ನಿರ್ಮಿಸಿಕೊಂಡು ಎಲುಬಿನ ಮಂಚದ ಮೇಲೆ ತೊಗಲ ಹಾಸಿಗೆಯಲ್ಲಿ ಕುಳಿತು ಹಸಿಯ ಮಾಂಸ ವನ್ನು ನರಕಪಾಲದಲ್ಲಿ ಮೆಲ್ಲುತ್ತಾ ಹರಿಶ್ಚಂದ್ರನ ಹೆಗಲ ಮೇಲೆ ವೀರಬಾಹು ಕಾಲು ಚಾಚಿದ. ಅಷ್ಟೂ ಸಾಲದೆಂಬಂತೆ ಆತನ ಉತ್ತಮ ಕುಲವನ್ನು ಶಂಕಿಸಿದ.

ಸತ್ಕುಲ ಪ್ರಸೂತನಾದರೆ ಈ ಹೊಲಸಿಗೆ ಏಕೆ ಕೊಕ್ಕರಿಸುವುದಿಲ್ಲ ? ಎಂಬುದು ಅವನ ಪ್ರಶ್ನೆ. ಹರಿಶ್ಚಂದ್ರನಾದರೋ ಒಡೆಯನಿಗೆ ವಿಧೇಯನಾಗಿರುವುದೇ ಸೇವಕ ಧರ್ಮವೆನ್ನುತ್ತಾನೆ. ಇವನ ದೃಢ ನಿಷ್ಠೆಯನ್ನು ಮೆಚ್ಚಿದ ವೀರಬಾಹು ನಾಡುಗಾಡನ್ನು ಕಾಯುವ ಕೆಲಸವನ್ನು ಒಪ್ಪಿಸುತ್ತಾನೆ. ಹರಿಶ್ಚಂದ್ರನಾದರೋ ಎಷ್ಟೋ ವರ್ಷದಿಂದ ಈ ಕೆಲಸ ಮಾಡುತ್ತಿರುವವನಷ್ಟು ಸಹಜವಾಗಿ ಒಗ್ಗಿ ಉತ್ಸಾಹದಿಂದ ಹೊರಟನು. ರಾಜನಾದವನು ಎಲ್ಲಿದ್ದರೂ ರಾಜನೇ ಎಂದು ಕವಿಯ ತೀರ್ಮಾನ :

ವರ ವಾರಣಾಸಿ ಮಧ್ಯವೆ ಲಾಳದೇಶವ
ಚ್ಚರಿಯ ಕಾಶೀಪುರವಯೋಧ್ಯೆ ಶ್ಮಶಾನ ಧರೆ
ಯರಮನೆ ಪ್ರೇತಗಾಹಿನ ತವಗ ಮಣಿ ಪೀಠ ಪರಿಣಾಮವಾರೋಗಣೆ
ಪರಮಧೃತಿ ಚತುರಂಗಸೇನೆ ಸಂಬಳಿಗೋಲು
ಕರವಾಳು ಸತ್ಯಭಂಡಾರ ಪತಿಯಾಜ್ಞೆ ಭಾ
ಸುರತರ ಕ್ಷೇತ್ರ ಧರ್ಮಾಂಗಳೆಂದೇ ಕಾಣುತಿರ್ದನು ಹರಿಶ್ಚಂದ್ರನು

ಇಲ್ಲಿ ಹರಿಶ್ಚಂದ್ರನ ಎಲ್ಲ ಗುಣಗಳಿಗೂ ಮಿಗಿಲಾದ ಸತ್ಯ ಸಂಪನ್ನತೆ ಮಹತ್ವವನ್ನು ಪಡೆಯುತ್ತದೆ. "ಅವನೀಗ ಸಮದರ್ಶಿ. ಅರಮನೆಯೋ, ಸ್ಮಶಾನವೋ ; ರಾಜ್ಯವೋ ಸುಡುಗಾಡೋ ಎಲ್ಲವೂ ಒಂದೇ. ಕರ್ಮ ಬೇರೆ ಯಾದರೂ ಮನೋಧರ್ಮ ಮಾತ್ರ ಒಂದೇ. ಇದು ಆತನ ಸಾಧನೆಯ ಶಿಖರ ; ಸಿದ್ಧಿಯ ಮುಂಬೆಳಗು." [1]

ಬೆಳಗಾಗುವ ಮುನ್ನ ಕತ್ತಲೆ ದಟ್ಟವಾಗುವುದಂತೆ. ಅದರಂತೆ ಹರಿಶ್ಚಂದ್ರನಿಗೆ ಶಿವ ಸಾಕ್ಷಾತ್ಕಾರವಾಗುವ ಮುನ್ನ ಕೊನೆಯ ಪರೀಕ್ಷೆ ಎದುರಾಗುತ್ತದೆ. ಹರಿಶ್ಚಂದ್ರನ ಸತಿಪುತ್ರರನ್ನು ಕೊಂಡಿದ್ದ ಬ್ರಾಹ್ಮಣನ ಮನೆಯಲ್ಲಿ ಅವರಿಗೆ ನರಕ ಸದೃಶ ಕಷ್ಟಗಳಿರುತ್ತವೆ :

ಒಡೆಯನತಿ ಕೋಪಿ ಹೆಂಡತಿ ಮಹಾಮೂರ್ಖೆ ಮಗ
ಕಡುಧೂರ್ತ ಸೊಸೆಯಾದಡಧಿಕ ನಿಷ್ಠುರೆ ಮನೆಯ
ನಡೆವವರು ದುರ್ಜನರು ನೆರೆಮನೆಯವರು ಮಿಥ್ಯವಾದಿಗಳು ಪಶುಗಳಗಡು
ಅಡಿಗಡಿಗೆ ಕೋಪಿಸುವ ಸಾಯೆಸದೆ ಬಡಿವ ಕಾ
ಳ್ಗಿಡೆವ ಕರಕಂಪ ಸೆಣಸುವ ತಪ್ಪ ಸಾಧಿಸುವ
ಕಡೆಯೊಡೆವ ಮಾರಿಗಾರದೆ ಸತ್ತು ಹುಟ್ಟುತಿಹರವನಿಪನ ಸತಿಪುತ್ರರು

ಒಂದೊಂದು ದಿನವೂ ಅವರ ಪಾಲಿಗೆ ಹೊಸಜನ್ಮವಿದ್ದಂತೆ. ಹೀಗಿರುವಾಗ ದರ್ಭೆ ಸಮಿತ್ತುಗಳನ್ನು ತರಲು ಕಾಡಿಗೆ ಹೋದ ಲೋಹಿತಾಶ್ವನು ಮನೆಗೆ ಹಿಂದಿರುಗಲಿಲ್ಲ. ಹಾವು ಕಚ್ಚಿ ಮರಣಿಸಿದನೆಂದು ಜೊತೆಯ ಹುಡುಗರು ಸುದ್ದಿ ತಂದರು. ಈ ಸಂದರ್ಭದಲ್ಲಿ ಕವಿಯು ಕರುಣರಸದ ಹೊಳೆಯನ್ನು ಹರಿಸಿದ್ದಾನೆ. ಲೋಹಿತಾಶ್ವನನ್ನು ನಿರೀಕ್ಷಿಸಿ ತವಕಿಸುತ್ತಿದ್ದ ಚಂದ್ರಮತಿಗೆ ಸುದ್ದಿ ತಿಳಿದಾಗ ಆಕಾಶವೇ ಕಳಚಿ ಬಿದ್ದಂತಾಗುತ್ತದೆ. ದಿಗ್ಭ್ರಮೆಯಲ್ಲಿಯೇ ಒಡೆಯನಲ್ಲಿಗೆ ಹೋಗಿ ಸುದ್ದಿ ತಿಳಿಸುತ್ತಾಳೆ. ಅಲ್ಲಿನ ಹೃದಯ ವಿದ್ರಾವಕ ಸನ್ನಿವೇಶವನ್ನು ಕವಿಯ ಮಾತಿನಲ್ಲಿಯೇ ಕೇಳಬಹುದು :

ನುಡಿಯಲರಿದೆನಿಸಿ ಮೋರೆಯ ಮಿಾರುವಳಲನ
ವಡಿಸಿ ಬಂದೊಡೆಯನಡಿಗಳ ಮೇಲೆ ಕೆಡೆದು ಬಾ
ಯ್ಬಿಡುತರಣ್ಯದೊಳೆನ್ನ ಮಗನುಗ್ರಕಾಳೋರಗಂ ಕಚ್ಚಿ ಮಡಿದನೆಂದು
ನುಡಿಯೆ 'ಲೇಸಾಯ್ತು ಮಡಿದರೆ ಮಡಿದ'ನೆಂದು ಕೆಡೆ
ನುಡಿಯೆ 'ಬಂಟರನು ಕೊಟ್ಟರಸಿಸೈ ತಂದೆ' ಎನೆ
'ನಡುವಿರುಳು ಬಂಟರುಂಟೇ ನಿದ್ದೆಗೆಯ್ಯ ಬೇಕೇಳು ಕಾಡದಿರೆಂ'ದನು
'ನರಿಗಳೆಳೆಯದ ಮುನ್ನ ದಹಿಸಬೇಡವೆ ತಂದೆ
ಕರುಣಿಸೆ'ನೆ 'ದುರ್ಮರಣವಟ್ಟ ಶೂದ್ರನನು ಸಂ
ಸ್ಕರಿಸುವವರಾವಲ್ಲ' ವೆಂದನ'ಲ್ಕಾನಾದಡಂ ಹೋಗಿ ಕಂಡು ಮಗನ
ಉರಿಗಿತ್ತು ಬಪ್ಪೆನೇ' ಎನೆ 'ಕೆಲಸಮಂ ಬಿಟ್ಟು
ಹರಿಯದಿರ್ದುವನೆಯ್ದೆಗೆಯ್ದು ಹೋಗೆ'ನಲು ಚ
ಚ್ಚರದಿ ಮಾಡುವ ಕಜ್ಜವೆಲ್ಲಮಂ ಮಾಡಿ ಹೊರವಂಟಳೊಯ್ಯನೆ ಮನೆಯನು

ಸ್ಮಶಾನಕ್ಕೆ ಶವವನ್ನು ತಂದು ಸುಡಹೋದರೆ ಶುಲ್ಕವನ್ನು ಕೊಡದೆ ಸುಡಬೇಡವೆಂದು ಕಾವಲುಗಾರ ತಡೆಯುತ್ತಾನೆ. ತಾಳಿಯನ್ನು ಮಾರಿಯಾದರೂ ಶ್ಮಶಾನದ ಹಾಗವನ್ನು ಒಪ್ಪಿಸಬೇಕೆನ್ನುತ್ತಾನೆ. ಪರಸ್ಪರರನ್ನು ಗೊತ್ತುಹಿಡಿಯದೆ ತಾಳಿಮಾರುವ ಸಂಗತಿಯನ್ನು ಮಾತಾಡುವ ಗಂಡಹೆಂಡಿರು ವಿಧಿಯ ಅಣಕದಂತಿದ್ದಾರೆ. ತನ್ನ ಪವಿತ್ರವಾದ ತಾಳಿಯನ್ನು ಚಂಡಾಲನೊಬ್ಬನು ಗುರುತಿಸಿದ್ದನ್ನು ಕೇಳಿ ತನ್ನ ಗಂಡನನ್ನು ನೆನಪಿಸಿಕೊಳ್ಳುತ್ತಾಳೆ ಚಂದ್ರಮತಿ ; ಬಾಯಿಬಿಟ್ಟು ತನ್ನ ಸತ್ತ ಮಗನನ್ನುದ್ದೇಶಿಸಿ 'ರವಿಕುಲದಲ್ಲಿ ಹುಟ್ಟಿದ ನಿನಗೆ ಸಾವಿನಲ್ಲಿ ಈ ಗತಿಯೇ' ಎಂದು ಹಲುಬುತ್ತಾಳೆ. ಈ ಮಾತನ್ನು ಕೇಳಿದೊಡನೆಯೇ ಹರಿಶ್ಚಂದ್ರನಿಗೆ ಆಗಿಹೋದ ಅನಾಹುತ ಮನಸ್ಸಿನಲ್ಲಿ ಮಿಂಚುತ್ತದೆ. ಆದರೂ ಚಂದ್ರಮತಿಯನ್ನು ಪರೀಕ್ಷಿಸುವವನಂತೆ

ತನ್ನ ಹೆಂಡಿರು ಮಕ್ಕಳನ್ನು ಈ ಸ್ಥಿತಿಗೆ ತಂದ ಹರಿಶ್ಚಂದ್ರನನ್ನು ನಿಂದಿಸುತ್ತಾನೆ. ಚಂದ್ರಮತಿ ಕಾವಲುಗಾರನ ಈ ಮಾತುಗಳನ್ನು ಒಪ್ಪಲಿಲ್ಲ. 'ಹರಿಶ್ಚಂದ್ರನಲ್ಲದೆ ತನಗೆ ಯಾರೂ ಗತಿಮತಿಯಿಲ್ಲ'ವೆನ್ನುತ್ತಾಳೆ. ಚಂದ್ರಮತಿಯ ಮಾತುಗಳು ಅವನ ಅಂತರಂಗವನ್ನು ಘಾಸಿಗೊಳಿಸುತ್ತವೆ. ಇಂತಹ ಸಾಧ್ವಿಗೆ ತಾನು ಮಾಡಿದ ಅನ್ಯಾಯಗಳನ್ನು ನೆನಸಿಕೊಂಡು ದುಃಖಿತಪ್ಪನಾಗುತ್ತಾನೆ :

ಉರುವಬಲೆಯುಚಿತ ವಚನಂ ಕರ್ಣಪಥದಿನೊಳ
ಗೆರೆಗಿ ಚಿತ್ತವನು ತೊತ್ತಳದುಳಿದು ಧೈರ್ಯಮಂ
ಬರಿಕೈದು ಕರಣಂಗಳಂ ಕದಡಿ ಹೆಮ್ಮೆಯಂ ಹರಿದಳಲನೊದೆದೆಬ್ಬಿಸಿ
ಮರುಕಮಂ ಮಸೆದು ಕಂಬನಿವೊನಲ ಕೋಡಿಯಂ
ಕೊರೆದು ಮತಿಗತಿ ಮಾಯೆಂಬಂ ತೋರಿ ವಿಾರಿ ನೇ
ಸರ ಕುಲಜನೋರಂತೆ ಸಿಗ್ಗಾಗಿ ತಾ ಮಾಡಿದಪರಾಧಮಂ ನೆನೆದನು

ಮೇಲಿನ ಪದ್ಯದಲ್ಲಿ ಹಂತಹಂತವಾಗಿ ಹರಿಶ್ಚಂದ್ರನ ಮನಸ್ಸಿನ ಮೇಲೆ ಅವಳ ಮಾತುಗಳು ಉಂಟುಮಾಡಿದ ಪರಿಣಾಮವನ್ನು ಕವಿ ರೂಪಕ ಭಾಷೆಯಲ್ಲಿ ಚಿತ್ರಿಸುತ್ತಾನೆ. ಬತ್ತಿದ ಕೆರೆಯು ತುಂಬಿ ನೀರು ಹರಿದು ಕೋಡಿ ಬೀಳುವ ಚಿತ್ರಕ್ಕೂ ಹರಿಶ್ಚಂದ್ರನ ಮನಸ್ಸಿನಲ್ಲಿ ದುಃಖ ಕ್ರಮೇಣ ಆವರಿಸಿ ತುಂಬಿ ಕಣ್ಣೀರಾಗಿ ಹರಿದ ಚಿತ್ರಕ್ಕೂ ಸೊಗಸಾದ ಸಾದೃಶ್ಯ ಉಂಟಾಗಿದೆ. ಮುಂದೆ ಪರಸ್ಪರರನ್ನು ಗುರುತಿಸಿಕೊಳ್ಳುತ್ತಾರೆ. ಸತ್ತ ಮಗನ ಶವ ಸಂಸ್ಕಾರ ಕೂಡಲೆ ಆಗಬೇಕಾದ ಕೆಲಸ. ಹಣವಿಲ್ಲದೆ ಸುಡುವಂತಿಲ್ಲ. ಸಂಪಾದಿಸಿ ತರಲು ಹೆಂಡತಿಯನ್ನೇ ಕಳಿಸುತ್ತಾನೆ ಹರಿಶ್ಚಂದ್ರ. ಸ್ಮಶಾನದ ತೆರವನ್ನು ಸಂಪಾದಿಸಿ ತರಲು ಚಂದ್ರಮತಿ ಪಟ್ಟಣಕ್ಕೆ ಹೋಗುತ್ತಿದ್ದಾಗ ವಿಶ್ವಾಮಿತ್ರನ ಮೋಸದ ಬಲೆಗೆ ಸಿಲುಕಿಕೊಳ್ಳುತ್ತಾಳೆ. ಕಾಶಿರಾಜನ ಮಗುವನ್ನು ಕೊಂದ ಸುಳ್ಳು ಅಪರಾಧ ಅವಳ ಕೊರಳನ್ನು ಸುತ್ತುತ್ತದೆ. ರಾಜನಿಗೆ ಇವಳು ಕೊಲೆಗಾರ್ತಿಯಲ್ಲವೆಂಬ ಸಂದೇಹ ಹುಟ್ಟುತ್ತದೆ. ಅಭಯ ಕೊಟ್ಟು ನಿಜ ಹೇಳಲು ಕೇಳುತ್ತಾನೆ. ಆದರೆ ಹತಾಶಳಾದ ಚಂದ್ರಮತಿಯೇ ತಾನು ಕೊಲೆಗಾರ್ತಿಯೆಂದು ವಾದ ಮಾಡುತ್ತಾಳೆ. ಈಗ ಬದುಕಿಗಿಂತ ಸಾವು ಮೇಲೆನಿಸಿರಬೇಕು ಅವಳಿಗೆ. ಸಾವು ತನ್ನನ್ನೇ ಅರಸಿ ಬಂದಿರುವಾಗ ಏಕೆ ಸಾಯಬಾರದು ? ಎಂಬುದೇ ಅವಳ ತರ್ಕ. ಸರಿ, 'ಕೊಂದವರನ್ನು ಕೊಂದು ಕಳೆವುದೆ ಧರ್ಮ'ವೆಂದ ರಾಜನ ಅಪ್ಪಣೆಯಂತೆ, ವಧಿಸುವ ಕೆಲಸ ಸ್ಮಶಾನದ ಒಡೆಯ

ವೀರಬಾಹುವಿಗೆ. ಆತ ಅದನ್ನು ಹರಿಶ್ಚಂದ್ರನಿಗೆ ಒಪ್ಪಿಸುತ್ತಾನೆ. ಸಾಯುವ ಮುನ್ನ ಚಂದ್ರಮತಿ ಪ್ರಾರ್ಥನೆ ಮಾಡುತ್ತಾಳೆ :

ಬಲಿದ ಪದ್ಮಾಸನಂ ಮುಗಿದಕ್ಷಿ ಮುಚ್ಚಿದಂ
ಜಲಿವೆರಸಿ ಗುರು ವಸಿಷ್ಠಂಗೆರಗಿ ಶಿವನ ನಿ
ರ್ಮಲ ರೂಪ ನೆನೆದು ಮೇಲಂ ತಿರುಗಿ ನೋಡಿ ಭೂಚಂದ್ರಾರ್ಕತಾರಂಬರಂ
ಕಲಿ ಹರಿಶ್ಚಂದ್ರರಾಯಂ ಸತ್ಯವೆರಸಿ ಬಾ
ಳಲಿ ಮಗಂ ಮುಕ್ತನಾಗಲಿ ಮಂತ್ರಿ ನೆನೆದುದಾ
ಗಲಿ ರಾಜ್ಯದೊಡೆಯ ವಿಶ್ವಾಮಿತ್ರ ನಿತ್ಯನಾಗಲಿ ಹರಕೆ ಹೊಡೆಯೆಂದಳು

ಇಲ್ಲಿಯವರೆಗೆ ತಾನು ವಧಿಸಲಿರುವ ಹೆಣ್ಣು ಯಾರು ? ಏನು ? ಎಂದು ಯೋಚಿಸದಿದ್ದ ಹರಿಶ್ಚಂದ್ರನು ಹರಕೆಯನ್ನು ಕೇಳಿ ಹವ್ವನೆ ಹಾರುತ್ತಾನೆ. 'ಹೋದಿರುಳು ಮಗನ ಸಾವನ್ನು ಕಂಡೆ ; ಈಗ ತಾನೇ ತನ್ನ ಸತಿಯನ್ನು ಕೊಲ್ಲುತ್ತಿದ್ದೇನೆ' ಎಂದು ಹಲುಬಿ ಮನಸ್ಸನ್ನು ದೃಢಪಡಿಸಿಕೊಂಡು ಒಡೆಯನ ಅಪ್ಪಣೆಯನ್ನು ನೆರವೇರಿಸಲು ಸಿದ್ಧನಾಗುತ್ತಾನೆ. ವಿಶ್ವಾಮಿತ್ರನು ಆಕಾಶ ದಲ್ಲಿ ಕಾಣಿಸಿಕೊಂಡು 'ಈಗಲೂ ಕಾಲ ಮಿಂಚಿಲ್ಲ ; ನನ್ನ ಮಕ್ಕಳನ್ನು ಮದುವೆ ಯಾಗು ; ಸತ್ತ ಮಗನನ್ನು ಬದುಕಿಸುತ್ತೇನೆ, ಸತಿ ಉಳಿಯುತ್ತಾಳೆ, ರಾಜ್ಯ ವನ್ನು ಹಿಂದಿರುಗಿಸುತ್ತೇನೆ' ಎಂದು ಪ್ರಲೋಭನೆಯನ್ನು ಮುಂದೊಡ್ಡು ತ್ತಾನೆ. ಹರಿಶ್ಚಂದ್ರ ಅವನ ಮಾತಿಗೆ ಒಪ್ಪದೆ 'ನಿಮ್ಮ ಹಿರಿಯತನಕೀ ಮಾತು ಯೋಗ್ಯವೆ' ? ಎಂದು ಪ್ರಶ್ನಿಸಿ ತನ್ನ ಸತ್ಯ ನಿಷ್ಠೆಯನ್ನು ನೆಮ್ಮಿ ಖಡ್ಗವನ್ನು ಬೀಸುತ್ತಾನೆ :

ಹೊಡೆದ ಕಡುಗದ ಬಾಯಕಡೆಯ ಹೊಡೆಗುಳನಾಂತು
ಮಡದಿಯೆಡೆಗೊರಳ ನಡುವಡಸಿ ಮೂಡಿದನು ಕೆಂ
ಜಡೆಯ ಶಶಿಕಳೆಯ ಸುರನದಿಯ ಬಿಸಿಗಣ್ಣ ಫಣಿಕುಂಡಲದ ಪಂಚಮುಖದ
ಎಡದ ಗಿರಿಜೆಯ ತಳಿತ ದಶಭುಜದ ಪುಲಿದೊಗಲ
ನುಡಿಗೆಯ ಮಹಾವಿಷ್ಣು ನಯನವೇರಿಸಿದ ಮೆ
ಲ್ಲಡಿಯ ಕಾಶೀರಮಣ ವಿಶ್ವನಾಥಂ ಸುರರ ನೆರವಿಜಯಜಯವೆನುತಿರೆ

ಶಿವನೇ ಬಂದಮೇಲೆ ಸಕಲ ದೇವದೇವತೆಗಳೂ ಬಂದರು ; ಋಷಿಮುನಿಗಳೂ ಬಂದರು, ವಸಿಷ್ಠ ವಿಶ್ವಾಮಿತ್ರರು ಜೊತೆಗೂಡಿ ಬಂದರು.

ಕುಡಿದೌಷಧಂ ಬಾಯ್ಗೆ ನಿಗ್ರಹಂ ಮಾಡಿ ತಾ
ಳ್ದೊಡಲಿಂಗೆ ಸುಖವನೀವಂತೆ ಲೋಕದ ಕಣ್ಗೆ
ಕಡು ಮುಳಿದರಂತೆ ತೋರಿಸಿ ಸತ್ಯಶುದ್ಧವಪ್ಪನ್ನೆಗಂ ಕಾಡಿ ನೋಡಿ
ಕಡೆಯೊಳು ಹರಿಶ್ಚಂದ್ರರಾಯಂಗೆ ಗಣವೆರಸಿ
ಮೃಡನನೆಳತಂದಿತ್ತು ಕೀರ್ತಿಯಂ ಮೂಜಗದ
ಕಡೆಗೆ ಹರಹಿದ ಮುನಿವರೇಣ್ಯ ವಿಶ್ವಾಮಿತ್ರ ಬಂದನು ವಸಿಷ್ಠ ಸಹಿತ

ಇಲ್ಲಿ ಕವಿ ವಿಶ್ವಾಮಿತ್ರನನ್ನು 'ಮುನಿವರೇಣ್ಯ' ಎಂದು ಕೊಂಡಾಡಿದ್ದಾನೆ. ವಸಿಷ್ಠ ಸಹಿತ ಬಂದನೆಂಬುದರಲ್ಲಿ ಇಬ್ಬರಿಗೂ ಹರಿಶ್ಚಂದ್ರನನ್ನು ಕುರಿತು ಇದ್ದ ಪ್ರೇಮವೇ ವ್ಯಕ್ತವಾಗುತ್ತದೆ. ಮೇಲುನೋಟಕ್ಕೆ ವಿಶ್ವಾಮಿತ್ರ ಖಳ ನಾಯಕನಂತೆ ಕಾಣುತ್ತಾನೆ. "ಸಾಮಾನ್ಯ ಕಿವಿಗೆ ಕಾವ್ಯದ ತುಂಬಾ ಕೇಳಿಸು ವುದು ವಿಶ್ವಾಮಿತ್ರನ ಕಾಟದ ಬಿರುಗಾಳಿಯು ಭೋರ್ಗರೆಯುವ ರವ ; ಆದರೆ ಎಲ್ಲರಿಗೂ ಆ ಬಿರುಗಾಳಿಯ ಹೃದಯದಲ್ಲಿ ಸುಪ್ತವಾಗಿರುವ ಶಿವದ ಬೆಳಕು ಸುಲಭವಾಗಿ ಕಾಣಿಸದು".[2] ಹೊರನೋಟಕ್ಕೆ ಕಾಡಿ ರೋಡಾಡಿದರೂ ಹರಿಶ್ಚಂದ್ರನ ಸತ್ಯ ಉಳಿಯಲು ಸಹಕಾರಿಯಾದವನೂ ವಿಶ್ವಾಮಿತ್ರನೇ. ಅಗ್ನಿಯ ಮೂಲಕ ಹರಿಶ್ಚಂದ್ರನ ಸತಿಸುತರನ್ನೂ ಯಮನ ಮೂಲಕ ಹರಿಶ್ಚಂದ್ರನನ್ನೂ ಕೊಳ್ಳಲು ವ್ಯವಸ್ಥೆ ಮಾಡಿದವನು ವಿಶ್ವಾಮಿತ್ರ. "ಹೀಗೆ ಕೊಲಲೆತ್ತಿದ ಕೈಯೇ, ಕಾಯಲೂ ಚಾಚಿದೆ! ನಮಗೆ ಹೊರಗಣ್ಣಿಗೆ ಕಾಣುವುದು ಕಾಡುವ ಕೈ ಮಾತ್ರ ; ಕಾಪಾಡುವ ಕೈ ಗುಪ್ತಗಾಮಿನಿಯಾಗಿ ಸರ್ವದಾ ಹರಿಶ್ಚಂದ್ರನ ಹಿತಚಿಂತನೆಯಲ್ಲಿ ತೊಡಗಿದೆ."[3] ಮುಂದೆ ಶಿವನ ಅಪ್ಪಣೆಯಂತೆ ಲೋಹಿತಾಶ್ವನನ್ನು ಬದುಕಿಸಿ ಸರ್ವ ರಾಜ್ಯವನ್ನೂ ಹಿಂದಿರುಗಿಸಿ ತನ್ನ ಅರ್ಧ ತಪಸ್ಸನ್ನು ಸಂತೋಷದಿಂದ ಹರಿಶ್ಚಂದ್ರನಿಗೆ ಧಾರೆಯೆರೆದು ಕೊಡುತ್ತಾನೆ ವಿಶ್ವಾಮಿತ್ರ. ಈ ಪುಣ್ಯ ಕಥೆ ಮೂರು ಲೋಕಗಳಲ್ಲಿಯೂ ಹಬ್ಬಿತಂತೆ. ಎಲ್ಲೆಲ್ಲಿಯೂ ಹರಿಶ್ಚಂದ್ರನ ವಿಚಾರವೇ ಕೇಳಿಬರುತ್ತಿತ್ತಂತೆ. ಈ ಕಥೆಯನ್ನು ಕೇಳಿದ ಓದುಗರಿಗೂ ಏಳು ಜನ್ಮದ ಪಾಪ ನಾಶವಾಗುತ್ತದೆ ಯೆನ್ನುತ್ತಾನೆ ಕವಿ :

ಅನೃತವರಿಯದ ಹೊಲೆಯನಂ ನೆನೆಯೆ ಪುಣ್ಯವೆಂ
ದೆನೆ ಸೂರ್ಯ ಕುಲಜ ಕಲಿದಾನಿ ಸತ್ಯಂ ವಸಿ
ಷ್ಠನ ಶಿಷ್ಯನಧಿಕ ಶೈವಂ ಕಾಶಿಯೋಳ್ ಮೆರೆದ ವೇದ ಪ್ರಮಾಣ ಪುರುಷ
ಘನನೃಪ ಹರಿಶ್ಚಂದ್ರನೆಂದಡಾತನ ಪೊಗಳ್ದು
ಜನ ಬದುಕಬೇಕೆಂದು ಕಾವ್ಯಮುಖದಿಂ ಪೇಳ್ದ
ನನಪೇಕ್ಷೆಯಿಂದ ಕವಿ ರಾಘವಾಂಕಂ ಮಹಾಲಿಂಗಭಕ್ತರ ಭಕ್ತನು

ಹರಿಶ್ಚಂದ್ರ ಕಾವ್ಯವು ಕನ್ನಡದ ಶ್ರೇಷ್ಠ ಕಾವ್ಯಗಳಲ್ಲಿ ಒಂದೆಂದೂ ಅಲ್ಲಿ ರಾಘವಾಂಕನು ತೋರ್ಪಡಿಸಿರುವ ನಾಟ್ಯ ಪ್ರತಿಭೆ ಮೇಲ್ತರಗತಿಯದೆಂದೂ ಕನ್ನಡದ ಬಹುಪಾಲು ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಈಗ ನಾವು ಮಾಡಿಕೊಟ್ಟಿರುವ ಕಾವ್ಯ ಪರಿಚಯವೂ ಈ ಮಾತನ್ನು ಸಮರ್ಥಿಸುತ್ತಿದೆ. ಹೀಗೆ ಹೇಳಿಯೂ ರಾಘವಾಂಕನ ಕೊರತೆಗಳನ್ನು ಗಮನಿಸದಿರುವಂತಿಲ್ಲ. ಪಾತ್ರ ರಚನೆಯಲ್ಲಿ ಆವೇಶಪರತೆಯಿದೆ. ವಿಶ್ವಾಮಿತ್ರನ ಪಾತ್ರ ಅದರ ಮೂಲ ಗುಣಕ್ಕೆ ತಕ್ಕಂತೆ ಅರಳುತ್ತದೆ. ಆದರೆ ಹರಿಶ್ಚಂದ್ರನ ಮಾತು ಮತ್ತು ನಡೆಗಳು ಅಲ್ಲಲ್ಲಿ ವಿರೋಧಾಭಾಸಕ್ಕೆಡೆಗೊಟ್ಟಿವೆ. ಹುಟ್ಟಿನಿಂದ ಯೋಗ್ಯತೆಯನ್ನಳೆಯಬಾರದೆನ್ನುವ ಕವಿಯ ಮಾತುಗಳೇ ಕಾವ್ಯದಲ್ಲಿ ಚೆನ್ನಾಗಿ ಸಾಕ್ಷಾತ್ಕಾರಗೊಂಡಿಲ್ಲವೆನ್ನಿಸುತ್ತದೆ. ಸಂವಾದದ ತರ್ಕ ಒಮ್ಮೊಮ್ಮೆ ಅತಿರೇಕದ ಆಭಾಸಕ್ಕೆ ತಿರುಗುತ್ತದೆ. ಒಟ್ಟಾರೆ ಹರಿಶ್ಚಂದ್ರನ ಪಾತ್ರಕಲ್ಪನೆಯೇ ಇನ್ನು ಹೆಚ್ಚು ವ್ಯಾಪಕವಾಗಿ ಸಮಗ್ರವಾಗಿ ರೂಪುಗೊಳ್ಳಬಹುದಿತ್ತು. 'ಸುಳ್ಳು ಹೇಳದಿರುವುದೇ ಸತ್ಯ' ಎಂಬಷ್ಟಕ್ಕೇ ತಾತ್ವಿಕವಾಗಿ ಆತ ಅಂಟಿಕೊಂಡಿದ್ದಾನೆ. ಇದು ಸತ್ಯದ ಅಸಮಗ್ರ ಪರಿಚಯವಾದೀತು. ಆದರೆ ಇಂಥ ಕೆಲವು ಕೊರತೆಗಳು ವಾಚಾಳಿಯಾದ ರಾಘವಾಂಕನಲ್ಲಿ ಬರುತ್ತವೆಯೆಂದು ಇಡೀ ಕಾವ್ಯವೇ ಅರ್ಥಹೀನವಾಗುವುದಿಲ್ಲ. ಆತನಿಗೂ ಮನುಷ್ಯ ಸಹಜವಾದ ಅರಕೆಗಳಿವೆಯೆಂಬುದು ಗೊತ್ತು :

ನಡೆವರೆಡಹದೆ ಕುಳಿತರೆಡಹುವರೆ ಕಾವ್ಯಮಂ
ನಡಸುವಾತಂ ರಸಾವೇಶ ಮರಹಾಲಸ್ಯ
ವೆಡೆಗೊಳಲು ತಪ್ಪುಗಲ್ಲದೆ ಕಾವ್ಯ ಕರ್ತೃ ತಪ್ಪುವನೆ ಒಂದೆರಡೆಡೆಯೊಳು
ಎಡೆವಾಯ್ದು ಬಂದ ತಪ್ಪಂ ಹಿಡಿದು ಸಾಧಿಸದೆ
ಕಡೆತನಕ ಬಂದ ಲೇಸಿಂಗೆ ತಲೆದೂಗೆ ತಲೆ
ಯೊಡೆವುದೇ ಬೇನೆಯರಿಯದ ನೀರಸರನೇಕೆ ಪುಟ್ಟಿಸಿದನಬುಜಭವನು

ಹರಿಶ್ಚಂದ್ರ ಕಾವ್ಯ ರಾಘವಾಂಕನ ಬಹು ದೊಡ್ಡ ಸಾಧನೆ. ಆತನ ಮತೀಯವಾದ ಸಮಯಾಚಾರ ನಿಷ್ಠೆಗೆ ಹೊರತಾದುದು. ಭಾರತೀಯ ಸಾಹಿತ್ಯದಲ್ಲಿಯೇ ಯಾವುದೇ ಭಾಷೆಯಲ್ಲಿ ಹರಿಶ್ಚಂದ್ರನ ಕಥೆ ಮಹಾಕಾವ್ಯರೂಪದಲ್ಲಿ ಬಂದಿಲ್ಲವೆಂದು ವಿದ್ವಾಂಸರು ಹೇಳುತ್ತಾರೆ. ಆದುದರಿಂದ 'ಎಡೆವಾಯ್ದು ಬಂದ ತಪ್ಪಂಹಿಡಿದು ಸಾಧಿಸದೆ ಕಡೆತನಕ ಬಂದ ಲೇಸಿಂಗೆ ತಲೆದೂಗಿ' ಮುಂದೆ ಸಾಗಬಹುದು.

## 4

ಓರುಂಗಲ್ಲಿನ ಪ್ರತಾಪರುದ್ರನ ಸಭೆಗೆ ಏಕಸಂಧಿ, ದ್ವಿಸಂಧಿ, ತ್ರಿಸಂಧಿಗಳೆಂಬ ಮೂವರು ಕುಕವಿಗಳು ಬಂದರಂತೆ. ಬೇರೆ ಕವಿಗಳ ಕಾವ್ಯವನ್ನು ಓದಿಸಿ ಕೇಳಿ ತಮ್ಮ ಅಸಾಧಾರಣ ನೆನಪಿನ ಶಕ್ತಿಯಿಂದ ಪುನಃ ಅದನ್ನು ಉಚ್ಚರಿಸಿ ಇದರಲ್ಲಿ ಹೊಸತೇನಿದೆ ? ಎಂದು ಅಪಮಾನಿಸುತ್ತಿದ್ದರು. ರಾಜನ ಬೇಡಿಕೆಯನ್ನು ಮನ್ನಿಸಿ ರಾಘವಾಂಕನು ಅಲ್ಲಿಗೆ ಹೋಗಿ ಉದ್ದಂಡ ಷಟ್ಪದಿಯಲ್ಲಿ 'ವೀರೇಶ ಚರಿತೆ'ಯೆಂಬ 'ಮಿಾಸಲು ಗವಿತೆ'ಯನ್ನು ಓದಿ ಕುಕವಿಗಳನ್ನು ಸೋಲಿಸಿದ. ರಾಜನ 'ಕನಕ ಸ್ನಾನ' ಮುಂತಾದ ಮನ್ನಣೆಗಳನ್ನು ಸ್ವೀಕರಿಸದೆ ಹಂಪೆಗೆ ಹಿಂದಿರುಗುತ್ತಿದ್ದಾಗ ದಾರಿಯಲ್ಲಿ ಅವನಿಂದ ಅಪಮಾನಿತರಾದ ಕುಕವಿಗಳು ಕೊಲ್ಲಲೆತ್ನಿಸಿದರಂತೆ. ಇಲ್ಲಿಯೂ ಅವರಿಗೆ ಸೋಲು ಇದಿರಾಯಿತು. ಹೀಗೆ ಒಂದು ದಂತ ಕಥೆಯಿದೆ. 'ವೀರೇಶ ಚರಿತೆ'ಯ ರಚನೆಯ ಹಿನ್ನೆಲೆಯನ್ನು ಕುರಿತು.

'ವೀರೇಶ ಚರಿತೆ' ರಾಘವಾಂಕನ ಕಾವ್ಯಗಳಲ್ಲೆಲ್ಲಾ ಅತಿ ಚಿಕ್ಕ ಕಾವ್ಯ. ವಸ್ತು ಪ್ರಸಿದ್ಧವಾದ ದಕ್ಷಾಧ್ವರದ ಕಥೆ. ಸ್ಕಾಂದ ಪುರಾಣ, ಶಿವ ಪುರಾಣ, ವಾಯುವೀಯ ಸಂಹಿತೆ, ಲಿಂಗ ಪುರಾಣ ಮುಂತಾದ ಪ್ರಾಚೀನ ಮೂಲಗಳಿಂದ ಪಡೆದ ಈ ವಸ್ತುವನ್ನು ಬಳಸಿ ಹರಿಹರನು 'ವೀರಭದ್ರ ದೇವರ ರಗಳೆ'ಯನ್ನು ರಚಿಸಿದ್ದಾನೆ. ರಾಘವಾಂಕನಿಗೆ ಈ ರಗಳೆಯೇ ಪ್ರೇರಣೆಯನ್ನು ನೀಡಿದೆ. ಅಲ್ಲಲ್ಲಿ ವ್ಯತ್ಯಾಸಗೊಳಿಸಿಕೊಂಡಿದ್ದಾನೆ.

ಭೂಮಂಡಲದ ಸಮಸ್ತ ರಾಜರಿಂದಲೂ ನಮಸ್ಕರಿಸಲ್ಪಟ್ಟು ಬ್ರಹ್ಮ ವಿಷ್ಣು ಮೊದಲಾದ ದೇವತೆಗಳಿಂದಲೂ ಮನ್ನಣೆ ಪಡೆದ ದಕ್ಷಬ್ರಹ್ಮನಿಗೆ ತನ್ನ ಅಳಿಯನೇ ಆದ ಶಿವನಿಂದ ನಮಸ್ಕಾರ ಹೊಂದಬೇಕೆಂಬ ಆಸೆಯಾಗುತ್ತದೆ. ಇದೊಂದು ವಿಚಿತ್ರ ಆಸೆ. ಆದರೆ ಈ ಆಸೆ ಅವನ ವಿನಾಶಕ್ಕೇ ಕಾರಣವಾಗುವುದೆಂಬ ಆಲೋಚನೆ ಅವನಿಗೆ ಹೊಳೆದಿರಲಿಲ್ಲ. ದಕ್ಷಬ್ರಹ್ಮನ ಈ ದುರಾಸೆಯನ್ನು ಕವಿ 'ಕೆಂಡದ ತೊಡಿಗೆಗೆ ಮನವಿಟ್ಟರಗಿನ ಪುತ್ಥಳಿಯೆಂತಂತೆ' ಎಂದು ಕನಿಕರಿಸಿದ್ದಾನೆ. ಶಿವ ದಕ್ಷನ ಆಸೆಯಲ್ಲಿರುವ ಅಹಂಕಾರದ ವಾಸನೆಯನ್ನು ಗುರುತಿಸಿದ. ತನ್ನ ಸಭೆಗೆ ಬಂದಾಗ ಅವನತ್ತ ತಿರುಗಿಯೂ ನೋಡಲಿಲ್ಲ. ಇದರಿಂದ ಅಪಮಾನಿತನಾದ ದಕ್ಷ ಮಗಳಾದ ದಾಕ್ಷಾಯಿಣಿಯನ್ನು ನೋಡಿದ. ಗಂಡ ತಿರಸ್ಕರಿಸಿದವನನ್ನು ತಾನು ಪುರಸ್ಕರಿಸಬಾರದೆಂಬಂತೆ

ಆಕೆಯೂ ಅವನತ್ತ ನೋಡಲಿಲ್ಲ. ಕೋಪಾತಿರೇಕದಿಂದ ಬುದ್ಧಿಗೇಡಿಯಾದ ದಕ್ಷನು ತನ್ನ ಪಟ್ಟಣಕ್ಕೆ ಮರಳಿದೊಡನೆಯೇ ಪ್ರತೀಕಾರಕ್ಕೆ ಹಾತೊರೆದ. ಆಪ್ತಾಲೋಚನೆಗಾಗಿ ಮಂತ್ರಿಯನ್ನು ಕರೆಸಿದ. 'ರುದ್ರನ ಸರ್ವೇಶತ್ವವ ನೆಸಗಿತ್ತಾತಂಗೆ ಪರಿಭವವಂ ಕುಡಬಲ್ಲ ಮಹಾಯಾಗ'ಕ್ಕೆ ತೊಡಗಿದ. ಮಂತ್ರಿ ಎಚ್ಚರಿಸಿದರೂ ಲೆಕ್ಕಿಸಲಿಲ್ಲ. ಯಾಗಕ್ಕೆ ಮುನಿಗಳನ್ನು ಸುಳ್ಳು ಹೇಳಿ ಕರೆಸಿದ. ಸಕಲ ದೇವತೆಗಳೂ ಬಂದರು. ದಧೀಚಿ ಮುನಿಯೊಬ್ಬ ಬಂದಿರಲಿಲ್ಲ. ಆತನನ್ನು ಕರೆತರಲು ಚಾರರು ನಡೆದರು. ಪಂಪಾಕ್ಷೇತ್ರದಲ್ಲಿದ್ದ ಆತನ ಆಶ್ರಮವನ್ನು ಹೊಕ್ಕು ಸುದ್ದಿಯನ್ನು ತಿಳಿಸಿದ ತಕ್ಷಣವೇ 'ಶಿವ ಬಂದಿದ್ದಾನೆಯೋ' ಎಂದು ಕೇಳಿದನು ದಧೀಚಿ. 'ಅರಿದೆನ್ನದೆ ಎಲ್ಲಾ ಬಂದರೆ' ಎನ್ನಲು ತನ್ನ ಇಷ್ಟ ದೈವವನ್ನು ನೋಡುವ ತವಕದಿಂದ ಯಾಗಕ್ಕೆ ಬರುತ್ತಾನೆ. ಆದರೆ ಅಲ್ಲಿ ಶಿವನಿಲ್ಲ. ಕಾತರದಿಂದ ದಧೀಚಿ ಶಿವನನ್ನು ಹುಡುಕುವ ಪರಿ ತುಂಬಾ ಸೊಗಸಾಗಿದೆ.

ಕಡುತವಕದೊಳ ಗ್ರಾಸನದೊಳು ವೇದಂಗಳ
ನಡುನೆತ್ತಿಯೊಳೆಲ್ಲಾ ದೇವರ ಮಕುಟಂಗಳ
ಕುಡಿಯೊಳು ಮಂತ್ರಂಗಳ ಮಸ್ತಕದೊಳು ಕಾಣದೆ ಮರುಗುತೆ ತಿರುಗಿ
ಜಡೆಗಳ ತಳ್ತವರೊಳು ಕುಂಡಲವುಳ್ಳವರೊಳು
ತೊಡಿಗೆಗಳೆಸೆವವರೊಳು ಹೆಗ್ಗುರುಹಿನ ಹೆಮ್ಮೆಗ
ಳೊಡೆಯನ ಕಾಣದೆ ಸುಟ್ಟಿರುಹುವೆನೀ ಯಾಗವನೆಂದುರೆ ಪಟಪಟಿಸಿದನು

ದಕ್ಷನನ್ನು ಕರೆದು ವಿಚಾರಿಸಿದರೆ ಉದಾಸೀನದ ಉತ್ತರ ಬಂದಿತು. ಬುದ್ಧಿ ಹೇಳಹೋದರೆ ಶಿವನನ್ನು ವಾಚಾಮಗೋಚರವಾಗಿ ನಿಂದಿಸಿದ. ತನ್ನ ದೇವರ ನಿಂದೆಯನ್ನು ಕೇಳಿದ ದಧೀಚಿಗೆ ಉಗ್ರವಾದ ಕೋಪ ಬಂದಿತು :

ಕಿಡಿಗೆದರಲು ಕಣ್ಣುರಿಗೆದರಲು ಬಿರುಸೆನಿಸುವ
ನುಡಿ ಹೊಗರಿಡೆ ಮೊಗ ನಡುಗಲು ಕೈಯಲುಗಲು ಪು
ರ್ಬಿಡಿ ತುಂಬಿಡೆ ಮಿಸುವಧರಂ ಸಿಡಿಯಲ್ ಪೂಸಿತ ಭಸಿತಂ ಭೂಮುವನನುಕರಿಸೆ
ಹಿಡಿದ ಕಮಂಡಲು ಜಲ ಕುದಿಯಲು ರೋಮಂ ಕಾ
ರಿಡೆ ಲಾಕುಳ ಹೊಗೆಯಲು ಭರ್ಗನ ಭಾಳಾಕ್ಷನ
ಜಡೆ ಪೊತ್ತವರೊಡೆಯನ ನಿಂದೆಗೆ ಮುನಿ ಮುನಿದಿಂತೆಂದಂ ಸಭೆ ಕಂಪಿಸಲು

ಶಿವನನ್ನು ವಂಚಿಸಿ ಯಾಗಕ್ಕೆ ಬಂದಿದ್ದ ದೇವ ದೇವತೆಗಳನ್ನು ಮುನಿವರರನ್ನು ಶಪಿಸಿ ಕಂಗಾಲುಮಾಡಿದ ದಧೀಚಿಯನ್ನು ಅನುಸರಿಸಿ ಕೂಡಲೆ ಯಾಗವನ್ನು

ತೊರೆದುಬಿಟ್ಟರು ಋಷಿಗಳು. ನಾರದ ಮುನಿ ಶಿವನ ಸಭೆಗೂ ವಾರ್ತೆಯನ್ನು ಮುಟ್ಟಿಸಿದ. ದಧೀಚಿಯ ಭಕ್ತಿ ಶಿವನಿಗೆ ಪ್ರಿಯವಾಯಿತು. ದಾಕ್ಷಾಯಿಣಿ ತನ್ನ ತಂದೆಗೆ ಬುದ್ಧಿ ಗಲಿಸಲು ಕೂಡಲೆ ತೆರಳಿದರು. ಮಗಳನ್ನು ನೋಡಿದರೂ ನೋಡದಂತೆ ತಿರುಗಿದ ದಕ್ಷ. ಸಾಲದೆ ಶಿವನನ್ನು ನಿಂದಿಸಿದ. ಅಪಮಾನಿತಳಾದ ದಾಕ್ಷಾಯಿಣಿ ಯಜ್ಞ ಕುಂಡದಲ್ಲಿ ಧುಮುಕಿ ಪ್ರಾಣಬಿಟ್ಟಳು. ಸೂಕ್ಷ್ಮ ಶರೀರಿಯಾಗಿ ಬಂದು ನಡೆದ ಸಂಗತಿಯನ್ನು ಹೇಳಿದಾಗ ಶಿವ ಕಿಡಿ ಕಿಡಿಯಾದ.

ಕಡೆಗಾಲದ ಕಿಚ್ಚಿನ ಮುಚ್ಚುಳ್ದೆಗೆದಂದದೆ
ಘುಡಿಘುಡಿಸುವ ನಡುಗಣ್ಣವೆಯೋಡೆಯಲ್ ತೊಂಗ
ಲ್ಗಿಡಿ ಕೆದರುತ್ತುಕ್ಕಿದ ದಳ್ಳುರಿ ಗಗನವ ತೀವಲು ಬಿರುವಿಸಿಯಂ ಕಾದು
ಜೆಡೆಯೊಳ್ ಗಂಗೆಯು ಮಡುವುಕ್ಕುತ್ತಸರಿಡೆ ಹೊಗ
ಲೆಡೆಗಾಣದೆ ಸಸಿ ಬೆವರಿಳಿದುರೆ ಚುಯ್ಯೆನೆ ದನಿ
ಗೊಡುವ ಸುಧಾ ಬಿಂದುವಿನೊತ್ತುವಿಡಿದ ನೆಲೆವೇ ವೀರ ಕುಲಾಧೀಶ್ವರನು

ಹೀಗೆ ಹುಟ್ಟಿದ ವೀರಭದ್ರನು ಭವ್ಯರೂಪನಾಗಿ ಧುಮಿಕಿದಾಗ ಭಾರಕ್ಕೆ ಭೂಮಿಯು ಬಿರಿಯಿತು. ಆದಿಶೇಷನ ಹೆಡೆ ಮುರಿಯಿತು. ಕಮಡನ ಬೆನ್ನು ಪುಡಿ ಪುಡಿಯಾಯಿತು. ತ್ರಿಲೋಕ ವ್ಯಾಪಿಯಾಗಿ ನಿಂತ ತನ್ನ ಮಗನನ್ನು ಕಂಡು ಶಿವನೇ ಬೆರಗಾದ. ‘ನಾನೇಕೆ ಕೋಪಿಸಿದೆ ? ಇವನೇಕೆ ಹುಟ್ಟಿದ’ ? ಎಂದು ಅಚ್ಚರಿಪಟ್ಟ. ‘ಹೋ ಹೋ ಸೈರಿಸು ಬಿಡು ಬಿಡು ಕೋಪವನು ಜಗತ್ತ್ರಯವನೀ ಬಡಲೋಕಂಗಳನೆಡೆಗೆಡಿಸದಿರು’ ಎಂದು ಅಪ್ಪಣೆಮಾಡಿದ. ಆಗ ವೀರಭದ್ರನು ಕಣ್ಣಿಗೆ ಅಳವಡುವ ರೂಪುಧರಿಸಿ ಮುಂದೆ ನಿಂತ. ದಕ್ಷನ ಮೇಲೆ ಯುದ್ಧಕ್ಕೆ ಹೊರಟ ತನ್ನ ಮಗನಿಗೆ ಒಂದು ಆಯುಧವನ್ನು ಮಾಡಿದ ನಂತೆ ಶಿವ. ಅದರ ಕಲ್ಪನೆಯೇ ಭವ್ಯವಾಗಿದೆ.

ಬಳವತ್ಕಾಲದ ಕೋಪದಬಂಟಂ ಪ್ರಳಯಾ
ನಳನಿಂ ಕಾಯಿಸಿ ರಾಹುವ ಕೇತುವ ಬಲಿದಿ
ಕ್ಕುಳಿನಿಂ ತೆಗೆದಂಥಾಸುರ ನೆರ್ದೆಗಲ್ಲೊಳ್ ವಜ್ರದ ಸಮ್ಮಟಿಗೆಯು ನಿಗುಚಿ
ಕುಳಿಕನ ವಿಷದಿಂ ನಿರೂಡಿಸಿ ನೇಸರ ಮಂ
ಡಳದಿಂ ಮಸೆವಳ ಮಿಂಚಿಂದಂ ಕಲ್ಪವನಿ
ಟ್ಟಳವಡೆ ರುದ್ರಂ ಮಾಡಿದ ಖಂಡೆಯರಥಟಿನ ಹಿಡಿತವ ನೇಂ ವಣ್ಣಿಪೆನು

ಕುಲಗಿರಿಗಳನ್ನೇ ತನ್ನ ಕೈ ಗುಂಡುಗಳನ್ನಾಗಿಸಿಕೊಂಡು ವೀರಭದ್ರ ತನ್ನ ಗಣದೊಡನೆ ದಕ್ಷಯಾಗದ ಸ್ಥಳಕ್ಕೆ ಧಾಳಿಯಿಟ್ಟು ಧೂಳೀಪಟ ಮಾಡುವನು.

ಆವೇಶದಲ್ಲಿ ದಕ್ಷನ ತಲೆಯನ್ನು ತುಂಡರಿಸಿ ಬೆಂಕಿಯಲ್ಲಿ ಹಾಕಿ ಸುಟ್ಟುಬಿಟ್ಟನು. ಆದರೆ ದಕ್ಷಪತ್ನಿಯ ಬೇಡಿಕೆಯನ್ನು ಮನ್ನಿಸಿ ಅವನ ಮುಂಡಕ್ಕೆ ಹೋತದ ರುಂಡವನ್ನು ಜೋಡಿಸಿ ಜೀವದಾನಮಾಡಿ ಕೈ ಸೆರೆ ಹಿಡಿದೊಯ್ಯುವನು. ವೀರಭದ್ರನ ಸೇವಕರು ಬ್ರಹ್ಮ, ವಿಷ್ಣು, ಸರಸ್ವತಿಯೇ ಮೊದಲಾದ ದೇವತೆಗಳನ್ನು ಸೆರೆ ಹಿಡಿದು ಕೈಲಾಸಕ್ಕೆ ಕೊಂಡೊಯ್ದರು. ಅಲ್ಲಿ ಸೆರೆಸಿಕ್ಕ ಜನ, ವಶಪಡಿಸಿಕೊಂಡ ವಸ್ತುಗಳ ತಪಶೀಲು ವರದಿಯಾಗುತ್ತದೆ.

ಘನ ಯಜ್ಞನ ಶಿರವಿದು ದಕ್ಷನ ತಲೆಯಿದು ಕಾ
ಲನ ತೋಳಿದು ಭಗಲೋಚನವಿದು ಪೂಷಾದಿ
ತ್ಯನ ಹಲ್ಲಿದು ವಾಣಿಯ ಮುಗಿದು ಮೃಗದೊಗಲಿದು ಗದೆಯಿದು ಹೊಸ ಚಕ್ರವಿದು
ಅನಲನ ನಾಲಗೆಯಿವು ಸುರಪತಿ ಮುಖ್ಯರ ವಾ
ಹನವಿವು ಮಂಡನ ಶಸ್ತ್ರಾಸ್ತ್ರಾವಳಿಯಿವು ಸ
ನ್ಮುನಿಗಳ ಸೃಕ್ ಸುವವಿವು ಚಿತ್ತೈಸೆಂದೊಪ್ಪಿಸಿದರು ವೀರನ ಕಿಂಕರರು

ಆಧುನಿಕ ಕಾಲದ ಓದುಗರಿಗೆ ಇದೆಲ್ಲಾ ತಮಾಷೆಯಾಗಿ ಕಾಣಬಹುದಾದರೂ ಪ್ರಾಚೀನ ಕಾಲದಲ್ಲಿ ಮತೀಯ ಕಲಹಗಳು ಎಷ್ಟು ಉಗ್ರವಾಗಿರುತ್ತಿದ್ದವೆನ್ನುವುದನ್ನು ಇಲ್ಲಿ ಗುರುತಿಸಬಹುದು. ಪರಸ್ಪರರ ದೈವ ದೂಷಣೆ, ತಮ್ಮ ದೈವ ಪ್ರತಿಷ್ಠಾಪನೆ ಆ ಕಾಲದಲ್ಲಿ ಸಾಮಾನ್ಯವಾಗಿದ್ದವು. ಈ ಕಾಲದಲ್ಲಿ ರಾಜಕೀಯ ಪಕ್ಷಗಳು ಪರಸ್ಪರ ಅವಹೇಳನೆಗೆ ತೊಡಗುವಂತೆ. ದಕ್ಷಯಾಗದ ಪ್ರಸಂಗವಂತೂ ಆರ್ಯ ದ್ರಾವಿಡ ಸಂಸ್ಕೃತಿಯ ಘರ್ಷಣೆಯ ಪ್ರತೀಕವೆಂದು ವಿದ್ವಾಂಸರು ಹೇಳುತ್ತಾರೆ.

ರಾಘವಾಂಕನ ಆವೇಶ ಪರತೆ ಈ ಕಾವ್ಯದಲ್ಲಿ ಚರಮ ಸೀಮೆಯನ್ನು ಮುಟ್ಟಿದೆ. ವೀರಭದ್ರನ ಪಾತ್ರ ಕಲ್ಪನೆ ಮಾತ್ರ ಅನನ್ಯವಾಗಿದ್ದು, ಭವ್ಯತೆಯ ಅನುಭವವನ್ನು ತಂದುಕೊಡುತ್ತದೆ ; ವೀರಭದ್ರನಿಗಾಗಿ ರುದ್ರನು ಮಾಡಿದ ಆಯುಧದ ಬಣ್ಣನೆಯಲ್ಲಿ, ಆತನ ಭವ್ಯಾಕಾರ ಆರ್ಭಟಗಳ ಚಿತ್ರಣದಲ್ಲಿ ಇದನ್ನು ಗುರುತಿಸಬಹುದು. ಆದರೆ ಈ ಎಲ್ಲ ಆವೇಶ ಆರ್ಭಟಗಳನ್ನು ನಿಯಂತ್ರಿಸಬಲ್ಲ ಔಚಿತ್ಯ ಜ್ಞಾನದ ಅಭಾವ ಕಾವ್ಯದ ಉದ್ದೇಶವನ್ನು ನಿರರ್ಥಕಗೊಳಿಸುತ್ತದೆ. ಹರಿಹರನ ವೀರಭದ್ರದೇವರ ರಗಳೆ ನಿಸ್ಸಂಶಯವಾಗಿ ಇದಕ್ಕಿಂತ ಉತ್ತಮ ಕಾವ್ಯವಾಗಿದೆ.

5

ಹನ್ನೆರಡನೆಯ ಶತಮಾನದಲ್ಲಿ ಅಸ್ತಿತ್ವಕ್ಕಾಗಿ ವೀರಶೈವ ಮತ್ತು ಜೈನ ಧರ್ಮಗಳಲ್ಲಿ ನಡೆದ ಹೋರಾಟ ಮತ್ತು ಅದರ ಪರಿಣಾಮವೇ 'ಸೋಮನಾಥ ಚಾರಿತ್ರ'ದ ಕಥಾವಸ್ತು. ಪ್ರಸಿದ್ಧ ವಚನಕಾರನೂ ಸೌರಾಷ್ಟ್ರದ ಸೋಮನಾಥ ಲಿಂಗವನ್ನು ಪ್ರತಿಷ್ಠಾಪಿಸಿದವನೆಂದು ಖ್ಯಾತಿವೆತ್ತವನೂ ಆದ ಆದಯ್ಯನೇ ಕಾವ್ಯದ ನಾಯಕ. ಹರಿಹರನ 'ಆದಯ್ಯನ ರಗಳೆ' ವಸ್ತುವಿನ ಆಕರ. ಆದಯ್ಯ ಪದ್ಮಾವತಿಯರ ಪ್ರಣಯ ಕಥೆ ನೆಪಮಾತ್ರವಾಗಿದ್ದು ಆತನ ವೀರ ಮಾಹೇಶ್ವರ ನಿಷ್ಠೆಯನ್ನು ಮೆರೆಯುವುದೇ ಕಾವ್ಯದ ಮುಖ್ಯ ಉದ್ದೇಶ. ವೀರೇಶ ಚರಿತೆಯಲ್ಲಿ ಅನ್ಯದೈವ ಖಂಡನೆಗೆ ಅವಕಾಶವಿದ್ದರೆ ಇಲ್ಲಿ ಅನ್ಯಧರ್ಮ ಅವಹೇಳನಕ್ಕೆ ಅವಕಾಶವಿದೆ.

ಪುಲಿಗೆರೆಯಲ್ಲಿ ಜೈನರ ಹಾವಳಿ ಹೆಚ್ಚಿ ಧರ್ಮಖಿಲವಾಗುತ್ತಿರುವುದನ್ನು ನಾರದನಿಂದ ತಿಳಿದ ಶಿವ ಅದನ್ನು ಸರಿಪಡಿಸುವ ಉದ್ದೇಶದಿಂದ ಆದಿಗಣನಾಥನನ್ನು ಭೂಮಿಗೆ ಕಳುಹಿಸುತ್ತಾನೆ. 'ಶಿವಾಚಾರಲತೆ ನನವೊತ್ತ ಜೈನರೆದೆ ನಡುಗೆ ಹುಲಿಗೆರೆಯ ಸುರಹೊನ್ನೆಯ ಮಹಾಬಸದಿಯ ಜಿನನ ಹಣೆ ಛಟಛಟನೆ ಮಿಡಿಯೆ' ಆದಯ್ಯನು ಸೌರಾಷ್ಟ್ರದಲ್ಲಿ ಶಿವಭಕ್ತ ದಂಪತಿಗಳಿಗೆ ಮಗನಾಗಿ ಹುಟ್ಟುತ್ತಾನೆ. ಬಾಲ್ಯ ಕಳೆದು ದೊಡ್ಡವನಾದಮೇಲೆ ವ್ಯಾಪಾರದ ಸಲುವಾಗಿ, ಪುಲಿಗೆರೆಯತ್ತ ಹೊರಡುತ್ತಾನೆ. ಆದಯ್ಯನು ಹುಲಿಗೆರೆಯನ್ನು ಪ್ರವೇಶಿಸುತ್ತಿದ್ದಂತೆಯೇ 'ಸುರ ಹೊನ್ನೆ ಬಸದಿಯಡಿಗ ಜಿನನ ನಡುನೆತ್ತಿ ಬಿರಿದಂತಾ'ಗುತ್ತದೆ. ಪುಲಿಗೆರೆಯಲ್ಲಿ ಜೈನ ಗೃಹಸ್ಥನಾದ ಪಾರಿಸೆಟ್ಟಿಯ ಮಗಳು ಪದ್ಮಾವತಿಯಲ್ಲಿ ಅನುರಕ್ತನಾಗುತ್ತಾನೆ. ಶಿವದೀಕ್ಷೆ ಕೊಟ್ಟು ಮದುವೆಯಾಗಿ ಕೆಲವು ದಿವಸಗಳು ಸುಖದಲ್ಲಿ ಕಳೆಯುತ್ತಾನೆ. ಒಮ್ಮೆ ಪಾರಿಸೆಟ್ಟಿಯಿಂದ ಜಂಗಮರಿಗೆ ಅಪಮಾನವಾಗುತ್ತದೆ. ಇದರಿಂದ ಕೋಪಗೊಂಡ ಆದಯ್ಯನಿಗೂ ಪಾರಿಸೆಟ್ಟಿಗೂ ಮಾತಿಗೆ ಮಾತು ಬೆಳೆದುಬಿಡುತ್ತದೆ. ಪಾರಿಸೆಟ್ಟಿಯ ಸವಾಲನ್ನು ಸ್ವೀಕರಿಸಿ ಹುಲಿಗೆರೆಯ ಬಸದಿಯಲ್ಲಿ ಸೌರಾಷ್ಟ್ರದ ಸೋಮನಾಥನನ್ನು ಪ್ರತಿಷ್ಠಾಪಿಸುವ ಛಲದಿಂದ ಆದಯ್ಯ ಹೊರಡುತ್ತಾನೆ. ಸೌರಾಷ್ಟ್ರದ ಹಾದಿಯಲ್ಲಿ ಅನ್ನಾಹಾರಗಳನ್ನು ಲೆಕ್ಕಿಸದೆ ಶಿವನೊಡ್ಡಿದ ಪರೀಕ್ಷೆಗಳಲ್ಲಿ ಗೆದ್ದು ಸೋಮನಾಥನನ್ನು ಒಲಿಸುತ್ತಾನೆ. ಸೋಮನಾಥನು ಆತನ ಭಕ್ತಿಗೆ ಮೆಚ್ಚಿ.

ಕೊಡುವೆ ನೀಗಳೆ ವರವನೊಲ್ದು ಬೇಡಯ್ಯ ಯೆಂ
ದಡೆ ಬೇರೆ ವರವುಂಟೆ ನೀನೆನ್ನ ಕೂಡೆ ಬಳಿ
ವಿಡಿದು ನಡೆತಂದು ಸೊಕ್ಕಿರ್ದ ಹುಲಿಗೆರೆಯ ಸುರಹೊನ್ನೆಯ ಮಹಾ ಬಸದಿಯ
ದಡಿನ ಜಿನನಂ ನೆರೆಯೆ ಹೋಳ್ವಾಂತ ಸವರ್ಣಂ
ಹುಡಿಗುಟ್ಟಿ ನಂದಿ ಕೇಶನ ಮೇಲೆ ಮೂರ್ತಿ ಗೊಂ
ಡಡೆ ವರಂ ಬಂದುದೆನಲಾಪರಿಯಲೇ ಮಾಳ್ಪೆ ನಡೆ ಮುಂದೆಹೋಗು

ಎನ್ನುತ್ತಾನೆ ; ಮಾತು ಕೊಟ್ಟಂತೆ ಸಂಭ್ರಮದಿಂದ ಪರಿವಾರ ಸಮೇತ ಬಂದು,

ಒಳಹೊಕ್ಕು ರಂಗಮಧ್ಯದೊಳು ಶಾಕ್ವರ ಪತಿಯ
'ಕೆಳಗೂರು ವಲ್ಲಿಂದ ಮುನ್ನ ಭಾಳಾಕ್ಷದುರಿ
ಮುಳಿದು ಕೋಣೆಯೊಳಿದ್ದ ದಡಿಗ ಜಿನಬಿಂಬಮಂ'

ಛಟಛಟನೆ ಸಿಡಿಯುವಂತೆ ಚೂರುಮಾಡಿ ಭಿನ್ನವಾದ ಮೂರ್ತಿಯ ನಡುವೆ ಲಿಂಗರೂಪದಲ್ಲಿ ನೆಲೆಯಾಗುತ್ತಾನೆ. ಉಳಿದ ತೀರ್ಥಂಕರ ಮತ್ತಿತರ ಜೈನ ದೇವರುಗಳನ್ನೂ ಸುಳ್ಳುಮಾಡಿದ ಸೋಮನಾಥ ಅಷ್ಟಕ್ಕೇ ನಿಲ್ಲದೆ ಹುಲಿಗೆರೆ ಯಲ್ಲಿರುವ ಜೈನ ಬಸದಿಗಳನ್ನೆಲ್ಲಾ ನಾಶಮಾಡುತ್ತಾನೆ. ಪರಿಣಾಮವಾಗಿ ಕೈಗಟ್ಟಿದ ಯುದ್ಧದಲ್ಲಿ ತನ್ನ ಭಕ್ತ ಆದಯ್ಯ ಮತ್ತು ವಾಹನವಾದ ವೃಷಭನ ಮೂಲಕ ಜೈನರನ್ನು ಕೊಂದು ಕೂಗಿಡಿಸುತ್ತಾನೆ.

ತನ್ನ ಧರ್ಮದಲ್ಲಿ ಅತೀವ ನಿಷ್ಠೆಯುಳ್ಳ ವ್ಯಕ್ತಿ ಸಮಕಾಲೀನ ರಾಗದ್ವೇಷ ರಂಜಿತವಾದ ವಸ್ತುವೊಂದನ್ನು ನಿರ್ವಹಿಸಿದರೆ ಸಾಮಾನ್ಯವಾಗಿ ಕಂಡುಬರುವ ಪರಮತ ದೂಷಣೆಯಂತಹ ಸಂಗತಿಗಳು ಸೋಮನಾಥ ಚಾರಿತ್ರದಲ್ಲಿ ತುಂಬಿ ತುಳುಕುತ್ತಿವೆ. ಸೋಮನಾಥ ಚರಿತೆಗೆ ವಸ್ತುವನ್ನೊದಗಿಸಿದ ಹರಿಹರನ 'ಆದಯ್ಯನ ರಗಳೆ' ಪ್ರಮುಖವಾದ ಕೆಲವು ಅಂಶಗಳಲ್ಲಿ ಉತ್ತಮ ಸಂಸ್ಕಾರ ದಿಂದ ಕೂಡಿದೆ. ಆದಯ್ಯ ಪದ್ಮಾವತಿಯರ ಪ್ರಣಯ ಕಥೆಯೇ ಹರಿಹರ ನಿಗೆ ಮುಖ್ಯ. ಅದಕ್ಕೆ ತಕ್ಕಂತೆ ಅವರ ಹುಟ್ಟಿಗೆ ಕಾರಣವನ್ನು ಕಲ್ಪಿಸಿದ್ದಾನೆ. ರಾಘವಾಂಕನಿಗಾದರೋ ವೀರಶೈವ ಮತ್ತು ಜೈನರ ನಡುವೆ ಆದ ಘರ್ಷಣೆ, ಮುಖ್ಯ ; ಅದಕ್ಕೆ ತಕ್ಕಂತೆ ನಾರದನ ಪಾತ್ರವನ್ನು ಕಲ್ಪಿಸಿಕೊಂಡು ಆದಯ್ಯನ ಹುಟ್ಟಿಗೆ ಹಿನ್ನೆಲೆಯನ್ನು ಒದಗಿಸುತ್ತಾನೆ. ಹರಿಹರನಲ್ಲಿ ಕೂಡ 'ಕಡುಸೊಕ್ಕಿದ ಸವಣ'ರನ್ನು ಶಿಕ್ಷಿಸುವಂತೆ ಶಿವ ಆದಯ್ಯನಿಗೆ ಹೇಳಿ ಕಳುಹಿಸುತ್ತಾನೆ. ಆದರೆ ರಾಘವಾಂಕನ ಶಿವನಂತೆ ಹುಲಿಗೆರೆಯಲ್ಲಿ ತನಗೊದಗಿದ ದುಸ್ಥಿತಿಗೆ ಹೆದರಿ, ಸವಣರ ಮೇಲೆ ಪ್ರತೀಕಾರ ತೀರಿಸಿಕೊಳ್ಳಲು ತವಕಿಸುವುದಿಲ್ಲ.

ಆದಯ್ಯ ಪದ್ಮಾವತಿಯರ ಪ್ರಣಯ ಹರಿಹರನಲ್ಲಿ ಪವಿತ್ರವಾದ ದಾಂಪತ್ಯ ಪ್ರಣಯದಂತೆ ನಿರೂಪಿತವಾಗಿದೆ. ರಾಘವಾಂಕನಲ್ಲಿ ಆದಯ್ಯನ ಸ್ವಾರ್ಥಪೂರ್ತಿಕೆಗೆ ಪದ್ಮಾವತಿ ಸಾಧನವಾಗುತ್ತಾಳೆ. ಹರಿಹರನ ಜೈನಧರ್ಮದ ಅವಹೇಳನೆಯನ್ನು 'ಸಮಯಾಚಾರ ನಿಷ್ಠೆ'ಯ ಪರಿಮಿತಿಯೊಳಗೆ ಸಮರ್ಥಿಸಿಕೊಂಡಂತೆ ರಾಘವಾಂಕನನ್ನು ಸಮರ್ಥಿಸಿಕೊಳ್ಳಲಾಗುವುದಿಲ್ಲ. ಕಥವಸ್ತುವನ್ನು ಬಿಟ್ಟರೂ ಇಲ್ಲಿಯ ಕೆಲವು ವರ್ಣನೆಗಳು ಅವಾಸ್ತವತೆಗೆ ಪಕ್ಕಾಗಿವೆ. ಸೂಳೆಗೇರಿಯ ವರ್ಣನೆ ಮುಂತಾದುವೆಲ್ಲಾ ಸಾಂಪ್ರದಾಯಕವಾಗಿದ್ದು ಕಾವ್ಯ ವಿಸ್ತಾರವನ್ನು ಹೆಚ್ಚಿಸಿವೆ. ಕಥನ ಕವಿಯಾಗಿ 'ಸೋಮನಾಥ ಚಾರಿತ್ರ'ಕ್ಕಿಂತ 'ವೀರೇಶ ಚರಿತೆ'ಯಲ್ಲಿ ಹೆಚ್ಚಿನ ಪರಿಣತಿಯಿದೆ. 'ಹರಿಶ್ಚಂದ್ರ ಕಾವ್ಯ' ಮತ್ತು 'ಸಿದ್ಧರಾಮ ಚಾರಿತ್ರ'ದೊಡನೆ ಹೋಲಿಸಿದಾಗ ಇವೆರಡೂ ಕಾವ್ಯಗಳು ನಿಸ್ತೇಜವಾಗಿ ಕಂಡು ಬರುತ್ತವೆ. ಆದರೂ ಧಾರ್ಮಿಕ ನಿಷ್ಠೆಯ ಆ ಕಾಲದ ಜನ ಈ ಕಾವ್ಯಗಳನ್ನು ಮೆಚ್ಚಿಯೇ ಇರಬೇಕು.

## 6

ಸಿದ್ಧರಾಮ ಹನ್ನೆರಡನೆ ಶತಮಾನದ ಪ್ರಸಿದ್ಧ ಶಿವಶರಣ 'ಸಾಕಾರನಿಷ್ಠೆ ಭೂತಂಗಳೊಳನುಕಂಪೆ ತಾನೆ ಪರ ಬೊಮ್ಮ' ಮತ್ತು 'ಶಿವಯೋಗಿಯ ಶರೀರಂ ವೃಥಾ ಸವೆಯಲಾಗದು ಅನುಗೊಂಬನಿತು ಕಾಯಕ ನಡೆಯುತ್ತಿರಬೇಕು' ಎಂಬ ಉದಾತ್ತ ತತ್ವಗಳನ್ನು ಬದುಕಿದವನು. ರಾಘವಾಂಕನಿಗೂ ಸಿದ್ಧರಾಮನನ್ನು ಕುರಿತು ಅತೀವ ಮೋಹ. ಈ ಕಾವ್ಯವನ್ನು ಆತ ಬರೆಯುವ ಹೊತ್ತಿಗೆ ಸಿದ್ಧರಾಮನನ್ನು ಕುರಿತ ಅನೇಕ ಕಥೆಗಳು ಜನರಲ್ಲಿ ಪ್ರಚಾರದಲ್ಲಿದ್ದಿರಬೇಕು. ಹರಿಹರನು ತನ್ನ 'ಲಿಂಗಾರ್ಚನೆಯ ರಗಳೆ', 'ಪ್ರಭುದೇವರ ರಗಳೆ', 'ರೇವಣ ಸಿದ್ಧೇಶ್ವರ ರಗಳೆ' ಮುಂತಾದ ಕೃತಿಗಳಲ್ಲಿ ಸಿದ್ಧರಾಮನನ್ನು ಉಲ್ಲೇಖಿಸಿದ್ದಾನೆ. ಸಿದ್ಧರಾಮನನ್ನು ಕುರಿತ ಒಂದು ರಗಳೆಯನ್ನು ಹರಿಹರನು ಬರೆದಿರುವ ಸಾಧ್ಯತೆಯಿದೆ.+ ಹೀಗೆ ತನಗಿಂತ ಹಿಂದೆ ಇದ್ದ ಎಲ್ಲ ಪರಿಕರಗಳನ್ನು ರಾಘವಾಂಕ 'ಸಿದ್ಧರಾಮ ಚಾರಿತ್ರ'ದಲ್ಲಿ ಬಳಸಿಕೊಂಡಿದ್ದಾನೆ.

'ಸಿದ್ಧರಾಮ ಚಾರಿತ್ರ'ಕ್ಕೆ ವೀರಶೈವ ಪುರಾಣಗಳಲ್ಲಿ ಮೇಲಾದ ಸ್ಥಾನವಿದೆ. ನಿಸ್ವಾರ್ಥ ಸಮಾಜ ಸೇವೆಯ ಅಭಾವವಿರುವ ಆಧುನಿಕ ಕಾಲಕ್ಕಂತೂ ಸಿದ್ಧರಾಮನ ಬದುಕು ನೀಡುವ ಸಂದೇಶ ಬೆಲೆಯುಳ್ಳದ್ದು.

ಸಿದ್ಧರಾಮ ವೀರಶೈವ ಪರಂಪರೆಯಲ್ಲಿ ಪೂಜನೀಯ ವ್ಯಕ್ತಿ. ಆದುದ ರಿಂದ ರಾಘವಾಂಕನೂ ಸಹ ಅವನ ಜನನ, ಬಾಲ್ಯ, ಬದುಕು ಮತ್ತು ಮರಣ ಗಳನ್ನು ಪುರಾಣ ಸದೃಶವಾದ ರೀತಿಯಲ್ಲಿಯೇ ಕಲ್ಪಿಸಿಕೊಂಡಿದ್ದಾನೆ. ಶಾಪ ದಿಂದ ಭೂಲೋಕದಲ್ಲಿ ಜನಿಸಿದ ಸಿದ್ಧರಾಮನ ತಂದೆತಾಯಿಗಳು ಅವನ ಜನನಕ್ಕೆ ನಿಮಿತ್ತ ಮಾತ್ರರು. ಏಕೆಂದರೆ ಗಂಡಹೆಂಡಿರ ಸಹಜ ಒಡನಾಟ ದಿಂದ ಅವನು ಹುಟ್ಟಲಿಲ್ಲ. ಅವನ ತಾಯಿ ಸುಗ್ಗವ್ವೆಗೆ ಮುಟ್ಟು ನಿಂತು ಮುದುಕಿಯಾದಮೇಲೆ ಸಿದ್ಧರಾಮನ ಜನನವಾಗುತ್ತದೆ. ಆತ ಹುಟ್ಟುವ ಮೊದಲೆ ಮಹಾಯೋಗಿ ರೇವಣ ಸಿದ್ಧೇಶ್ವರರು ಸುಗ್ಗವ್ವೆಯಿದ್ದಲ್ಲಿಗೆ ಬಂದು ಗರ್ಭವನ್ನು ಮುಟ್ಟಿ ನಮಸ್ಕರಿಸುತ್ತಾರೆ. ರಾಘವಾಂಕನ ಕಾವ್ಯದಲ್ಲಿ ಬರುವ ಈ ಸಂಗತಿಗಳು ಕ್ರಿಸ್ತನ ಜನನ ಮತ್ತು ಕನ್ನೆಮೇರಿಯ ಪ್ರಸಂಗವನ್ನು ನೆನಪಿಗೆ ತರುತ್ತವೆ. ಮಹಾ ವ್ಯಕ್ತಿಗಳ ಬಾಳು ಹೇಗೆ ಲೋಕ ವಿಲಕ್ಷಣ ವಾದುದೋ ಹಾಗೆಯೇ ಅವರ ಹುಟ್ಟು ಸಾವುಗಳು ಸಹ ಎಂಬ ತತ್ವವನ್ನೇ ಜಗತ್ತಿನ ಎಲ್ಲ ಪುರಾಣಕಥೆಗಳೂ ಪ್ರತಿಪಾದಿಸಿವೆ. ಸಮತೆ, ನಿತ್ಯತ್ವ, ಭಕ್ತಿ, ಜ್ಞಾನ, ವೈರಾಗ್ಯವೇ ಶಿವನ ಕರುಣೆಯಿಂದ ಮೂರ್ತಿವೆತ್ತು ಸುಗ್ಗವ್ವೆಯ ಬಸಿರನ್ನು ಪ್ರವೇಶಿಸಿದವು. ಐದು ತಿಂಗಳಿನಲ್ಲಿಯೇ ಗರ್ಭ ಬಲಿತು ಸುಖ ಪ್ರಸವವಾಯಿತು. ಸಿದ್ಧರಾಮನು ಹುಟ್ಟಿದ ದಿನದ ಸೂರ್ಯೋದಯವೇ ಈ ಮಹಾಪುರುಷನ ಬರವನ್ನ ಸಾರುವಂತಿತ್ತು :

'ಅಂಬಿಕಾಪತಿ ಲೋಕಮಂ ಸಾಕ ಲೊಗೆದನೆಂ
ಬುದಂ ತನ್ನ ದಶ ಶತ ಕರದಿ ಗಗನವೆಂ
ದೆಂಬ ಜೇಗಟೆಯಿಂದ ಧರೆಗೆ ಡಂಗುರ ವೊಯ್ಯಲೆಂದಂದು ನಿಂದಿರ್ದನೋ
ಎಂಬಂತೆ ರವಿಯುದಯಗಿರಿಗೆ ಬಂದಂ'.. ...

ಹುಟ್ಟಿದ ಮಗುವಿಗೆ ಸಿದ್ಧರಾಮನೆಂದು ಗಿರಿಜೆ ಕೊಟ್ಟ ಹೆಸರನ್ನು ಬಿಟ್ಟು ತಂದೆತಾಯಿಗಳು ಧೂಳಿ ಮಾಕಾಳನೆಂದು ಕರೆದರು. ಮಗು ಈ ಹೆಸರನ್ನು ಒಪ್ಪದೆ ಸಿದ್ಧರಾಮನೆಂದು ಕರೆದರೆ ಮಾತ್ರ ತಿರುಗಿ ನೋಡುತ್ತಿತ್ತು. ಲೋಕದ ಮಕ್ಕಳಿಗೆ ಸಹಜವಲ್ಲದ ರೀತಿಯಲ್ಲಿ ಗಳಗಳನೆ ಬೆಳೆದ ಸಿದ್ಧರಾಮ. ವಿಚಿತ್ರವಾದ ರೀತಿಯ ಹುಚ್ಚನಂತಿದ್ದ ಈ ಬಾಲಕನನ್ನು ತಂದೆತಾಯಿಗಳು ದನ ಕಾಯಲು ನಿಯಮಿಸಿದರು. ಹೀಗಿರಲು ಒಂದು ದಿನ ಹುಡುಗ ಸಿದ್ಧರಾಮನಿಗೆ ನವಣೆಯ ಹೊಲದಲ್ಲಿ ಜಂಗಮವೇಷದ ಶಿವ ಕಾಣಿಸಿಕೊಂಡ. ನಿಜಸ್ವರೂಪ ತೋರಿಸಿ ಮಲ್ಲಿನಾಥನೆಂದು ತನ್ನ ಹೆಸರು ಹೇಳಿದ. ಪರ್ವತಾಶ್ರಮ ತನ್ನ

ವಾಸಸ್ಥಳವೆಂದ. ನಿನ್ನ ಮೇಲಿನ ಸ್ನೇಹದಿಂದ 'ಹಂಜಕ್ಕಿಯುಂಬೇಡಿ ಮೆಲ ಬಂದೆ'ನೆಂದ ಆತನಿಗೆ ಹಂಜಕ್ಕಿ ತರಲು ಸಿದ್ಧರಾಮನು ಹಳ್ಳಿಗೆ ಹಿಂದಿರುಗುತ್ತಾನೆ. ಮರಳಿ ಬಂದಾಗ ಮಲ್ಲಿನಾಥನಿರಲಿಲ್ಲ. ಅಗಲಿಕೆಯ ನೋವು ಸಿದ್ಧರಾಮನನ್ನು ಕಾಡಿತು. ಬಾಯ್ದೆರೆದು ಹಲುಬುತ್ತಾ 'ಚೆನ್ನಮಲ್ಲಯ್ಯ ಬಾ ಬಾ' ಎಂದು ಹೃದಯ ಕರಗುವಂತೆ ಕೂಗಿ ಕರೆಯುತ್ತಿದ್ದ ಈ ಬಾಲಕನನ್ನು ಶ್ರೀಶೈಲದ ಯಾತ್ರೆಗೆ ಹೋಗುತ್ತಿದ್ದ ಜಂಗಮರು ಕಂಡರು. ಮಲ್ಲಯ್ಯನನ್ನು ತೋರಿಸುವುದಾಗಿ ಆಶ್ವಾಸನೆ ಕೊಟ್ಟು ಶ್ರೀ ಶೈಲಕ್ಕೆ ಕರೆದೊಯ್ದು ಮಲ್ಲಿಕಾರ್ಜುನ ಲಿಂಗವನ್ನು ತೋರಿಸಿದರು. ಸಿದ್ಧರಾಮ ಈ ಮಲ್ಲಯ್ಯನನ್ನು ಒಪ್ಪದೆ ಮತ್ತೆ ಹುಡುಕುತ್ತಾ ಹೊರಟು ಕಮರಿಯ ತುತ್ತ ತುದಿಗೆ ಬಂದು ನಿಂತ. ಇನ್ನೇನು ಬೀಳಬೇಕೆನ್ನುವಾಗ ಪಾರ್ವತೀ ಸಮೇತನಾದ ಶಿವ ಪ್ರತ್ಯಕ್ಷನಾಗಿ ಕರುಣಿಸಿದ. ಹಿಗ್ಗಿ ಕುಣಿದು ಚರಣತಲದಲ್ಲಿ ಹೊರಳಾಡಿದ ಸಿದ್ಧರಾಮನಿಗೆ ಶ್ರೀ ಶೈಲ ಕ್ಷೇತ್ರವನ್ನೆಲ್ಲಾ ತೋರಿಸಿದ ಶಿವನ ಕಿಂಕರನಾದ ಕಾಲಭೈರವ. 'ಇನ್ನು ನೀನು ಹಿಂದಿರುಗು'ಎಂದರೆ ಶಿವನ ಮಾತನ್ನು ಸಿದ್ಧರಾಮ ಕೇಳಲಿಲ್ಲ. ತಾನು ಸೊನ್ನಲಿಗೆಗೇ ಬಂದು ನೆಲೆಸುವೆನೆಂದೂ 'ಸೊನ್ನಲಿಗೆ ಪುರ ನಿರ್ಮಾಣ ನಿನ್ನಿಂದಾಗಬೇಕೆಂದೂ ಶಿವ ಒಲಿಸಲು ಒಲ್ಲದ ಮನದಿಂದ ಒಪ್ಪಿ ಊರಿಗೆ ಹಿಂದಿರುಗಿದ. ಕೆಲವು ದಿನ ಕಳೆದಮೇಲೆ ತಂದೆ ತಾಯಿಗಳ ಕ್ಷುಲ್ಲಕ ದೇವರುಗಳ ಪೂಜೆಯಿಂದ ಬೇಸತ್ತು ಮನೆಬಿಟ್ಟು ಮಠ ಕಟ್ಟಿದ. ಶಿವನ ಆದೇಶದಂತೆ ಚಾಮುಲದೇವಿ ಸೊನ್ನಲಿಗೆಯ ಪುರವನ್ನು ರಚಿಸಲು ಸಿದ್ಧರಾಮನಿಗೆ ಭೂಮಿ ಕೊಟ್ಟಳು. ಭೂಶೋಧನೆಗೆ. ತೊಡಗಿದಾಗ ಸಿಕ್ಕನಿಧಿಯಿಂದ ಕೆಲಸ ಕಾರ್ಯಗಳು ನಿರ್ವಿಘ್ನವಾಗಿ ಸಾಗಿದವು. ಗುಡಿ ಗೋಪುರಗಳು, ಲಿಂಗ ಪ್ರತಿಷ್ಠಾಪನೆಯೆಲ್ಲ ಮುಗಿದ ಮೇಲೆ 'ಪಶು ಪಕ್ಷಿ ಕ್ರಿಮಿ ಕೀಟಾದಿ'ಗಳಿಗೆ ಆಸರೆಯನ್ನು ಕಲ್ಪಿಸುವಂತೆ ಒಂದು ದೊಡ್ಡ ಕೆರೆಯನ್ನು ನಿರ್ಮಿಸಿದ. ತಾನೆ ಸ್ವತಃ ನಾಲ್ಕು ಸಾವಿರ ಶಿಷ್ಯರೊಡನೆ ಗುದ್ದಲಿ ಹಿಡಿದು ಅಗೆದ ; ಶಿವನ ಕರುಣೆಯಿಂದ ಪವಿತ್ರ ತೀರ್ಥ ಅಲ್ಲಿ ನೆಲಸಿತು.

ಇಲ್ಲಿಂದ ಮುಂದೆ ಸಿದ್ಧರಾಮನ ಬದುಕು ಸಾರ್ವಜನಿಕವಾಗುತ್ತದೆ. ಆತನ ಕೀರ್ತಿ ದಶದಿಕ್ಕುಗಳಿಗೂ ಹಬ್ಬಿ ದೇಶದೇಶದಿಂದ ಜನ ಬಂದು ಅವನ ದರ್ಶನಕ್ಕಾಗಿ ಕಾದುನಿಂತರು. ನೋವಿನಿಂದ ನರಳುತ್ತಿದ್ದವರು, ಸಾವಿನ ಹೆದರಿಕೆಗೆ ತುತ್ತಾದವರು, ಶಾಪ ಪೀಡಿತರು–ಹೀಗೆ ಅನೇಕ ರೀತಿಯ ಕರ್ಮ

ಪಾಶಗಳಿಂದ ಬಂಧಿತರಾದವರನ್ನು ಸಿದ್ಧರಾಮ ತನ್ನ ಸ್ಪರ್ಶ ನೋಟಗಳಿಂದ ಉದ್ಧರಿಸತೊಡಗಿದ.

'ಸಿದ್ಧರಾಮ ಚಾರಿತ್ರ'ದಲ್ಲಿ ಬರುವ ಪವಾಡಗಳು ಅತಿ ಮಾನುಷವಾದುವು. ಇವುಗಳನ್ನು ನಂಬದ ಆಧುನಿಕರು ಮೂಗ ಮುರಿಯಬಹುದು. ಆದರೆ ಈ ಪವಾಡಗಳನ್ನು ಸಿದ್ಧರಾಮನು ಮಾಡಿದ ಸಂದರ್ಭಗಳ ಹಿನ್ನೆಲೆಯಲ್ಲಿ ಅವುಗಳ ಸಾಂಕೇತಿಕತೆಯನ್ನು ಗುರುತಿಸಬೇಕಾಗುತ್ತದೆ. ಅಲ್ಲಿರುವ ಮಾನವೀಯತೆ ಮತ್ತು ದೀನ ದಲಿತರನ್ನು ಕುರಿತ ಸಿದ್ಧರಾಮನ ಅನುಕಂಪೆಗಳನ್ನು ಇಲ್ಲಿ ಮರೆಯುವಂತಿಲ್ಲ. ಲೌಕಿಕ ಪದವಿ, ಹೆಸರಿನ ಮೋಹಕ್ಕಾಗಿ ಮಾಡಿದ ಪವಾಡಗಳಿಗೂ ಇಂಥ ಪವಾಡಗಳಿಗೂ ವ್ಯತ್ಯಾಸವಿದೆ. ಕೆಲವು ಪವಾಡಗಳನ್ನು ಮಾತ್ರ ಈ ದೃಷ್ಟಿಯಿಂದ ಮುಂದೆ ಉದಾಹರಿಸಿದ್ದೇವೆ.

ಶಿವನ ಅಪೇಕ್ಷೆಯಂತೆ ಸಿದ್ಧರಾಮನು ಸೊನ್ನಲಿಗೆಯಲ್ಲಿ ಆದಿಲಿಂಗ ಪ್ರತಿಷ್ಠಾಪನೆಗೆ ತೊಡಗಿದನು. ಪಟ್ಟಣದ ವಾಯುವ್ಯ ದಿಕ್ಕಿನಲ್ಲಿ ಉದ್ಭವಿಸಿದ ಲಿಂಗವನ್ನು ರಥದಲ್ಲಿಟ್ಟು ಜೋಡೆತ್ತಿನಿಂದ ಎಳೆಯಿಸಿದನು. ಸಿದ್ಧರಾಮನು ನಡೆದಾಗ ಮುಂದುವರಿಯುತ್ತಾ ನಿಂತಾಗ ನಿಲ್ಲುತ್ತ ಹೋಗುತ್ತಿತ್ತು ರಥ. ರಾತ್ರಿಯಾಗಲು ಸಿದ್ಧರಾಮನು ಹೊರಟು ತಾನು ಮುಂಜಾನೆ ಬರುವವರೆಗೂ ರಥಕ್ಕೆ ಹೋರಿಗಳನ್ನು ಕಟ್ಟಬಾರದಾಗಿ ಹೇಳಿ ಹೋದನು. ಆದರೆ ಅವನ ಶಿಷ್ಯರು ಬೆಳಗ್ಗೆ ಎದ್ದವರೇ ರಥಕ್ಕೆ ಎತ್ತುಗಳನ್ನು ಬಿಗಿದು ಎಳಸಿದರು. ಭಾರವನ್ನು ಎಳೆಯಲಾರದ ಎತ್ತುಗಳು ಅಲ್ಲಿಯೇ ಬಿದ್ದು ಸತ್ತವು. ಸಿದ್ಧರಾಮನು ಜೀವಗೀತೆಯನ್ನು ಹಾಡಿ ಅವನ್ನು ಬದುಕಿಸಿದ.

ಜಂಗಮ ದಂಪತಿಗಳಿಗಿದ್ದ ಒಬ್ಬನೇ ಮಗ ಏಲೇಶ ಇದ್ದಕ್ಕಿದ್ದಂತೆ ಸತ್ತುಹೋದ. ಸಿದ್ಧರಾಮನ ಭಕ್ತೆಯಾದ ಮಗನ ತಾಯಿ ತನ್ನ ಮಗನನ್ನು ಬದುಕಿಸಲು ಗುರುವಿಗೆ ಮೊರೆಯಿಟ್ಟಳು. 'ಮಲ್ಲಿನಾಥನ ಇಚ್ಛೆ'ಗೆ ತಾನು ಹೇಗೆ ಅಡ್ಡಬರಲು ಸಾಧ್ಯ? ಎಂದ ಸಿದ್ಧರಾಮ. 'ಮಗ ಸಾಯುವಾಗ ಕುಡಿಯಲು ಮಜ್ಜಿಗೆ ಕೇಳಿದ : ಮಜ್ಜಿಗೆ ತರುವಷ್ಟರಲ್ಲಿ ಪ್ರಾಣಹೋಗಿತ್ತು. ಕುಡಿದಾದರೂ ಸತ್ತಿದ್ದರೆ ಹಡೆದ ಹೊಟ್ಟೆಗೆ ಸ್ವಲ್ಪ ಸಮಾಧಾನವಿರುತ್ತಿತ್ತು' ಎಂದ ತಾಯಿಯ ಮಾತನ್ನು ಕೇಳಿದ ಸಿದ್ಧರಾಮನು ಏಲೇಶನನ್ನು ತಾತ್ಕಾಲಿಕವಾಗಿ ಬದುಕಿಸಿದ. ತಾಯಿ ಕೊಟ್ಟ ಮಜ್ಜಿಗೆಯನ್ನು ಕುಡಿದ ಮಗು ಮತ್ತೆ ಸತ್ತು ಒರಗಿತು.

ಬಿಲ್ಲೇಶ ಬೊಮ್ಮಯ್ಯ ಸಿದ್ಧರಾಮನ ಶಿಷ್ಯ. ಸಾಲಗಾರರ ಕಾಟ ತಾಳಲಾರದೆ ಸೊನ್ನಲಿಗೆಗೆ ಸೇರಿದವನು. ಇದನ್ನು ತಿಳಿದ ಸಾಲಗಾರರು ಹಿಂಬಾಲಿಸಿ ಬಂದು ಸಿದ್ಧರಾಮನಲ್ಲಿ ದೂರಿದರು. ಗುರುವಿನ ಮಾತನ್ನು ಕಡೆಗಣಿಸಿದ ಶಿಷ್ಯನನ್ನು ಸಾಲಗಾರರಿಗೆ ಒಪ್ಪಿಸಿದಾಗ ಅವರು ಧರ್ಮಾಧಿಕಾರಿಗಳಲ್ಲಿಗೆ ಎಳೆದೊಯ್ದರು. ಅಪಮಾನವನ್ನು ತಾಳದೆ ಬೊಮ್ಮಯ್ಯ ಆತ್ಮಹತ್ಯೆ ಮಾಡಿಕೊಂಡು ನರಕ ಸೇರಿದ. ಸಿದ್ಧರಾಮನು ಒಮ್ಮೆ ಕೈಲಾಸಕ್ಕೆ ಹೋಗಿಬರುತ್ತಿದ್ದಾಗ ಸಿಕ್ಕಿದ ಗಂಧರ್ವನೊಬ್ಬನಿಂದ ಈ ಸಂಗತಿ ತಿಳಿಯಿತು. ನರಕದಿಂದ ತನ್ನ ಶಿಷ್ಯನನ್ನು ಉದ್ಧರಿಸಲು ಶಿವನ ಅಪ್ಪಣೆ ಪಡೆದ ಸಿದ್ಧರಾಮನು ಬೊಮ್ಮಯ್ಯನಿದ್ದಲ್ಲಿಗೆ ನಡೆದ. ಮೇಲಕ್ಕೆ ಹತ್ತಿಬರಲು ಸಿದ್ಧರಾಮನು ಅವನಿಗೆ ತನ್ನ ಲಾಕುಳವನ್ನು ನೀಡಿದಾಗ ಹೃದಯ ವಿದ್ರಾವಕವಾಗಿ ಸಂಗತಿಯೊಂದು ಘಟಿಸಿತು. ಲಾಕುಳವನ್ನು ಹಿಡಿದ ಬೊಮ್ಮಯ್ಯನ ಕಾಲನ್ನು ಮತ್ತೊಬ್ಬ ನಾರಕಿ, ಅವನ ಕಾಲನ್ನು ಮಗುದೊಬ್ಬ ಹೀಗೆ ಎಲ್ಲ ಪಾಪಿಗಳೂ ಆರ್ತರಾಗಿ ಸಿದ್ಧರಾಮನಿಗೆ ಮೊರೆಯಿಡುತ್ತಿದ್ದಾರೆ. ಸಿದ್ಧರಾಮನ ಮನಕರಗಿ ಶಿವನ ಅಪ್ಪಣೆ ಪಡೆದು ಅವರೆಲ್ಲರನ್ನು ಉದ್ಧರಿಸಿದ.

ಈ ಎಲ್ಲ ಪವಾಡಗಳಿಗಿಂತಲೂ ಕರುಣಾಸ್ಪದವಾದುದೆಂದರೆ ಒಂದು ಬೆಕ್ಕನ್ನು ಬದುಕಿಸಿದ ಕತೆ : ಆಶ್ರಮದ ಗುಡಿಸಿಲಿಗೆ ಬಿದ್ದ ಬೆಂಕಿಯಲ್ಲಿ ತಾಯಿ ಬೆಕ್ಕು ಸತ್ತುಹೋಗುತ್ತದೆ. ಬೇರೆಡೆಯಿದ್ದ ಮರಿ ತಾಯಿಯ ಅಗಲಿಕೆಯನ್ನು ಸೈರಿಸಲಾರದೆ ಅರಚುತ್ತದೆ. ಅದರ ಅರಚಾಟವನ್ನು ಕೇಳಿ ಕರುಣೆಯಿಂದ ಸಿದ್ಧರಾಮನು ತಾಯಿ ಬೆಕ್ಕಿನ ಶವವನ್ನು ತರಿಸಿ ಜೀವ ಕೊಟ್ಟನಂತೆ. 'ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲ ಸಂಗಮದೇವ' ಎಂಬ ಬಸವಣ್ಣನವರ ವಚನ ಇಲ್ಲಿಗೆ ಸರಿಹೊಂದುತ್ತದೆ.

ಮೇಲೆ ಹೇಳಿದ ಪವಾಡಗಳಲ್ಲದೆ ತನ್ನ ಸಾಮಾನ್ಯ ಭಕ್ತರನ್ನು ಸಂತುಷ್ಟಿಪಡಿಸಲು, ಕಾಸಿದ ಲೋಹದ ಗುಂಡನ್ನು ಕೈಯಲ್ಲಿ ಹಿಡಿಯುವುದೇ ಮೊದಲಾದ ಲೌಕಿಕ ಪವಾಡಗಳನ್ನು ಸಿದ್ಧರಾಮ ಮಾಡಿದ್ದಾನೆ. ಆದರೆ ಕೇವಲ ಈ ಪವಾಡಗಳು ಸಿದ್ಧರಾಮನ ಪ್ರಮುಖ ಸಾಧನೆಗಳಲ್ಲ. ಬಸವಣ್ಣನನ್ನು ಬಿಟ್ಟರೆ ಹನ್ನೆರಡನೆಯ ಶತಮಾನದಲ್ಲಿ ಸಿದ್ಧರಾಮನಂತೆ ಸಾಮಾಜಿಕವಾಗಿ ಜನಜೀವನದೊಂದಿಗೆ ಬೆರೆತು ಒಂದಾದ ಶಿವಶರಣರು ಬಹು ಕಡಿಮೆ ಸಂಖ್ಯೆಯಲ್ಲಿದ್ದಾರೆ.

ಸಿದ್ಧರಾಮನ ವ್ಯಕ್ತಿತ್ವದ ಈ ಮುಖವನ್ನು ರಾಘವಾಂಕನು ಬಹು ಸಮರ್ಥವಾಗಿ ನಿರೂಪಿಸಿದ್ದಾನೆ.

ಸಿದ್ಧರಾಮನ ಜನಪ್ರಿಯತೆ ಮತ್ತು ಪ್ರಭಾವಗಳು ಆ ಕಾಲದಲ್ಲಿ ಹೇಗಿದ್ದಿರಬಹುದೆಂಬುದನ್ನು ತಿಳಿಯಲು ಒಂದು ಪ್ರಸಂಗ ನಮಗೆ ಸಹಾಯ ಮಾಡುತ್ತದೆ. ಸಿದ್ಧ ಸಂಕೇತದಂತೆ ವೀರ ಜಗದೇವನಿಂದ ಬಿಜ್ಜಳಭೂಪ ಅಳಿದಮೇಲೆ ಅವನ ತಮ್ಮ ಕರ್ಣದೇವ ರಾಜನಾಗುತ್ತಾನೆ. ವೀರಶೈವ ಶರಣರಿಗಿದ್ದ ಜನಬೆಂಬಲ ಮತ್ತು ಮಹಾತ್ಮೆಯನ್ನು ಅರಿತಿದ್ದ ಕರ್ಣದೇವ ತನ್ನ ಪಟ್ಟಾಭಿಷೇಕ ಸಿದ್ಧರಾಮ ಶಿವಯೋಗಿಯ ಹಸ್ತದಿಂದ ನೆರವೇರಬೇಕೆಂದು ಬಯಸುತ್ತಾನೆ. ಈ ಸಂಕಲ್ಪ ಗುರುಭಕ್ತಿಯದಿರಲಿ ಅಥವಾ ರಾಜಕೀಯ ಚತುರತೆಯದಿರಲಿ ಅವನ ಮಂತ್ರಿಗಳು ಕೆರೆಯ ಕೆಲಸದಲ್ಲಿ ನಿರತನಾಗಿದ್ದ ಸಿದ್ಧರಾಮನಲ್ಲಿಗೆ ಬರುತ್ತಾರೆ. ಕರ್ಣದೇವನ ಆಸೆಯನ್ನು ನಿವೇದಿಸುತ್ತಾರೆ. ಪಲ್ಲಕ್ಕಿಯೇರಲು ಬೇಡಿದ ಅವರಿಗೆ ಸಿದ್ಧರಾಮನು ಕೊಟ್ಟ ಉತ್ತರ ಅವನ ವ್ಯಕ್ತಿತ್ವಕ್ಕೆ ಬರೆದ ಭಾಷ್ಯದಂತಿದೆ.

> ನಸುನಗುತ್ತೀ ಹೊನ್ನಪೀಠವೇಕೆ ಮಗಯ್ಯ
> ಕಿಸುವೊನ್ನ ಹೆಗ್ಗೊಡನೊ ಮಲ್ಲಿಕಾರ್ಜುನನ ಬಾ
> ಣನ ಕೊಂದು ಚೆರುವಿಗೆಯೋ ಸಟ್ಟುಗವೊ ಎಮಗೆ ಗುದ್ದಲಿಯೊ ಹಾರೆಯೊ–
> ಗೋರೆಯೊ
>
> ವಿಸುವಿದೇಕೆಮಗೆ ಪಟ್ಟಗಟ್ಟಿಸುವ ಜೋ
> ಯಿಸನೊ ಭೂಪಾಳಿಗನೊ ಹಾರುವನೊ ಬಹು ಮಂತ್ರ
> ವಿಸರದಾಚಾರ್ಯನೋ ದೇಶಕ್ಕೆ ಮುಖ್ಯನೋ ನಾನೇನಬಲ್ಲೆ......

ಕರ್ಮಯೋಗದಲ್ಲಿ ನಿರತನಾಗಿದ್ದ ಸನ್ಯಾಸಿಗೆ ರಾಜಕೀಯ ಜಂಜಡದಲ್ಲಿ ಆಸಕ್ತಿ ಇಲ್ಲ. ಆದರೆ ರಾಜದೂತರ ಒತ್ತಾಯ; ನೀವು ಬರದಿದ್ದರೆ 'ಜೀವವಂ ನಿಮಗೊಪ್ಪಿಸುವೆವೆಂದು' ಕತ್ತಿಯ ಅಲುಗಿಗೆ ಹಾಯ ಹೋಗುತ್ತಾರೆ. ವೃಥಾ ಪ್ರಾಣಹಾನಿಗೊಪ್ಪದೆ ಸಿದ್ಧರಾಮನು ಪಲ್ಲಕ್ಕಿಯೇರುತ್ತಾನೆ. ರಾಜಧಾನಿಯಲ್ಲಿ ಸಂಭ್ರಮದಿಂದ ಎದುರುಗೊಂಡ ಭೂಪನು ಕಾಣಿಕೆ ಸಹಿತ ಪಲ್ಲಕ್ಕಿಯ ತೆರೆ ಸರಿಸಿದರೆ ಅಲ್ಲಿ ಕಾಣುವುದೇನು? ಬರಿಯ ಬಯಲು. ಎರಡನೆಯ ಸಲವೂ ಹೀಗೆಯೇ ಆಯಿತು. ಸಿದ್ಧರಾಮನನ್ನು ಕರೆತರಲು ಕರ್ಣದೇವನ ಕಡೆಯಿಂದ ಬಂದ ಸೊಡ್ಡಳ ಬಾಚರಸ ಅವನ ಉಪದೇಶದಿಂದ ಸೊನ್ನಲಿಗೆಯಲ್ಲಿಯೇ ಶಿವೈಕ್ಯವಾದ. ಹೀಗೆ ಲೌಕಿಕ ಸಂಭ್ರಮದಿಂದ ದೂರ

ವಿದ್ದು ಪರೋಪಕಾರನಿರತನಾಗಿದ್ದ ಸಿದ್ಧರಾಮನ ಕೆಲಸಕಾರ್ಯಗಳ ವ್ಯಾಪ್ತಿ ದಿನದಿಂದ ದಿನಕ್ಕೆ ಹಿರಿದಾಯಿತು. ತನ್ನ ಆತ್ಮದ ಉದ್ಧಾರಕ್ಕೂ ಬಿಡುವು ದೊರೆಯದಾಯಿತು.

ಸಿದ್ಧರಾಮ–ಅಲ್ಲಮರ ಸಮಾಗಮ ಈ ಕಾವ್ಯದ ಶಿಖರ ಪ್ರಾಯವಾದ ಸನ್ನಿವೇಶ. 'ಸಿದ್ಧರಾಮನ ಬಾಳಿನ ಕೊನೆಗಾಲದಲ್ಲಿ ಅಲ್ಲಮನ ಪ್ರವೇಶದ ಅವಶ್ಯಕತೆ ಹೇರಳವಾಗಿತ್ತು. ಸಾಕಾರ ನಿಷ್ಠೆ ಭೂತಗಳಲ್ಲಿ ಅನುಕಂಪೆಯೆಂಬುದೇ ಪರಮಾರ್ಥವೆಂಬ ಕಲ್ಪನೆ ಸಿದ್ಧರಾಮನಿಗೆ ಉಂಟಾಗಿತ್ತು. ಇದರ ಗೌಣತೆಯನ್ನೂ ಅಲ್ಪ ಸಾರತೆಯನ್ನೂ ಸಿದ್ಧನಿಗೆ ಮನಗಾಣಿಸುವ ಮಹಾನುಭಾವ ಅಲ್ಲಮ. ಸಾಕಾರದಲ್ಲಿ ನಿಷ್ಠೆಯೂ ಭೂತದಲ್ಲಿ ದಯೆಯೂ ಉತ್ಕೃಷ್ಟವೆಂಬ ಅಂಶವನ್ನು ಯಾರೂ ಅಲ್ಲವೆನ್ನುವಹಾಗಿಲ್ಲ; ಆದರೆ ಅದಕ್ಕೂ ಒಂದು ಮಿತಿಯುಂಟು. ವ್ಯಕ್ತಿ ಎಷ್ಟೇ ಸಮರ್ಥನಿರಲಿ ಅವನಿಂದ ಲೋಕಕ್ಕಾಗುವ ಉಪಕಾರ ಎಷ್ಟು ಕಾಲ ತಾನೇ ನಡೆದೀತು? ಅವನು ಸದೇಹನಾಗಿರುವವರೆಗೆ ಅವನಿಂದಾಗುವ ಪರೋಪಕಾರ ಅವನು ವಿದೇಹನಾದ ಮೇಲೆ ಲೋಕಕ್ಕೆ ಗತಿಯೇನು? ಲೋಕದ ಲೀಲೆ ತನ್ನ ಪಾಡಿಗೆ ತಾನು ನಡೆಯದೆ ನಿಂತು ಬಿಡುವುದೇನು? ಈ ದೃಷ್ಟಿಯಿಂದ ಆಲೋಚನೆಮಾಡುವುದನ್ನು ಸಿದ್ಧರಾಮ ತನ್ನ ಸಾಕಾರ ಪೂಜೆ ಭೂತದಯೆಗಳ ಭರದಲ್ಲಿ ಮರೆತು ಬಿಟ್ಟಿದ್ದನು'.[5] ಅಲ್ಲಮ ಪ್ರಭು ಸಕಾಲಕ್ಕೆ ಬಂದು ಅವನನ್ನು ಎಚ್ಚರಿಸಿದನು. ಅಲ್ಲಮನು 'ಕರೆಯೋ ಒಡ್ಡರೆಯನಂ' ಎಂದು ಕರೆಸಿದಾಗಲೇ ಈತ 'ಜಗಜ್ಜನದ ಅಂತರ್ಯಾಮಿ' ಎಂಬುದನ್ನು ಕೆರೆಯ ಕೆಲಸದಲ್ಲಿ ನಿರತನಾಗಿದ್ದ ಸಿದ್ಧರಾಮ ಅರಿತ. ಆದರೂ 'ಬಡವ ಮಡಗಿದ ಕವವರದ ತೆರದ ಮಕುಟದ ಮರೆಯಲಿಂಗ'ವನ್ನು ತೋರಿಸಿ ಚಕಿತಗೊಳಿಸಹೋಗುತ್ತಾನೆ. ಅಲ್ಲಮ ಸಿದ್ಧರಾಮರ ಸಂಭಾಷಣೆ ನಾಟಕೀಯವಾಗಿದೆ. ಅಂದರೆ ರಾಘವಾಂಕನ ಉಳಿದ ಕಾವ್ಯಗಳಲ್ಲಿ ಕಂಡುಬರುವ ಒಣತರ್ಕದಂತಲ್ಲ. 'ಲೋಹದ ಸಂಗದಿಂದ ಕಿಚ್ಚು ಏಟನ್ನು ತಿನ್ನುವಂತೆ, ದೇಹದ ಸಂಗದಿಂದ ಆತ್ಮ ಆಯಾಸಪಡುತ್ತದೆ. ನೀನು ಬೇರೆಯವರಿಗಾಗಿ ಅತ್ತು ಕಣ್ಣನ್ನು ಕಳೆದುಕೊಳ್ಳುತ್ತಿದ್ದೀಯೆ' ಎನ್ನುತ್ತಾನೆ ಅಲ್ಲಮ. ಸಿದ್ಧರಾಮನೂ ಸುಲಭವಾಗಿ ಒಡಂಬಡುವುದಿಲ್ಲ. ಹಠಮಾಡುವ ಮಗುವನ್ನು ತಾಯಿ ಒಲಿಸಿ ಸಂತೈಸುವಂತೆ ಅಲ್ಲಮನು ಅವನನ್ನು ತಿದ್ದುತ್ತಾನೆ. ಅವನ ಮುಗ್ಧಗುಣ ಪರೋಪಕಾರ ಸ್ವಭಾವವನ್ನು ಹೊಗಳಿ, 'ಇನ್ನು ಮಾನವರ ನಡುವಿರಲು ಬೇಡ' ಎಂದು

ಸೂಚಿಸಿದ. ಪ್ರಭುವಿನ ಮಾತು ಸಿದ್ಧರಾಮನಿಗೆ ಒಪ್ಪಿಗೆಯಾಗುತ್ತದೆ. ಮುಂದೆ ಕೆಲವು ದಿನಗಳಲ್ಲಿಯೇ ಸೊನ್ನಲಿಗೆಯ ಕೆರೆಯ ಮಧ್ಯದಲ್ಲಿ ಒಂದು ಸಮಾಧಿ ಗುಹೆಯನ್ನು ಕಟ್ಟಿಸಿ, ದುಃಖಾರ್ತರಾದ ಶಿಷ್ಯರನ್ನು ಸಂತೈಸಿ ಅದರಲ್ಲಿ ಪ್ರವೇಶಿಸುತ್ತಾನೆ.

ಸಿದ್ಧರಾಮ ಚರಿತೆಯಲ್ಲಿ ಆತನು ಅಂದಂದು ಹಾಡಿರಬಹುದಾದ ಗೀತೆಗಳ ಸ್ಪಷ್ಟ ಉಲ್ಲೇಖವಿದೆ. ವಚನಕಾರರ ವಚನಗಳನ್ನು ಸಂವಾದಕ್ಕೆ ಅಳವಡಿಸುವ ಸನ್ನಾಹ ಬಹುಶಃ ಹರಿಹರ ರಾಘವಾಂಕರಿಂದಲೇ ಆರಂಭವಾಗಿದೆ. ಬಸವರಾಜ ದೇವರ ರಗಳೆಯಲ್ಲಿಯೂ 'ಗೀತಮಂ ಪಾಡಿದಂ' ಎಂಬ ಮಾತುಗಳು ಬರುತ್ತವೆ. ತಾವು ರಚಿಸುವ ಶರಣರ ಕಥೆಗಳಿಗೆ ಸಂಬಂಧಪಟ್ಟವರ ವಚನಗಳನ್ನು ಬಳಸಿಕೊಳ್ಳುವುದು ವೀರಶೈವ ಕಾವ್ಯಗಳ ಒಂದು ವೈಶಿಷ್ಟ್ಯ.

## 7

ಅದ್ಭುತವಾದ ದೃಶ್ಯ ನಿರ್ಮಾಣ ಶಕ್ತಿ ರಾಘವಾಂಕನ ಒಂದು ಪ್ರಮುಖ ವೈಶಿಷ್ಟ್ಯ. 'ಹರಿಶ್ಚಂದ್ರ ಕಾವ್ಯ' ಮತ್ತು 'ವೀರೇಶ ಚರಿತೆ'ಗಳಲ್ಲಿಯಂತೂ ಅದರೊಂದಿಗೆ ಉತ್ತಮ ಸಂವಾದ ಕೌಶಲವೂ ಸೇರಿಕೊಂಡಿರುವುದರಿಂದ ಕಾವ್ಯಕ್ಕಿಂತ ನಾಟಕ ವಾಚನದ ಅನುಭವವೇ ಉಂಟಾಗುತ್ತದೆ. ಎಲ್ಲ ಉತ್ತಮ ಕವಿಗಳಲ್ಲಿಯೂ ಈ ನಾಟ್ಯ ಪ್ರತಿಭೆ ಅಂಶತಃ ಇದ್ದೇ ಇರುತ್ತದೆ. ಆದರೆ ರನ್ನ ಮತ್ತು ರಾಘವಾಂಕರಂತಹ ಕವಿಗಳಲ್ಲಿ ಇದು ಪ್ರಧಾನವಾಗಿರುತ್ತದೆ. ಹದಿನೆಂಟನೇ ಶತಮಾನದ ಆದಿಭಾಗದಲ್ಲಿದ್ದ ಸಿಂಗರಾರ್ಯನವರೆಗೆ ಒಂದು ಅಭಿಜಾತ ನಾಟಕವೂ ಕನ್ನಡದಲ್ಲಿ ಸಿಕ್ಕಿಲ್ಲ ಎಂಬ ಅಂಶವನ್ನು ಗಮನಿಸಿದರೆ ರನ್ನ ರಾಘವಾಂಕರ ನಾಟ್ಯ ಗುಣ ಹೆಚ್ಚು ಅಭಿಮಾನಾಸ್ಪದವಾಗುತ್ತದೆ. ಕನ್ನಡದಲ್ಲಿ ನಾಟಕಗಳೇ ಇಲ್ಲದಿದ್ದರೆ ಇಂಥ ನಾಟಕೀಯ ಪ್ರತಿಭೆಯುಳ್ಳ ಕಾವ್ಯಗಳಿರುತ್ತಿದ್ದವೇ ? ಎಂಬುದು ವಿಚಾರಿಸಬೇಕಾದ ಅಂಶವಾಗಿದೆ. ಅದೇನೇ ಇರಲಿ, ರನ್ನನ 'ಗದಾಯುದ್ಧ' ಮತ್ತು ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ಗಳೆರಡೂ ಅಲ್ಪ ಸ್ವಲ್ಪ ಬದಲಾವಣೆಯಾದರೆ ಅತ್ಯುತ್ತಮ ನಾಟಕಗಳಾಗುತ್ತವೆ. ಈಗಾಗಲೇ ಕನ್ನಡದ ಹಿರಿಯ ವಿದ್ವಾಂಸರಿಬ್ಬರಿಂದ ಇವೆರಡೂ ಕಾವ್ಯಗಳು ನಾಟಕಗಳಾಗಿ ಮಾರ್ಪಟ್ಟು ರಂಜಿಸಿವೆ. ರಾಘವಾಂಕನಲ್ಲಿಯಂತೂ ಷಟ್ಪದಿಯ ರಚನೆಯಲ್ಲಿ ಸಂವಾದದ ಅನೇಕ ತುಣುಕುಗಳು ಬಹು ಸರಸವಾಗಿ ಹೊಂದಿಕೊಂಡು ಬರುತ್ತವೆ. ಒಂದೇ ಒಂದು ಷಟ್ಪದಿಯ ಕೇವಲ ಮೂರು ಸಾಲು

ಗಳಲ್ಲಿ ಸಂಭಾಷಣೆಯು ಅನೇಕ ತುಣುಕುಗಳು ಹೇಗೆ ಅಳಪಟ್ಟಿರುತ್ತವೆಯೆಂಬು ದನ್ನು ಕೆಳಗಿನ ಉದಾಹರಣೆಯಲ್ಲಿ ಕಾಣಬಹುದಾಗಿದೆ :

ವಿಶ್ವಾ — ನಡೆ ರಥವನೇರಿಕೊಳ್ ;
ಹರಿ — ಒಲ್ಲೆನ್ ;
ವಿಶ್ವಾ — ಏಕೊಲ್ಲೆ ?
ಹರಿ — ಪರರೊಡವೆ ಎನಗಾಗದು !
ವಿಶ್ವಾ — ಏಕಾಗದು ?
ಹರಿ — ಅನಿತ್ತೆನ್ !
ವಿಶ್ವಾ — ಇತ್ತಡೆ ಕೊಳಲು ಬಾರದೇ !
ಹರಿ — ಬಾರದು ; ಎಮಗಂ ಪ್ರತಿಗ್ರಹ ಸಲ್ಲದು.

ನಾಟಕವೊಂದರಲ್ಲಿ ಸಾಮಾನ್ಯವಾಗಿ ನಿರೀಕ್ಷಿಸುವ ಕಾಲ, ಕ್ರಿಯೆ ಮತ್ತು ಸ್ಥಳೈಕ್ಯಗಳನ್ನೂ "ಹರಿಶ್ಚಂದ್ರ ಕಾವ್ಯ"ದಲ್ಲಿ ಕಾಣಬಹುದಾಗಿದೆ. ಆದರೆ ರನ್ನನ "ಗದಾಯುದ್ಧ"ದಷ್ಟು ಪರಿಪೂರ್ಣವಾಗಿಲ್ಲ. ವಸಿಷ್ಠ ವಿಶ್ವಾಮಿತ್ರರ ಹೋರಾಟವೇ ಈ ಕಥೆಯ ಕೇಂದ್ರವಾಗಿದ್ದು, ಹರಿಶ್ಚಂದ್ರ ನಾಯಕನಾಗಿದ್ದಾನೆ. ಕಥೆಯ ಮುಖ್ಯ ಘಟನೆಗಳೆಲ್ಲಾ ಹರಿಶ್ಚಂದ್ರನ ಸತ್ವಪರೀಕ್ಷೆಯ ಗುರಿಯನ್ನೇ ಇಟ್ಟುಕೊಂಡಿರುವುದರಿಂದ ಕಾವ್ಯಕ್ಕೆ ಸಮಗ್ರತೆಯುಂಟಾಗಿದೆ.

ಪಾತ್ರರಚನೆ ಮತ್ತು ಪಾತ್ರಗಳ ಅಂತರಂಗ ಶೋಧನೆ ರಾಘವಾಂಕನಲ್ಲಿ ಎಷ್ಟೊಂದು ಕಲಾತ್ಮಕವಾಗಿರುತ್ತದೆಯೆನ್ನಲು ಒಂದು ಉದಾಹರಣೆ ಕೊಡಬಹುದು. ಹರಿಶ್ಚಂದ್ರನನ್ನು ಯಾವ ವಿಧದಲ್ಲಿಯೂ ಸುಳ್ಳುಗಾರನೆನಿಸಲು ತನಗೆ ಸಾಧ್ಯವಿಲ್ಲವೆಂದುಕೊಂಡ ವಿಶ್ವಾಮಿತ್ರ ಹತಾಶನಾಗಿ ಯೋಚಿಸುವ ಈ ಚಿತ್ರವನ್ನು ನೋಡಿ :

ಬಿಟ್ಟು ಹೆದರದೆ ಹೋಹ ನೃಪನ ಕಳೆಯಂ ಕಂಡು
ಕೆಟ್ಟೆನವನಿಯು ನೆಯ್ದೆ ಕೊಂಡಡಂ ತದ ನೊಡಂ
ಬಿಟ್ಟು ಶಪಥಕ್ಕೆ ಮೆಯ್ಗೊಟ್ಟನವನಲ್ಲಿ ಹುಸಿ ಹುಟ್ಟದಿನ್ನಕಟ ನಾನು
ನಟ್ಟು ಕೋಟಲೆಗೊಂಡನಂತ ಕಾಲಂ ತಪಂ
ಬಟ್ಟ ಪುಣ್ಯವ ನೀವೆನೆಂದೆನದು ಹೋದಡೊಳ
ಗಿಟ್ಟು ಕೊಂಬರೆ ಮುನಿಗಳೆನ್ನನೆಂದೋರಂತೆ ಮರುಗಿದಂ ಮುನಿನಾಥನು

ಕುಂದದೆ ವಸಿಷ್ಠನೊಳು ಮರೆತು ಬೆಂಗೊಟ್ಟುಳ್ಳ
ಹೆಂಡದ ತಪಃಫಲವ ಹೋಗಾಡಿದಾತನೀ
ಬಂದನೆಂದೆನ್ನನೆಲ್ಲಾ ಮುನೀಶ್ವರರು ನಗದಿರರೆಂದು ತನ್ನ ತಾನು

ಕೊಂದು ಕೊಳಬಗೆದು ಮತ್ತೆಚ್ಚತ್ತು ಚಿತ್ತದಲಿ
ನೊಂದಡೇನಹುದಿದಕೆ ತಕ್ಕುದಂ ಕಾಣಬೇ
ಕೆಂದು ಚಿಂತಿಸಿ ನೋಡಿ ಮತ್ತೊಂದುಪಾಯಮಂ ಕಂಡನಾನಿಷ್ಕರುಣನು

ಹರಿಶ್ಚಂದ್ರನ ಸ್ಥೈರ್ಯ ವಿಶ್ವಾಮಿತ್ರನನ್ನು ಹೇಗೆ ಅಲ್ಲಾಡಿಸಿತೆಂದರೆ ಅಪಮಾನಕ್ಕಿಂತ ಆತ್ಮಹತ್ಯೆ ಲೇಸೆಂದು ಆತ ಆಲೋಚಿಸುತ್ತಾನೆ. ಅರ್ಧ ತಪಸ್ಸು ಹೋದರೂ ಚಿಂತೆಯಿಲ್ಲ; ಆದರೆ ತಪಸ್ವಿಗಳೆದುರು ತನಗಾಗುವ ಸೋಲು ವಸಿಷ್ಠನಿಗಾಗುವ ಗೆಲುವು ಸಹಿಸಲು ಕಷ್ಟವಾದುದು. ವಸಿಷ್ಠ ವಿಶ್ವಾಮಿತ್ರರಿಗಿರುವ ಪರಂಪರಾಗತ ವೈರದ ಆಳವನ್ನೇ ಈ ವಿಚಾರ ಸರಣಿಯಲ್ಲಿ ಗುರುತಿಸಬಹುದು. ವಿಶ್ವಾಮಿತ್ರನ ಮನಸ್ಸಿನಲ್ಲಿ ಒಂದು ಕ್ಷಣದ ಮಟ್ಟಿಗೆ ನಡೆದಿರಬಹುದಾದ ಈ ತುಮುಲವನ್ನು ಕವಿ ಹಂತ ಹಂತವಾಗಿ ಚಿತ್ರಿಸಿಕೊಂಡು ಹೋಗಿದ್ದಾನೆ. ಹರಿಶ್ಚಂದ್ರನ ಸ್ಥೈರ್ಯವನ್ನು ಕಂಡು ಆತ ಬೆರಗಾದದ್ದು, ಇದರ ಪರಿಣಾಮವಾಗಿ ತನಗಾಗುವ ಅಪಮಾನ, ಅದನ್ನು ಸೈರಿಸುವುದಕ್ಕಿಂತ ಆತ್ಮಹತ್ಯೆ ಮಾಡಿಕೊಳ್ಳುವುದು ಲೇಸೆಂದು ಆಲೋಚಿಸುವುದು, ಆತ್ಮಹತ್ಯೆಯ ವಿಚಾರ ಬಂದಕೂಡಲೆ ತಪಸ್ವಿಯಾದ ಆತ ಎಚ್ಚರಗೊಂಡು ಮುಂದಿನ ಪರ್ಯಾಯವನ್ನು ಆಲೋಚಿಸುವುದು—ಇಷ್ಟೆಲ್ಲಾ ಆತನ ಮನಃಪಟಲದ ಮೇಲೆ ಚಕಚಕನೆ ಹಾದು ಹೋದದ್ದನ್ನು ನಾಟಕೀಯವಾಗಿ ವಿವರಿಸುವ ರಾಘವಾಂಕನ ಕೌಶಲವೇ ಸಾಕು, ಅವನನ್ನು ಮಹಾಕವಿಯೆಂದು ನಾವು ಒಪ್ಪಿಕೊಳ್ಳಬೇಕಾಗುತ್ತದೆ.

ಹೀಗೆ ನಾಟ್ಯಗುಣ ರಾಘವಾಂಕನ ಶೈಲಿಯ ಪ್ರಮುಖ ಲಕ್ಷಣ. ಷಟ್ಪದಿಗೆ ರಾಘವಾಂಕನೇ ಮೂಲ ಪುರುಷನಲ್ಲದಿದ್ದರೂ ವಾರ್ಧಕ ಷಟ್ಪದಿಯನ್ನು ಸಮರ್ಥ ಭಾಷಾಮಾಧ್ಯಮವನ್ನಾಗಿ ರೂಪಿಸಿದ ಮೊದಲ ಕವಿಯೀತ. ಆತನ ಮೇಲ್ಪಂಕ್ತಿಯನ್ನು ಮುಂದಿನ ಕವಿಗಳು ಅನುಸರಿಸಿದರು. ಚಂಪುವಿನ ಬಿಗು ಬೀಸುಗಳೆರಡನ್ನೂ ರಾಘವಾಂಕನ ವಾರ್ಧಕ ಷಟ್ಪದಿ ಒಳಗೊಳ್ಳುತ್ತದೆ. ರಾಘವಾಂಕನ ಭಾಷೆ ವಿಶೇಷವಾಗಿ ಅಚ್ಚಗನ್ನಡ ದೇಸಿಗೆ ಹತ್ತಿರವಾದುದು. 'ಕಡೆಗೆ ಮೆಣಸು ಹುಳಿತಡೆ ಜೋಳದಿಂ ಕುಂದೆ', 'ಕೋಣನೆರಡುಂ ಹೋರೆ ನಡುವಿರ್ದ ಗಿಡುವಂಗೆ ಮಿತ್ತು', 'ನಡೆವರೆಡಹದೆ ಕುಳಿತರೆಡಹುವರೆ' ಎಂಬಂತಹ ಗಾದೆ ಮಾತುಗಳು ಸಾಮತಿಗಳು ರಾಘವಾಂಕನಲ್ಲಿ ಹೇರಳವಾಗಿ ಸಿಗುತ್ತವೆ. ಕನ್ನಡದ ನುಡಿಗಟ್ಟನ್ನು ಆತ ಚೆನ್ನಾಗಿ ಬಳಸಿಕೊಂಡಿದ್ದಾನೆ.

ಆತನ ಉಪಮೆಗಳು ಮತ್ತು ರೂಪಕ ನಿರ್ಮಾಣ ಕುಶಲತೆಗೆ ಈಗಾಗಲೇ ನಾವು ಉದಾಹರಿಸಿದ ಪದ್ಯಗಳಿಂದಲೇ ನಿದರ್ಶನವನ್ನು ಪಡೆಯಬಹುದಾಗಿದೆ. ಹದಿನೆಂಟು ವರ್ಣನೆಗಳು, ಕವಿಸಮಯ, ಶ್ಲೇಷೆ ಮುಂತಾದ ಪರಂಪರಾಗತ ಕಾವ್ಯ ಸೌಲಭ್ಯಗಳನ್ನು ಆತ ಬಳಸಿಕೊಂಡಿದ್ದಾನೆ. 'ಹರಿಶ್ಚಂದ್ರ ಕಾವ್ಯ' ಮತ್ತು 'ಸಿದ್ಧರಾಮ ಚಾರಿತ್ರ'ಗಳಲ್ಲಿ ಇವು ಸಹಜವಾಗಿದ್ದರೆ 'ಸೋಮನಾಥ ಚಾರಿತ್ರ'ದಲ್ಲಿ ಕೇವಲ ಕಸರತ್ತುಗಳಾಗಿವೆ. ಎಷ್ಟೋ ಕಡೆ ಈತನ ಶಬ್ದ ವ್ಯಾಮೋಹ ಕಿವಿಗೆ ಗಡಚಿಕ್ಕುತ್ತದೆ. ಆದರೆ ಉಚಿತವರಿತು ಬಳಸಿದ ಶಬ್ದಾಲಂಕಾರದ ಸೊಗಸಿಗೂ ಆತನಲ್ಲಿಯೇ ಅತ್ಯುತ್ತಮ ಉದಾಹರಣೆಗಳೂ ಇವೆ.

ಒಟ್ಟಿನಲ್ಲಿ ರಾಘವಾಂಕ ಸಹಜ ಕವಿ. ಪಾಂಡಿತ್ಯ ಪ್ರತಿಭೆಗಳೆರಡೂ ಇರುವ ಈತ ಕನ್ನಡದಲ್ಲಿ ಮಹತ್ವ ಕೊಡಬೇಕಾದ ನಾಲ್ಕಾರು ಮಹಾಕವಿಗಳಲ್ಲಿ ಒಬ್ಬ.

ಅಡಿ ಟಿಪ್ಪಣಿಗಳು

1 ಜಿ. ಎಸ್. ಶಿವರುದ್ರಪ್ಪ, ಪರಿಶೀಲನ, ಪು. 79
(ಸತ್ಯಸಾಧಕ ಹರಿಶ್ಚಂದ್ರ)

2 ಅದೇ, ಪು. 73

3 ಅದೇ, ಪು. 73–74

4 ಡಿ. ಎಲ್. ನರಸಿಂಹಾಚಾರ್, ಸಂ. ಸಿದ್ಧರಾಮಚರಿತೆಯ ಸಂಗ್ರಹ, ಪು. 30

5 ಅದೇ, ಪು. 44–45

## ಸಂಕ್ರಮಣ ಕಾಲ

ರಾಘವಾಂಕನಿಂದ ಕುಮಾರವ್ಯಾಸನವರೆಗೆ ಷಟ್ಪದಿ ನಡೆದುಬಂದ ದಾರಿ ಪ್ರಯೋಗಶೀಲವಾದುದು. ಈ ಕಾಲದಲ್ಲಿ ಬಂದ ಕೆಲವು ಷಟ್ಪದಿಕಾರರು ತಮ್ಮ ಕಾವ್ಯಗಳಲ್ಲಿ ನಾನಾ ಷಟ್ಪದಿಗಳನ್ನು ಬಳಸಿದ್ದಾರೆ. ಕುಮಾರಪದ್ಮರಸ ಮತ್ತು ಕುಮುದೇಂದುವನ್ನು ಇಲ್ಲಿ ಉದಾಹರಿಸಬಹುದು. ಕುಮುದೇಂದುವಿನ ಮೂಲಕ ಜೈನ ಕವಿಗಳೂ ದೇಸಿ ಸಂಪ್ರದಾಯವನ್ನು ಪುರಸ್ಕರಿಸಿದರು. ನಯಸೇನ, ಬ್ರಹ್ಮಶಿವರಿಂದ ಆರಂಭವಾದ ಜೈನ ಕವಿಗಳ ದೇಸಿ ಒಲವು ಕುಮುದೇಂದುವಿನ ಷಟ್ಪದಿ ಬಳಕೆಯಲ್ಲಿ ಒಂದು ಹಂತವನ್ನು ತಲುಪಿತು. ಭೀಮ ಕವಿ ಭಾಮಿನಿ ಷಟ್ಪದಿಯನ್ನು ಹದಗೊಳಿಸುವ ಮೂಲಕ ಕುಮಾರ ವ್ಯಾಸನಿಗೆ ಪೀಠಿಕೆ ಹಾಕಿದನು. ಸಂಖ್ಯೆಯ ದೃಷ್ಟಿಯಿಂದ ವಿಪುಲವಾಗಿಲ್ಲ ದಿದ್ದರೂ ರಾಘವಾಂಕ, ಕುಮಾರವ್ಯಾಸರ ನಡುವೆ ಬಂದ ಷಟ್ಪದಿಕಾರರು ಈ ಕಾರಣಕ್ಕಾಗಿ ಮಹತ್ವವನ್ನು ಪಡೆಯುತ್ತಾರೆ. ಆದ್ದರಿಂದ ಅವರನ್ನು ಪ್ರತ್ಯೇಕವಾಗಿ ಪರಿಗಣಿಸಬಹುದಾಗಿದೆ.

ಹರಿಹರ, ರಾಘವಾಂಕ, ಕೆರೆಯಪದ್ಮರಸರು ಸಮಕಾಲೀನರಾಗಿದ್ದ ರೆಂಬುದು ಮುಂದಿನ ಅನೇಕ ವೀರಶೈವ ಕೃತಿಗಳಿಂದ ತಿಳಿದುಬರುತ್ತದೆ. ಕೆರೆಯ ಪದ್ಮರಸನ ಮಗನಾದ ಕುಮಾರ ಪದ್ಮರಸನು ರಾಘವಾಂಕನ ಸಮಕಾಲೀನ. ಈತನ ಕಾಲ 1220.[1] ವೀರಶೈವ ಕವಿಯಾದ ಈತನ 'ಸಾನಂದ ಚರಿತ್ರೆ'ವು ಒಂಬತ್ತು ಸಂಧಿಗಳಲ್ಲಿದೆ. "ಪೂರ್ಣವಿತ್ತನೆಂಬ ಋಷಿಯ ಮಗನಾದ ಸಾನಂದನು ನರಕದಲ್ಲಿ ಜನರು ನರಳುತ್ತಿದ್ದಾರೆಂದು ಕೇಳಿ ಅವರ ಸಂಕಟವನ್ನು ತಪಿಸುತ್ತೇನೆಂದು ಹೊರಟು ಪಂಚಾಕ್ಷರೀ ಮಹಿಮೆಯಿಂದ ನಾರಕಿಗಳಿಗೆಲ್ಲಾ ಸದ್ಗತಿಯನ್ನುಂಟುಮಾಡಿದನು—ಎಂಬುದು ಇದರ ಕಥಾಗರ್ಭ."[2] ಈ ಕಾವ್ಯದಲ್ಲಿ ಕುಸುಮ ಮತ್ತು ಭಾಮಿನಿ ಷಟ್ಪದಿಗಳ ಬಳಕೆಯಾಗಿದೆ.[3] ಕಥಾ ವಸ್ತುವಿನ ಮೂಲ ಸಂಸ್ಕೃತದ ಸ್ಕಾಂದಪುರಾಣ.

ದೇಸಿ ಪರಂಪರೆಯ ಜನಪ್ರಿಯತೆ ಹದಿಮೂರನೆಯ ಶತಮಾನದ ಹೊತ್ತಿಗೆ ಜೈನ ಕವಿಗಳನ್ನೂ ಆಕರ್ಷಿಸಿತು. ಸುಮಾರು 1275 ರಲ್ಲಿದ್ದನೆಂದು ಕವಿಚರಿತೆಕಾರರು ಹೇಳಿರುವ ಕುಮುದೇಂದು ನಾನಾ ಷಟ್ಪದಿಗಳಲ್ಲಿ ಒಂದು ರಾಮಾಯಣವನ್ನು ಬರೆದಿದ್ದಾನೆ. ಕುಮುದೇಂದು ಮುನಿಯ ತಂದೆ ಪದ್ಮನಂದಿವ್ರತಿ ; ತಾಯಿ ಕಾಮಾಂಬಿಕೆ , ದೊಡ್ಡಪ್ಪ ಅರ್ಹನಂದಿವ್ರತಿ ; ಗುರು ಮಾಘನಂದಿ ಮುನಿ. ಇವರೆಲ್ಲಾ ದೊಡ್ಡ ಪಂಡಿತರು. ಪ್ರತಿಭಾವಂತರು.

ಸಂಸ್ಕೃತದ ರಾಮಾಯಣ ಭಾರತೀಯ ದೇಶಭಾಷೆಗಳಲ್ಲಿ ಎಷ್ಟು ಜನ ಕವಿಗಳಿಂದ ಎಷ್ಟು ರೀತಿಯಲ್ಲಿ ಪುನರ್ರಚಿಸಲ್ಪಟ್ಟಿತ್ತೆಂಬುದನ್ನು ಲೆಕ್ಕ ಹಾಕುವುದೆ ಕಷ್ಟ. 'ತಿಣಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ' ಎಂದು ಕುಮಾರವ್ಯಾಸ ಹೇಳಿರುವ ಮಾತು ಸುಳ್ಳಲ್ಲ. ಹೀಗೆ ಜನಪ್ರಿಯವಾದ ವೈದಿಕ ರಾಮಾಯಣವನ್ನು ಅನುಸರಿಸಿ ಜೈನ ರಾಮಾಯಣ, ಬೌದ್ಧ ರಾಮಾಯಣಗಳೂ ಹುಟ್ಟಿಕೊಂಡವು. ಅವುಗಳದೇ ಆದ ಪರಂಪರೆಯೂ ಬೇರೆ ಬೇರೆ ಭಾಷೆಗಳಲ್ಲಿ ಬೆಳೆಯಿತು. ಕನ್ನಡದಲ್ಲಿಯೂ ಜೈನ ರಾಮಾಯಣಗಳಿವೆ. ನಾಗಚಂದ್ರನ 'ಪಂಪ ರಾಮಾಯಣ'ವಂತೂ ಪ್ರಸಿದ್ಧ ಕೃತಿಯೇ ಆಗಿದೆ. ಈಗಾಗಲೇ ಜನಪ್ರಿಯವಾಗಿದ್ದ ವೈದಿಕ ರಾಮಾಯಣಕ್ಕೆ ಜೈನ ವೇಷವನ್ನು ತೊಡಿಸಿ ಹಲವಾರು ವ್ಯತ್ಯಾಸಗಳನ್ನು ಮಾಡಿಕೊಂಡು ಧರ್ಮ ಪ್ರಸಾರ ಮಾಡುವ ಹಂಚಿಕೆಯೇ ಜೈನ ರಾಮಾಯಣಗಳ ಹುಟ್ಟಿಗೆ ಕಾರಣ. ಇಲ್ಲಿ ಬರುವ ಪಾತ್ರಗಳು ಹೆಚ್ಚು ಮಾನವೀಯವಾಗಿವೆ. ಜೈನ ರಾಮಾಯಣ ಪರಂಪರೆಯಲ್ಲಿ ಎರಡು ಪ್ರಮುಖ ಶಾಖೆಗಳಿವೆ. ಒಂದು ಗುಣಭದ್ರನದು, ಮತ್ತೊಂದು ವಿಮಲಸೂರಿಯದು. ಎರಡನೆಯದಾದ ವಿಮಲಸೂರಿಯ ಪರಂಪರೆಯೇ ಹೆಚ್ಚು ಜನಪ್ರಿಯವಾದುದು. ನಾಗಚಂದ್ರನ ರಾಮಾಯಣವೂ ವಿಮಲಸೂರಿಯ ಪರಂಪರೆಗೆ ಸೇರಿದೆ.

ಕುಮುದೇಂದು ರಾಮಾಯಣದಲ್ಲಿ ನಾಗಚಂದ್ರನ ಪ್ರಭಾವವಿದೆ. ಆದರೆ "ಪಂಪ ರಾಮಾಯಣದಂತೆ ರಾಮಕೇವಲಿಯ ಮೋಕ್ಷದವರೆಗೆ ಸಂಪೂರ್ಣವಾಗಿಲ್ಲ. ಅದು ರಾಮಚಂದ್ರನು ರಾವಣವಧೆಯಾದ ಮೇಲೆ ಸೀತಾಲಕ್ಷ್ಮಣರೊಡನೆ ಅಯೋಧ್ಯೆಗೆ ಬರುವಮಟ್ಟಿಗೆ ಮಾತ್ರವಿದೆ. ಬಹುತರವಾಗಿ ಅದು ಇಲ್ಲಿಗೇ ಮುಗಿದಿರಬಹುದೆಂದು ನಮ್ಮ ಊಹೆ."[4] ಈ ಗ್ರಂಥದ ಮಹತ್ವವು ಇವರ ಛಂದಸ್ಸಿನ ಪ್ರಯೋಗಶೀಲತೆಯಲ್ಲಿದೆ. ಬೇರೆ ಬೇರೆ ಷಟ್ಪದಿಗಳಿಗೆ

ರಾಗ ನಿರ್ದೇಶಮಾಡಿದ್ದಾನೆ. ಪರಿವರ್ಧಿನಿಯ ರಾಗ ದೇಶಾಖಿ, ನಾಟಿ, ಧನ್ಯಾಸಿ ; ಕುಸುಮ ಷಟ್ಪದಿಯ ರಾಗ ಫಳಮಂಜರಿ, ಮಲಹರಿ ; ಭಾಮಿನಿಯರಾಗ ಲಲಿತೆ, ಮಾಳವ ಗೌಳ, ಭೂಪಾಳಿ. ಎರಡು ಸಂಧಿಗಳಲ್ಲಿ ತಾಳ ನಿರ್ದೇಶನವೂ ಇದೆ. "ಮೃದುಪದಭಾವ, ಅರ್ಥ, ರಸ, ಗುಣ, ಅಲಂಕಾರಗಳನ್ನು ಬಯಸಿ ಇವನು ಗ್ರಂಥ ರಚಿಸಿದ್ದಾನೆ. ಬಯಕೆಗೆ ಅನುಗುಣವಾಗಿ ಹಾಡುಗಬ್ಬದಲ್ಲಿಯೂ ಪ್ರೌಢ ಕಾವ್ಯದ ಲಕ್ಷಣಗಳನ್ನು ತಂದಿದ್ದಾನೆ. ಹಳೆಯ ಹೊಸ ಶೈಲಿಗಳ ಮಿಶ್ರಣವನ್ನು ಮಾಡಿದ್ದಾನೆ. ವರ್ಣಕದಲ್ಲಿ ವಸ್ತುಕದ ಪ್ರೌಢಿಮೆಯನ್ನು ಮೆರೆಯುವ ಈ ಒಲವು ಇನ್ನು ಮುಂದೆ ಅನೇಕರಲ್ಲಿ ಕಂಡು ಬರುತ್ತದೆ."[5]

ಪದ್ಮಣಾಂಕನು ವೀರಶೈವ ಪರಂಪರೆಯಲ್ಲಿ ಪ್ರಸಿದ್ಧರಾದ ಸಕಲೇಶ ಮಾದರಸ, ಕೆರೆಯ ಪದ್ಮರಸ ಮತ್ತು ಕುಮಾರ ಪದ್ಮರಸರ ವಂಶಕ್ಕೆ ಸೇರಿದವನು. ಈತನ ತಂದೆ ಪದ್ಮಣಾರ್ಯ. ಕೆರೆಯ ಪದ್ಮರಸರಿಂದ ಎಂಟನೆಯ ತಲೆಯವನು. ಈತನ ಕಾಲವನ್ನು ಕ್ರಿ.ಶ. 1400 ಎಂಬುದಾಗಿ ವಿದ್ವಾಂಸರು ನಿರ್ಣಯಿಸಿದ್ದಾರೆ.[6] ಪದ್ಮಣಾಂಕನ 'ಪದ್ಮರಾಜಪುರಾಣ'ವು ವಾರ್ಧಕ ಷಟ್ಪದಿಯಲ್ಲಿದೆ. ಇದು ಕೆರೆಯ ಪದ್ಮರಸರ ಜೀವನ ಚರಿತ್ರೆ. ಹಂಪೆಯ ಹರೀಶ್ವರನ ವಿಚಾರವೂ ಬರುತ್ತದೆ. ಹೀಗಾಗಿ ಈ ಕಾವ್ಯಕ್ಕೆ ಐತಿಹಾಸಿಕ ಮಹತ್ವವಿದೆ. ಇತರೆ ವೀರಶೈವ ಪುರಾಣಗಳಂತೆ ಇರದೆ ಇಲ್ಲಿ ಕಥಾನಾಯಕನಿಗೆ ಹೆಚ್ಚಿನ ಮಹತ್ವ ಸಿಕ್ಕಿದೆ.

ಕಥಾನಾಯಕನಾದ ಕೆರೆಯ ಪದ್ಮರಸನ ಮುತ್ತಜ್ಜ ಮಲ್ಲರಸ ಕಲುಕುರ್ಕಿಯಲ್ಲಿ ದೊರೆಯಾಗಿದ್ದ. ವಿರಕ್ತನಾಗಿ ಶ್ರೀಶೈಲಕ್ಕೆ ಹೊರಟುಹೋದ. ಆತನ ಮಗನಾದ ಸಕಲೇಶಮಾದರಸನೂ ಕೆಲವು ಕಾಲ ದೊರೆಯಾಗಿ ವಿರಕ್ತಿ ಹೊಂದಿದವನು. ಇವನ ಮಗ ಮಾಯಿದೇವನು. ಆತನ ಮಗನಾದ ಪದ್ಮರಸನು ಹೊಯ್ಸಳದೊರೆ ನರಸಿಂಹ ಬಲ್ಲಾಳನಲ್ಲಿ ದಂಡಾಧಿಪತಿಯಾಗಿದ್ದ.

ಪದ್ಮರಸನು ಚತುಶ್ಯಾಸ್ತ್ರ ಪಂಡಿತನು. ಈತನು ಬೇಲೂರಿನಲ್ಲಿ ಕೆರೆಯೊಂದನ್ನು ಕಟ್ಟಿಸಲು ದೊರೆಯ ಭಂಡಾರದಿಂದ ಹನ್ನೆರಡು ಸಾಸಿರ ಹೊನ್ನುಗಳನ್ನು ತೆಗೆದುಕೊಂಡು ಒಬ್ಬ ಶಿವಸ್ವರೂಪಿ ಜಂಗಮ ಕೇಳಿದಾಗ ಕೊಟ್ಟು ಬಿಟ್ಟನಂತೆ. ಇವರ ವಿಚಾರಣೆ ದೊರೆಯಿಂದ ನಡೆದಾಗ ಪವಾಡದಿಂದ ಕೆರೆಯನ್ನು ನಿರ್ಮಿಸಿದನಂತೆ. ಇದರಿಂದಲೇ ಕೆರೆಯಪದ್ಮರಸನೆಂಬ ಹೆಸರು

ಈತನಿಗೆ ಬಂದಿತು. ಬಳಿಕ ಮಂತ್ರಿ ಪದವಿಯನ್ನು ಬಿಟ್ಟು ಪದ್ಮರಸನು ಬೇಲೂರಿನಲ್ಲಿಯೇ ಇರುತ್ತಿದ್ದಾಗ ತ್ರಿಭುವನತಾತನೆಂಬ ವೈಷ್ಣವ ಪರವಾದಿಯನ್ನು ತರ್ಕದಲ್ಲಿ ಸೋಲಿಸಿದನು. ಬಲ್ಲಾಳನ ಆಸ್ಥಾನದಲ್ಲಿ ನಡೆದ ಈ ವಾದದಲ್ಲಿ ತ್ರಿಭುವನತಾತನು ಸೋತು ಮೊದಲ ಒಪ್ಪಂದದಂತೆ ವೀರಶೈವ ದೀಕ್ಷೆ ಪಡೆದನಂತೆ. ಈ ಸಂದರ್ಭದಲ್ಲಿ ಪದ್ಮರಸನು ಶಿವಪಾರಮ್ಯವನ್ನು ಸ್ಥಾಪಿಸಲು ಅನೇಕ ಕಥೆಗಳನ್ನು ಉದ್ಧರಿಸಿದ್ದಾನೆ. ಪದ್ಮರಾಜಪುರಾಣದಲ್ಲಿ ಸುಮಾರು ಅರವತ್ತು ಕಥೆಗಳು ಅಲ್ಲಿ ಬಂದಿವೆ.

ಐತಿಹಾಸಿಕವಾಗಿ ಮಹತ್ವಪಡೆಯಬಹುದಾದ ಹೊಯ್ಸಳ ರಾಜ್ಯೋದಯದ ಕಥೆಯ ಉಲ್ಲೇಖವನ್ನು ಪದ್ಮರಾಜಪುರಾಣದಲ್ಲಿ ಕಾಣಬಹುದು. ಹಂಪೆಯ ಹರಿಹರ ಮತ್ತು ರಾಘವಾಂಕರ ವಿಚಾರವೂ ಬರುತ್ತದೆ. ತ್ರಿಭುವನ ತಾತನೊಡನೆ ವಾದ ಮಾಡಲು ಪದ್ಮರಸನು ಹೋಗಿದ್ದಾಗ ಅವನ ಜೊತೆಯಲ್ಲಿದ್ದವರಲ್ಲಿ ರಾಘವಾಂಕನೂ ಒಬ್ಬ.

ಹರೀಶ್ವರನ ಕಥೆಯನ್ನು ಸ್ವಲ್ಪ ವಿಸ್ತಾರವಾಗಿಯೇ ಹೇಳಿದ್ದಾನೆ. ಆತನು ಮಾಡಿದ ಕೆಲವು ಪವಾಡಗಳ ಉಲ್ಲೇಖವೂ ಇದೆ. ನರಸಿಂಹ ಬಲ್ಲಾಳನ ಆಸ್ಥಾನದಲ್ಲಿ ಕರಣಿಕನಾಗಿದ್ದ ಹರಿಹರ ಒಮ್ಮೆ ಇದ್ದಕ್ಕಿದ್ದಂತೆ ಎರಡೂ ಕೈಗಳನ್ನು ಎತ್ತಿ ಅದೃಶ್ಯವಾದದ್ದನ್ನೇನನ್ನೋ ಒರೆಸಿದನಂತೆ. ಇದೇನೆಂದು ತಿಳಿದುಕೊಳ್ಳಲು ಪದ್ಮರಸರು ಹಂಪೆಗೆ ಚರರನ್ನು ಕಳುಹಿಸಿದಾಗ, ಪಂಪಾ ವಿರೂಪಾಕ್ಷನ ತೆರೆಗೆ ಆ ಕಾಲದಲ್ಲಿ ಬೆಂಕಿ ಹತ್ತಿತ್ತೆಂದೂ, ಆದರೆ ಇದ್ದಕ್ಕಿದ್ದಂತೆಯೆ ಕೂಡಲೆ ನಂದಿಹೋಯಿತೆಂದೂ ಗೊತ್ತಾಗುತ್ತದೆ. ಬೇಲೂರಿನಿಂದಲೇ ಹರೀಶ್ವರನು ಇದನ್ನು ನಂದಿಸಿದನೆಂದು ಪದ್ಮರಸನು ಆಗ ಉಳಿದವರಿಗೆ ತಿಳಿಸಿದನು. ಹರಿಹರನು ಬೇಲೂರಿನಿಂದ ಹಂಪೆಗೆ ಹಿಂದಿರುಗುವ ಮಾರ್ಗದಲ್ಲಿ ಗುಹಾರಣ್ಯದೊಳಗಿನ ಹರಿಹರ ದೇವಾಲಯದಲ್ಲಿದ್ದ ಬ್ರಹ್ಮ ರಾಕ್ಷಸನನ್ನು ಓಡಿಸಿದನಂತೆ. ಆಂಧ್ರ ದೇಶದಿಂದ ಬಂದ ಗಣಿಕೆಯೊಬ್ಬಳು ಹರಿಹರನನ್ನು ಪ್ರೀತಿಸಿ ಅವನಲ್ಲಿಗೆ ಬಂದಳಂತೆ. ಆಗ ಅವನು ನಾನೇ ಶಿವನ ಗಂಡುದೊತ್ತು ; ಹೆಂಡಿರನ್ನು ಹೆಂಡಿರು ಪ್ರೀತಿಸುವುದುಂಟೆ ? ಎಂದನಂತೆ. ಭಕ್ತ ಹರಿಹರನ ಮಹಿಮೆಯಿಂದ ಆಕೆ ಮಾರ್ಪಟ್ಟು ಶಿವದೀಕ್ಷೆ ಪಡೆದು ಕೆಲ ಕಾಲದ ಬಳಿಕ ಪಂಪಾಕ್ಷೇತ್ರದಲ್ಲಿ ಶಿವೈಕ್ಯಳಾದಳು. ಪದ್ಮರಸನು ಕಾಶಿಗೆ ಹೋಗುವಾಗ ದಾರಿಯಲ್ಲಿ ಹರೀಶ್ವರನನ್ನು ಕಂಡು, 'ಉಮಾವರಂ ನಿಮ್ಮ

ನಿಂದಿಗೆಂಟನೆಯ ದಿನಕೆ ತನ್ನೊಳ್ ನೆರಪಲಿರ್ದಪಂ ; ಅಂತರಿಂ ನೀವೀಗಳೊರೆವೀ ಮಹಾಕಾವ್ಯಮಂ ತಡೆಯದನಿತರೊಳ್ ಪಾರ ವೈದಿಪುದು' ಎಂದು ಹೇಳಿದನಂತೆ. ಪದ್ಮರಸನು ಮುಂದೆ ಕೆಲವು ದಿನಗಳಲ್ಲಿಯೇ ಕಾಶಿಯಲ್ಲಿ ಶಿವೈಕ್ಯನಾಗುವನು.

"ಪದ್ಮರಾಜ ಪುರಾಣದ ವೈಶಿಷ್ಟ್ಯವಡಗಿರುವುದು ಕಥನ ಕಲೆಯಲ್ಲಿ. ಕವಿ ಪದ್ಮಣಾಂಕನು ರಸಿಕನಾಗಿ ಕಥನ ಕಲೆಯ ರಸಹೃವನ್ನರಿತಿರುವನು. ಆತನ ಕಾವ್ಯದಲ್ಲಿ ಸಾಂಪ್ರದಾಯಕವಾದ ಅಷ್ಟಾದಶವರ್ಣನೆಗಳು ಇಲ್ಲವೆ ಇತರ ವರ್ಣನೆಗಳು ಬಾರದೆ ಎಲ್ಲಿ ನೋಡಿದಲ್ಲಿ ಕಥೆಗಳ ಪ್ರಭಾವವೇ ಕಂಡುಬರುತ್ತದೆ. ವರ್ಣನೆಗಳಿಗಿಂತಲೂ ಕಥೆಯ ಕಡೆಗೆ ಕವಿಯ ಗಮನವಿದ್ದದ್ದು ಸ್ಪಷ್ಟವಾಗುತ್ತದೆ."[7]

"ಪಾಂಡಿತ್ಯ ಚಮತ್ಕೃತಿಗಳ ಜೋಡಣೆಯಿದ್ದರೂ, ಪದ್ಮಣಾಂಕನಲ್ಲಿ ಕಥನ ಕವಿಯ ಶಕ್ತಿ ಇದೆ, ಅಚ್ಚಗನ್ನಡದ ಅರಿವಿದೆ."[8] ಈ ಎರಡೂ ವಿಮರ್ಶೆಗಳೂ ಪದ್ಮಣಾಂಕನ ವೈಶಿಷ್ಟ್ಯವನ್ನು ಚೆನ್ನಾಗಿಯೇ ವಿವರಿಸುತ್ತಿವೆ.

ಹದಿನಾಲ್ಕನೆ ಶತಮಾನದ ಕೊನೆಯ ಭಾಗದಲ್ಲಿ ಜೀವಿಸಿದ್ದ ಭೀಮ ಕವಿ ಸಂಕ್ರಮಣ ಕಾಲದ ಷಟ್ಪದಿಕಾರರಲ್ಲಿ ಶ್ರೇಷ್ಠನಾದವನು. ಆತನ 'ಬಸವ ಪುರಾಣ' ಹಲವು ಕಾರಣಗಳಿಂದ ಮಹತ್ವವನ್ನು ಪಡೆದಿದೆ. ಭಾಮಿನಿ ಷಟ್ಪದಿಯಲ್ಲಿ ವಿಸ್ತಾರವಾದ ಕಾವ್ಯವೊಂದನ್ನು ಈತ ಮೊದಲು ಬರೆದಿದ್ದಾನೆ. ಕುಮಾರವ್ಯಾಸನ ಕೈಯಲ್ಲಿ ಭಾಮಿನಿ ಷಟ್ಪದಿ ಕುಣಿಯಲು ತಕ್ಕ ಸಿದ್ಧತೆಯನ್ನು ಭೀಮ ಕವಿ ನಡೆಸಿದ್ದ. ವೀರಶೈವ ಪುರಾಣ ಪರಂಪರೆಗೆ 'ಬಸವ ಪುರಾಣ' ಒಂದು ಬೆಲೆಯುಳ್ಳ ಕೊಡುಗೆ. ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವ ಪುರಾಣ'ವನ್ನು ಅನುಸರಿಸಿ ರಚಿಸಲಾಗಿರುವ ಈ ಕಾವ್ಯ ಜನಪ್ರಿಯ ವೀರಶೈವ ಪುರಾಣಗಳಲ್ಲೊಂದು. ಹರಿಹರನ ಬಳಿಕ ಬಸವಣ್ಣನವರ ಕಥೆಯನ್ನು ವಿಸ್ತಾರವಾಗಿ ಹೇಳಿದ ಮೊದಲಿಗನೆಂದರೆ ಭೀಮಕವಿ.

'ಬಸವ ಪುರಾಣ'ವಲ್ಲದೆ 'ಭೀಮಕವೀಶ್ವರ ರಗಳೆ' ಮತ್ತು 'ಭೃಂಗಿ ದಂಡಕ' ಎಂಬ ಎರಡು ಕೃತಿಗಳನ್ನು ಭೀಮಕವಿ ರಚಿಸಿದ್ದಾನೆ. ಕ್ರಿ. ಶ. 1369 'ಬಸವ ಪುರಾಣ'ದ ಗ್ರಂಥರಚನಾ ಕಾಲವೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಭೀಮಕವಿಯ ತಂದೆ ಶಿವಕವಿದೇವ. ಆಂಧ್ರಭಾಷಾ ಸತ್ಕವಿತ್ವ

ಕೋವಿದ. ಕನ್ನಡ ತೆಲುಗು ಭಾಷೆಗಳೆರಡರಲ್ಲಿಯೂ ಭೀಮಕವಿಗೆ ಇರುವ ಪಾಂಡಿತ್ಯ ವಂಶಪತ್ತವಾದುದು. ಪ್ರಚಾರದಲ್ಲಿರುವ ಕಥೆಯೊಂದರ ಪ್ರಕಾರ ಭೀಮಕವಿ ಹರಿಹರ ರಾಘವಾಂಕರ ಮೇಲ್ವಿಚಾರಣೆಯಲ್ಲಿ ಬೆಳೆದವನು. ಆತನ ತಂದೆ ಶಿವಕವಿದೇವನು 'ತನಗೊಬ್ಬ ಮಗನಾದರೆ ನಿಮ್ಮ ಪಾದಸೇವೆ ಮಾಡು ತ್ತಿರುವ ರಾಘವಾಂಕನಲ್ಲಿ ಓದಿಸುತ್ತೇನೆ'ಂದು ಹರಿಹರಗೆ ಹೇಳಿದ್ದನಂತೆ. ಭೀಮಕವಿ ಬೆಳೆದು ದೊಡ್ಡವನಾದ ಮೇಲೆ ಹರಿಹರನಲ್ಲಿಗೆ ಕರೆತಂದು, ಆತನ ನಿರೂಪದಂತೆ ರಾಘವಾಂಕನಿಗೆ ಒಪ್ಪಿಸಿದ. ರಾಘವಾಂಕನ ಪದತಲದಲ್ಲಿ ಕವಿತಾ ವಿದ್ಯೆಗಳನ್ನು ಭೀಮಕವಿ ಕಲಿತು 'ಭೃಂಗಿ ದಂಡಕ'ವನ್ನು ರಚಿಸಿದ. ಹರಿಹರ, ರಾಘವಾಂಕ ಮತ್ತು ಭೀಮಕವಿಗಳಿಗೆ ಕಾಲದ ಅಂತರ ಜಾಸ್ತಿ ಇದೆ. ಅಲ್ಲದೆ ಭೀಮಕವಿ ನೇರವಾಗಿ ರಾಘವಾಂಕನನ್ನು ತನ್ನ ಗುರು ಎಂದು ಹೇಳಿ ಕೊಂಡಿಲ್ಲ. ಹರಿಹರ ರಾಘವಾಂಕರ ಕೃಪೆಯಿಂದ ಕಾವ್ಯ ರಚಿಸುತ್ತಿರುವುದಾಗಿ ಹೇಳಿದ್ದಾನೆ. "ಆದುದರಿಂದ ರಾಘವಾಂಕನ ನೇರವಾದ ಶಿಷ್ಯ ಎನ್ನುವುದಕ್ಕಿಂತ ಹರಿಹರ ರಾಘವಾಂಕರ ಹಿರಿಮೆಯನ್ನು ಒಪ್ಪಿಕೊಂಡು ಆ ಪರಂಪರೆಯಲ್ಲಿ ನಡೆದವನೆಂದು ಇಟ್ಟುಕೊಳ್ಳುವುದು ಹೆಚ್ಚು ಸೂಕ್ತವೆನ್ನಿಸುತ್ತದೆ."[9]

ಬಸವ ಪುರಾಣದ ಪೀಠಿಕಾ ಸಂಧಿಯಲ್ಲಿ ತಾನು ಬರೆದ ಕಾವ್ಯದ ಮೂಲ ಪ್ರೇರಣೆಯನ್ನು ಕುರಿತು ಕವಿ ಹೇಳಿಕೊಂಡಿದ್ದಾನೆ. ಈತ ಬಸವಚರಿತೆಯನ್ನು ಬರೆಯುವ ಸನ್ನಾಹದಲ್ಲಿದ್ದಾಗ ಒಮ್ಮೆ ಶಿವಯೋಗ ನಿದ್ರೆಯಲ್ಲಿದ್ದನಂತೆ. ಆಗ ಪಾಲ್ಕುರಿಕೆ ಸೋಮನಾಥನು ಕನಸಿನಲ್ಲಿ ಬಂದು ಅಭಯವಿತ್ತನಂತೆ. ಆತನ ಆಣತಿಯಂತೆ ಈತ 'ಬಸವ ಪುರಾಣ' ವನ್ನು ರಚಿಸಿದ. ತೆಲುಗಿನಲ್ಲಿರುವ 'ಬಸವ ಪುರಾಣ' ದ ಕರ್ತೃ ಪಾಲ್ಕುರಿಕೆ ಸೋಮನಾಥ. ಕನ್ನಡ 'ಬಸವ ಪುರಾಣ' ಮೂಲ ಕೃತಿಯನ್ನು ಎಷ್ಟೊಂದು ಅನುಸರಿಸಿದೆಯೆಂದರೆ ಇದು ತೆಲುಗು 'ಬಸವಪುರಾಣ'ದ ಅನುವಾದದಂತಿದೆಯೆನ್ನುತ್ತಾರೆ. ಭೀಮಕವಿಯೂ ಸಹ ಪಾಲ್ಕುರಿಕೆ ಸೋಮನಾಥನನ್ನು ಭಯ ಭಕ್ತಿಗಳಿಂದ ಒಪ್ಪಿದ್ದಾನೆ.

ಹರಹರನಂತೆ ಭೀಮಕವಿ ಕೇವಲ ಬಸವಣ್ಣನ ಚರಿತೆಯನ್ನು ಹೇಳು ವಷ್ಟಕ್ಕೇ ತನ್ನನ್ನು ಸೀಮಿತಗೊಳಿಸಿಕೊಂಡಿಲ್ಲ. ಬಸವ ಕಥೆಯೊಂದಿಗೆ ಹಾಸು ಹೊಕ್ಕಾಗಿ ಬರುವ ಸಮಕಾಲೀನ ಶಿವಶರಣರ ಕಥೆಗಳನ್ನೂ ಆತ ಹೇಳಿದ್ದಾನೆ; ಬಸವ ಪರಂಪರೆಯ ಹಿಂದಿನ ಶಿವಭಕ್ತರ ಕಥೆಗಳಿಗೂ ಎಡೆ ಮಾಡಿ ಕೊಟ್ಟಿದ್ದಾನೆ. ಹೀಗೆ ಬಸವನ ಕಥೆಯೆಂದರೆ ಒಂದು ಧಾರ್ಮಿಕ

ಪರಂಪರೆಯ ಕಥೆ. ಅದು ಆ ಪರಂಪರೆಗೆ ಸೇರಿದ ಎಲ್ಲರ ಕಥೆಗಳನ್ನೂ ಒಳಗೊಳ್ಳುವುದು ಸ್ವಾಭಾವಿಕವೇ ಆಗಿದೆ. ಕಾವ್ಯದ ಸಮಗ್ರತೆಗೆ ಇದರಿಂದ ಲಾಭವಾಗದಿರಬಹುದು. ಆದರೆ ಪುರಾಣಗಳೆಂದರೇ ಹೀಗೆ. ಎಲ್ಲ ಭಾರತೀಯ ಪುರಾಣಗಳೂ ಒಂದೊಂದು ವಿಶ್ವಕೋಶದಂತಿರುತ್ತವೆ. ಮೂಲ ಕಥೆ ದಾರದಂತಿದ್ದು ಅದಕ್ಕೆ ಅನೇಕಾನೇಕ ಉಪಕಥೆಗಳನ್ನು ಮತ್ತು ಧಾರ್ಮಿಕ ಮತ ತತ್ವ ನಿರೂಪಣೆಗಳನ್ನು ಪೋಣಿಸಲಾಗುತ್ತದೆ. ಉಳಿದ ಕೆಲವು ವೀರಶೈವ ಪುರಾಣಗಳೊಂದಿಗೆ ಹೋಲಿಸಿದಾಗ 'ಬಸವ ಪುರಾಣ' ಎಷ್ಟೋ ಮೇಲು.

ಹರಿಹರನ 'ಬಸವರಾಜ ದೇವರ ರಗಳೆ' ಬಸವಣ್ಣನ ಕಥೆಯನ್ನು ಹೇಳುವ ಮೊತ್ತಮೊದಲ ಕನ್ನಡ ಕೃತಿ. ಹರಿಹರನ ಬಳಿಕ ತೆಲುಗಿನ ಪಾಲ್ಕುರಿಕೆ ಸೋಮನಾಥ; ಅವನನ್ನು ಅನುಸರಿಸಿ ಕನ್ನಡದ ಬಸವ ಪುರಾಣ. ಭೀಮಕವಿ ಹರಿಹರನಿಗಿಂತ ಈಚಿನವನು. ಬಸವಣ್ಣನನ್ನು ಕುರಿತ ಸಾಮಗ್ರಿ ಇವನಿಗೆ ಹೆಚ್ಚು ಲಭ್ಯವಾಗಿರುವ ಸಾಧ್ಯತೆಯಿದೆ. ಅಲ್ಲದೆ ಪಾಲ್ಕುರಿಕೆ ಸೋಮನಾಥನ ಕಾಲದ ಹೊತ್ತಿಗೆ ವೀರಶೈವ ಧರ್ಮ ಪುರಾಣವೊಂದರ ನಿರ್ಮಿತಿಗೆ ತಕ್ಕ ಸ್ಥಿತಿಯಲ್ಲಿತ್ತು. ತಮಿಳು ನಾಡಿನ ಶಿವ ಪುರಾತನರು, ಕನ್ನಡದ ಶಿವಶರಣರು, ಅವರ ಪವಾಡಗಳು ಇದೆಲ್ಲವನ್ನೂ ಕ್ರೋಢೀಕರಿಸಿ ಬಸವ ಕಥೆಯಲ್ಲಿ ಪೋಣಿಸಿದರು. ಹರಿಹರನ 'ಬಸವರಾಜ ದೇವರ ರಗಳೆ' ಕಥಾನಾಯಕನಿಂದ ಅತ್ತಿತ್ತ ಸರಿಯದೆ, ಅತ್ಯಂತ ಸಹಜವಾದ ರೀತಿಯಲ್ಲಿ ಬಸವನ ಚಿತ್ರವನ್ನು ಕಟ್ಟಿಕೊಡುತ್ತದೆ. ಆತನದು ಕೇವಲ ಕಾವ್ಯ ದೃಷ್ಟಿ. ಆದರೆ ಭೀಮಕವಿಯದು ಪುರಾಣ ಕಾವ್ಯ ದೃಷ್ಟಿ.

ಬಸವಣ್ಣನ ಜೀವಿತಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳಲ್ಲಿಯೂ ಹರಿಹರ ಮತ್ತು ಭೀಮಕವಿಗೆ ವ್ಯತ್ಯಾಸವಿದೆ. ಬಸವಣ್ಣನ ಜನನ, ಉಪನಯನದ ಪ್ರಸಂಗ, ಗೃಹತ್ಯಾಗ, ಕಲ್ಯಾಣ ಪಟ್ಟಣಕ್ಕೆ ಬಂದಾಗಿನ ಹಿನ್ನೆಲೆ, ಬಿಜ್ಜಳ–ಬಸವರ ಸಂಬಂಧ ಮುಂತಾದ ಅನೇಕ ವಿಷಯಗಳಲ್ಲಿ ಭಿನ್ನಾಭಿಪ್ರಾಯವಿದೆ. ಆದರೂ ಹರಿಹರ ಭೀಮರಿಬ್ಬರೂ ಬಸವಣ್ಣನ ಮಹಾಪುರುಷತ್ವವನ್ನು ಒಪ್ಪಿದವರು. ಇಬ್ಬರೂ ಪವಾಡಗಳು ಮತ್ತು ದೈವೀಶಕ್ತಿಯ ಹಿನ್ನೆಲೆಯನ್ನು ಬಸವ ಕಥೆಗೆ ಅಳವಡಿಸಿಕೊಂಡಿದ್ದಾರೆ. ಆದುದರಿಂದ ಈ ವ್ಯತ್ಯಾಸಗಳು ಅಷ್ಟೊಂದು ಮಹತ್ವದವುಗಳಲ್ಲ.

'ಬಸವ ಪುರಾಣ' ದ ಕಥೆ ಕೈಲಾಸದಿಂದಲೇ ಆರಂಭವಾಗುತ್ತದೆ. ನಾರದನ ಪ್ರಾರ್ಥನೆಯಂತೆ ಪರಮೇಶ್ವರನು ಶಿವ ಧರ್ಮವನ್ನುದ್ಧರಿಸಲು ಭೂಲೋಕಕ್ಕೆ ವೃಷಭನನ್ನು ಕಳಿಸುತ್ತಾನೆ. ಇಂಗಳೇಶ್ವರ ಬಾಗೇವಾಡಿಯ ಬ್ರಾಹ್ಮಣರಾದ ಮಾದಿರಾಜ ದಂಪತಿಗಳಿಗೆ ಮಗನಾಗಿ ವೃಷಭ ಹುಟ್ಟಿದನು. ಉಪನಯನದ ವಯಸ್ಸಿಗೆ ಬಂದಾಗ ತಂದೆತಾಯಿಗಳ ಮಾತಿಗೆ ಒಡಂಬಡದ ಬಸವಣ್ಣನು ತನ್ನ ಸೋದರಿ ನಾಗಲಾಂಬೆಯೊಡನೆ ಸಂಗಮ ಕ್ಷೇತ್ರಕ್ಕೆ ಬರುತ್ತಾನೆ. ಉಪನಯನ ಮಹೋತ್ಸವಕ್ಕೆ ಬಂದಿದ್ದ ಸೋದರಮಾವ ಬಲದೇವ ಮಂತ್ರಿ, ಬಸವಣ್ಣನ ಧೈರ್ಯವನ್ನು ಮೆಚ್ಚಿ ಮಗಳನ್ನು ಕೊಟ್ಟು ಮದುವೆ ಮಾಡಿದ. ಇಲ್ಲಿಂದ ಮುಂದೆ ಬಸವಣ್ಣನ ಕಾರ್ಯಕ್ಷೇತ್ರ ದೊಡ್ಡದಾಗುವುದು. ಬಲದೇವನು ಸತ್ತು ಬಸವಣ್ಣನೇ ಬಿಜ್ಜಳನ ಮಂತ್ರಿಯಾದ ಮೇಲೆ ಅವನ ಮಹತ್ವ ಇನ್ನೂ ಹೆಚ್ಚುತ್ತದೆ. ಶಿವಧರ್ಮದ ಉನ್ನತಿಗಾಗಿ ಶ್ರಮಿಸುತ್ತಿದ್ದ ಬಸವಣ್ಣ ಅನೇಕ ಪವಾಡಗಳನ್ನು ಮಾಡಿದ. ಅವನ ಕೀರ್ತಿ ಎಲ್ಲೆಡೆಯಲ್ಲಿಯೂ ಹಬ್ಬಿತು. ಗುರುಲಿಂಗ ಜಂಗಮಾರಾಧನೆ, ಆರ್ತರ ಸೇವೆ, ರಾಜಕಾರ್ಯ ಮುಂತಾಗಿ ಅವನ ವ್ಯಕ್ತಿತ್ವ ಅನೇಕ ಮುಖವಾಗಿ ವಿಸ್ತರಿಸಿ ಆ ಕಾಲದ ವೀರಶೈವ ಧರ್ಮಕ್ಕೆ ನಾಯಕನಾದ. ಬಸವನ ಮಹಿಮೆಯನ್ನು ನಿರೂಪಿಸುವ ಸಂದರ್ಭಗಳನ್ನುಪಯೋಗಿಸಿಕೊಂಡು ಭೀಮಕವಿ ಅನೇಕಾನೇಕ ಶರಣರ ಪುರಾತನ ಭಕ್ತರ ಕಥೆಗಳನ್ನು ಹೇಳಿದ್ದಾನೆ. ಹೀಗೆ ದಿನದಿಂದ ದಿನಕ್ಕೆ ವರ್ಧಿಸುತ್ತಿದ್ದ ಬಸವಣ್ಣನ ಕೀರ್ತಿ ಬಿಜ್ಜಳನಿಗೆ ಅಸೂಯೆ ಹುಟ್ಟಿಸುವಂತಿರುತ್ತದೆ. ಬಸವ – ಬಿಜ್ಜಳರ ವಿರಸ ಹೆಚ್ಚಾದಂತೆ ಶಿವಭಕ್ತರಿಗೆ ಬಿಜ್ಜಳನ ಕಿರುಕುಳ ಜಾಸ್ತಿಯಾಗುತ್ತದೆ. ಬ್ರಾಹ್ಮಣ, ಜೈನ ಮತಾಭಿಮಾನಿಗಳೂ ರಾಜನನ್ನು ವೀರಶೈವ ವಿರೋಧಕ್ಕೆ ಪ್ರೋತ್ಸಾಹಿಸುತ್ತಾರೆ. ಪರಸ್ಪರ ರಕ್ತಸಂಬಂಧ ಬೆಳೆಸಿದ ಶಿವಭಕ್ತರಾದ ಅಲ್ಲಯ್ಯ ಮಧುವಯ್ಯರನ್ನು ಬಿಜ್ಜಳ ಕೊಲ್ಲಿಸಿ ಶಿವದ್ರೋಹಕ್ಕೆ ಕಾರಣನಾಗುತ್ತಾನೆ. ಶಿವದ್ರೋಹಕ್ಕೆ ಪ್ರತಿಯಾಗಿ ಜಗದೇವನಿಂದ ಹತನಾಗುತ್ತಾನೆ. ಇದರಿಂದ ಪ್ರಕ್ಷುಬ್ಧರಾದ ಶರಣರೆಲ್ಲ ಚೆದುರಿ ದಿಕ್ಕಾಪಾಲಾದರು. ಬಸವಣ್ಣನೂ ಸಂಗಮೇಶ್ವರನಲ್ಲಿ ಐಕ್ಯವಾದನು.

ಭೀಮಕವಿ ಉತ್ತಮ ರೀತಿಯ ಕಥನಕಾರ. ಪಾತ್ರರಚನೆ ಮತ್ತು ಸನ್ನಿವೇಶ ನಿರ್ಮಾಣದಲ್ಲಿಯೂ ಸಹಜತೆಯಿದೆ. ಬಸವಣ್ಣನು ಉಪನಯನವನ್ನು ತಿರಸ್ಕರಿಸುವ ಸನ್ನಿವೇಶ ನಿರ್ಮಾಣ ಮತ್ತು ಅಲ್ಲಿನ ಸಂವಾದ ಕುಶಲತೆ

ಗಳು ಮನನೀಯವಾಗಿವೆ. ಬಹುಪಾಲು ಕನ್ನಡ ಕವಿಗಳಂತೆ ಈತನಿಗೂ ಅಲ್ಲಲ್ಲಿ ಪಾಂಡಿತ್ಯದ ಮೋಹವಿದೆ. ಒಟ್ಟಾರೆ ಈತನ ಶೈಲಿ ಸುಂದರವಾಗಿದೆ. ಕುಮಾರವ್ಯಾಸ ಚಾಮರಸರಂತಲ್ಲದಿದ್ದರೂ ಸಹಜ ದೇಸಿಯ ಚೆಲುವಿದೆ. ಆತನ ಕಾವ್ಯರಚನಾ ನೈಪುಣ್ಯಕ್ಕೆ ಉದಾಹರಣೆಯಾಗಿ ಒಂದು ಪದ್ಯವನ್ನು ಗಮನಿಸಬಹುದು. ಇದು ಬೇಡರನ್ನು ವರ್ಣಿಸುವ ರೀತಿ :

ಒಡಲು ಗೊಂಡ ತಮಂಧ ಪಟಲವೊ
ನಡೆವ ನೀಲಾದ್ರಿಗಳೊ ಕೈಕಾ
ಲ್ಪಡೆದ ಕಜ್ಜಲ ಗಿರಿಗಳೋ ಕರ್ಬೊನ್ನ ಭಿತ್ತಿಗಳೊ
ನುಡಿಗಲಕ ಮಾತಂಗ ಸಂಘವೊ
ಹೆಡೆಯುಡುಗಿದ ಸಿತಾಹಿಗಳೊ ಎನ
ಲೆಡೆವಿಡದೆ ಸಂದಣಿಸಿ ಬೇಡರು ಬಂದರಾಯೆಡೆಗೆ

ಕನ್ನಡದ ನುಡಿಗಟ್ಟನ್ನು ಗಾದೆಮಾತು ಮತ್ತು ಹೋಲಿಕೆಗಳಲ್ಲಿ ಚೆನ್ನಾಗಿ ಹವಣರಿತು ಬಳಸಿದ್ದಾನೆ. 'ಕುಲ ಸತಿಯವೊಲು ಭಕ್ತಿ ಬೆಲೆವೆಣ್ಣಿನವೊಲು ಬ್ರಾಹ್ಮ್ಯ', 'ಇಳೆಗೆ ಮಾವಿನ ಬೀಜಮಂ ಬಿತ್ತಲದು ತಾಂ ಬೇವಹುದೆ', 'ಕುಲದ ಬೇರಿಂಗೆ ನೀನೆ ಗುದ್ದಲಿಗೊಳಲದೇಕೆ' ಎಂಬಂತಹ ಸಹಜ ಮಾತು ಗಳು ಭೀಮಕವಿಯಲ್ಲಿ ಸಾಕಷ್ಟು ಸಿಗುತ್ತವೆ. "ಕನ್ನಡದ ಪ್ರಥಮ ದರ್ಜೆಯ ಕವಿಗಳ ಸಾಲಿಗೇರುವಂತಹ ಪ್ರತಿಭೆಯ ಹೊಳಹನ್ನು ಭೀಮನಲ್ಲಿ ಕಾಣ ದಿದ್ದರೂ ಮಧ್ಯ ಮಾರ್ಗಕ್ಕಿಂತ ಸ್ವಲ್ಪ ಮಿಗಿಲಾಗಿಯೇ ನಿಲ್ಲಬಲ್ಲ ಕಾವ್ಯ ಸಂಪತ್ತು ಆತನಲ್ಲಿ ಕಾಣುತ್ತದೆ. ತನ್ನ ಕಾಲದ ಕವಿಗಳಲ್ಲಂತೂ ಈತ ಅತ್ಯಂತ ಶ್ರೇಷ್ಠ ದರ್ಜೆಗೆ ಸೇರಬಲ್ಲವನು".[10] ಬಸವಣ್ಣನವರ ವಚನಗಳಲ್ಲಿ ಕೆಲವನ್ನು ಸಮಯ ಬಂದಾಗ ಕಥಾರಚನೆಯಲ್ಲಿ ಅಳವಡಿಸಿಕೊಂಡಿರುವುದು 'ಬಸವ ಪುರಾಣ'ಕ್ಕೆ ಶೋಭೆಯುಂಟುಮಾಡಿರುವ ಸಂಗತಿ.

ಅಡಿ ಟಿಪ್ಪಣಿಗಳು

1 ರಂ. ಶ್ರೀ. ಮುಗಳಿ : ಪ್ರಾಚೀನ ಕನ್ನಡ ಸಾಹಿತ್ಯರೂಪಗಳು, ಪು. 197
2 ಆರ್. ನರಸಿಂಹಾಚಾರ್ : ಕರ್ಣಾಟಕ ಕವಿಚರಿತೆ (ಸಂಪುಟ 1) ಪು. 310
3 ಡಿ. ಎಲ್. ನರಸಿಂಹಾಚಾರ್ : ಕುಮುದೇಂದು ರಾಮಾಯಣ ವಿಚಾರ (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ), 24-3, ಪು. 225
4 ಕೆ. ಜಿ. ಕುಂದಣಗಾರ : ಸಂ. ಕುಮುದೇಂದು ರಾಮಾಯಣ, ಪು. 8

5 ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಪು. 199
6 ಆರ್. ಸಿ. ಹಿರೇಮಠ : ಸಂ, ಪದ್ಮರಾಜ ಪುರಾಣ, ಪು. 23
7 ಅದೇ, ಪು. 76
8 ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಪು. 233
9 ಎಚ್. ತಿಪ್ಪೇರುದ್ರಸ್ವಾಮಿ : ಭೀಮ ಕವಿ, ಪು 6
10 ಅದೇ, ಪು. 23

## ಕುಮಾರವ್ಯಾಸ

ಕುಮಾರವ್ಯಾಸನಿಂದ ಮುಂದೆ ಎರಡು ಶತಮಾನಗಳ ಕಾಲ ಷಟ್ಪದಿ ಸಾಹಿತ್ಯಕ್ಕೆ ಕನ್ನಡದಲ್ಲಿ ಅಗ್ರಮನ್ನಣೆ ದೊರೆಯಿತು. ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶರಂಥ ಮಹಾಕವಿಗಳು ಈ ಕಾಲದಲ್ಲಿ ಪ್ರಸಿದ್ಧರಾದರು. ಭಾಸ್ಕರ, ಲಕ್ಕಣ ದಂಡೇಶ, ಕುಮಾರ ವಾಲ್ಮೀಕಿ, ಕನಕದಾಸ ಮತ್ತು ವಿರೂಪಾಕ್ಷ ಪಂಡಿತರಂತಹ ಉತ್ತಮ ಕವಿಗಳೂ ಕಾವ್ಯ ರಚಿಸಿದರು. ಷಟ್ಪದಿಯನ್ನೂ ಸೇರಿಸಿಕೊಂಡು ಕನ್ನಡ ದೇಸಿ ಪರಂಪರೆಯೇ ಉಚ್ಛ್ರಾಯ ಸ್ಥಿತಿಗೇರಿದ ಕಾಲವಿದು. ಸಾಂಗತ್ಯದ ಶ್ರೇಷ್ಠ ಕವಿ ರತ್ನಾಕರವರ್ಣಿ, ತ್ರಿಪದಿಯ ಶಿಖರವಾದ ಸರ್ವಜ್ಞ ಬಂದದ್ದು ಈ ಕಾಲದಲ್ಲಿಯೇ ಎನ್ನುವುದನ್ನು ಗಮನಿಸಬೇಕು.

ಕನ್ನಡನಾಡಿನ ರಾಜಕೀಯ ಇತಿಹಾಸದಲ್ಲಿಯೂ ಕುಮಾರವ್ಯಾಸನ ಕಾಲ ಸಂಪದ್ಭರಿತವಾದುದು. ವಿಜಯನಗರದ ಸಾಮ್ರಾಜ್ಯವು ತನ್ನ ವೈಭವದ ತುತ್ತತುದಿಯಲ್ಲಿದ್ದ ಕಾಲವದು. ರಾಜಕೀಯಸ್ಥಿರತೆ ಸಾಮಾಜಿಕ ಜೀವನದ ಮೇಲೂ ಪ್ರಭಾವ ಬೀರಿದೆ. ಧರ್ಮ ಮತ್ತು ಸಾಹಿತ್ಯಗಳಿಗೆ ವಿಶೇಷ ಮನ್ನಣೆ ಮತ್ತು ಪ್ರೋತ್ಸಾಹಗಳು ದೊರೆತಿವೆ. ಧರ್ಮ ಸಾಹಿತ್ಯಗಳೆರಡರಲ್ಲಿಯೂ ಭಕ್ತಿಪರಂಪರೆಗೆ ಅಗ್ರ ತಾಂಬೂಲ ಸಿಕ್ಕಿದೆ.

ಕನ್ನಡದ ಮಹತ್ವದ ಕವಿಗಳಲ್ಲಿ ಅಗ್ರಗಣ್ಯನೂ ಷಟ್ಪದಿ ಪರಂಪರೆಯ ಶ್ರೇಷ್ಠ ಕವಿಯೂ ಆದ ಕುಮಾರವ್ಯಾಸನ ಕಾಲ, ದೇಶ, ಮತ, ಹೆಸರು ಯಾವುದೂ ಸ್ಪಷ್ಟವಿಲ್ಲ. ವಿದ್ವಾಂಸರು ಶೋಧಿಸಿ ತೆಗೆದ, ಕವಿಯನ್ನು ಕುರಿತ ಸಂಗತಿ ಸ್ಥೂಲವಾಗಿ ಹೀಗಿದೆ :

ಕುಮಾರವ್ಯಾಸನ ಹೆಸರು ನಾರಣಪ್ಪನೆಂದಿರಬಹುದು. ಗದುಗಿನ ವೀರನಾರಾಯಣಸ್ವಾಮಿ ಈತನ ಇಷ್ಟ ದೈವ. ಕ್ರಿ.ಶ. 1400 ಈತನ

ಕಾಲ. ಗದುಗಿನ ಸಮೀಪದಲ್ಲಿರುವ ಕೋಳಿವಾಡ ಈತನ ಊರು. ಅಲ್ಲಿನ ಶಾನುಭೋಗ ವೃತ್ತಿಯ ವಂಶಕ್ಕೆ ಸೇರಿದವನು. ಹರಿಹರರಲ್ಲಿ ಬೇಧಭಾವ ವಿಲ್ಲದ ಭಾಗವತ ಸಂಪ್ರದಾಯಕ್ಕೆ ಸೇರಿದವನು. ಜಾತಿಯಲ್ಲಿ ಬ್ರಾಹ್ಮಣನೇ ಇರಬೇಕು. ಸ್ಮಾರ್ತನಿರಬಹುದು. ಮಹಾಭಾರತದ ಹತ್ತು ಪರ್ವಗಳನ್ನು ಮಾತ್ರ ಈತ ಬರೆದಿರುವುದು. ಇಲ್ಲಿಗೆ ಗ್ರಂಥ ಸಮಾಪ್ತಿಯಾಗಿರಲು ವಿಶೇಷ ಕಾರಣವೇನೂ ಇಲ್ಲ, ಧರ್ಮರಾಯನ ಪಟ್ಟಾಭಿಷೇಕದೊಂದಿಗೆ ಕಥೆಯನ್ನು ಮುಕ್ತಾಯಗೊಳಿಸುವುದೇ ಆತನ ಉದ್ದೇಶ.

ಸ್ವಂತ ವಿಚಾರವನ್ನು ಸ್ವಲ್ಪವೂ ಹೇಳಿಕೊಳ್ಳದೆ ಇರುವ ಈ ಕವಿ 'ವೀರನಾರಾಯಣನೆ ಕವಿ, ಲಿಪಿಕಾರ ಕುವರವ್ಯಾಸ' ಎಂದಿದ್ದಾನೆ. ವಿನಯ, ಧನ್ಯಭಾವಗಳೆರಡೂ ವ್ಯಕ್ತವಾಗುವ ಈ ಹೇಳಿಕೆಯಿಂದ ಇತಿಹಾಸಕ್ಕೆ ಏನೂ ಸಹಾಯವಾಗುವುದಿಲ್ಲ. ಆದರೆ ಗದುಗಿನ ಭಾರತದ ಪೀಠಿಕಾ ಸಂಧಿಯಲ್ಲಿ ಬರುವ ಒಂದು ಪದ್ಯದ ಕಣ್ಸನ್ನೆಯನ್ನನುಸರಿಸಿ ದಂತಕಥೆಗಳು ಹುಟ್ಟಿ ಕೊಂಡಿವೆ :

ಹಲಗೆ ಬಳಪವ ಪಿಡಿಯದೊಂದ
ಗ್ಗಳಿಕೆ ಪದವಿಟ್ಟಳುಪದೊಂದ
ಗ್ಗಳಿಕೆ ಪರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ
ಬಳಸಿ ಬರೆಯಲು ಕಂಠಪತ್ರದ
ವುಲುಹುಗೆಡದಗ್ಗಳಿಕೆಯೆಂಬೀ
ಬಲುಹು ಗದುಗಿನ ವೀರನಾರಾಯಣನ ಕಿಂಕರಗೆ

ಈ ಪದ್ಯದಲ್ಲಿ ಕವಿಗೆ ತನ್ನ ಪಾಂಡಿತ್ಯ ಮತ್ತು ಪ್ರತಿಭೆಯ ಸತ್ವವನ್ನು ಕುರಿತು ಹೆಮ್ಮೆಯಿದೆ. 'ಕಿಂಕರಗೆ' ಎಂಬ ಮಾತಿನಲ್ಲಿ ವಿನಯವೂ ಇದೆ. ಆದರೆ ಎಲ್ಲಿಯೂ ಆತ ಅನಕ್ಷರಸ್ಥನಾಗಿದ್ದನೆಂಬ ಭಾವಕ್ಕೆ ಎಡೆಯಿಲ್ಲ. ಜನಗಳು ಮಾತ್ರ 'ಹಲಗೆ ಬಳಪವ ಪಿಡಿಯದ' ಅನಕ್ಷರಸ್ಥ ನಾರಣಪ್ಪನ ಕಥೆ ಸೃಷ್ಟಿಸಿದರು. ಇಂಥ ಐತಿಹ್ಯವೊಂದರ ಪ್ರಕಾರ ಈ ಕವಿ ಅನಕ್ಷರಸ್ಥನಾಗಿದ್ದ. ಅಧಿಕಾರಿಯೊಬ್ಬನ ಮನೆಯಲ್ಲಿ ಕೆಲಸಕ್ಕಿದ್ದ. ಅಲ್ಲಿ ನಡೆಯುತ್ತಿದ್ದ ಮಹಾ ಭಾರತದ ಪಾರಾಯಣದಲ್ಲಿ ಹತ್ತು ಪರ್ವಗಳನ್ನು ಕೇಳಿ, ತನಗೆ ಸರಿಕಂಡಂತೆ ಪುನರ್ರಚಿಸಿದ. ಮತ್ತೊಂದು ದಂತಕಥೆಯ ಪ್ರಕಾರವೂ ನಾರಣಪ್ಪ ಅವಿದ್ಯಾವಂತ. ದೇವರೇ ಆತನ ಕನಸಿನಲ್ಲಿ ಬಂದು ಮಹಾಭಾರತವನ್ನು ಬರೆಯಲು ಪ್ರೇರೇಪಿಸಿದ. ಒಂದು ದಿನ ಬ್ರಾಹ್ಮಣ ಸಂತರ್ಪಣೆಯೊಂದಕ್ಕೆ

ನಾರಣಪ್ಪ ಹೋಗಿದ್ದನಂತೆ. ಅಲ್ಲಿ ಒಬ್ಬ ಚಿಕ್ಕ ಹುಡುಗ ದೊಣ್ಣೆಗಾಗಿ ಹಠಮಾಡುತ್ತಿದ್ದ. ಎಲೆ ದೊನ್ನೆ ಹಂಚುತ್ತಿದ್ದವನು ಹುಡುಗನನ್ನು 'ಹಠ ಮಾರಿ, ದುರ್ಯೋಧನನಂತೆ', ಎಂದು ಛೀಮಾರಿ ಹಾಕಿದ. ಸಂತರ್ಪಣೆಗೆ ಬಂದಿದ್ದ ಮತ್ತೊಬ್ಬ ವೃದ್ಧ ಬ್ರಾಹ್ಮಣ ಈ ಮಾತನ್ನು ಕೇಳಿದೊಡನೆ ಕಣ್ಣಿ ನಲ್ಲಿ ನೀರು ತಂದ. ಊಟವನ್ನು ಅರ್ಧಕ್ಕೆ ನಿಲ್ಲಿಸಿ ಎದ್ದು ಹೋದ ಅಲ್ಲಿಯೇ ಇದ್ದ ಕುಮಾರವ್ಯಾಸನಿಗೆ ಈ ವೃದ್ಧ ಬ್ರಾಹ್ಮಣನ ಗುರುತ ಹತ್ತಿತು. ರಾತ್ರಿ ಕನಸಿನಲ್ಲಿ ಬಂದಿದ್ದವನು ಈತನೇ ಎಂದು ಸ್ಪಷ್ಟವಾಗಿ, ಅವನನ್ನು ಹಿಂಬಾಲಿಸಿದ. ಆಗ ತಾನು ಅಶ್ವತ್ಥಾಮನೆಂದು ತಿಳಿಸಿದ ಆತ ಮಹಾಭಾರತವನ್ನು ಬರೆಯಲು ಕುಮಾರವ್ಯಾಸನಿಗೆ ಸ್ಫೂರ್ತಿಯ ಅನುಗ್ರಹ ವನ್ನು ಮಾಡಿದನಂತೆ. ಆದರೆ ಒಂದು ಕರಾರು ಹಾಕಿದ ; ತನ್ನ ರಹಸ್ಯ ಯಾರಿಗೂ ಗೊತ್ತಾಗಬಾರದು ; ಗೊತ್ತಾದರೆ ಪರಿಣಾಮ ಒಳ್ಳೆಯ ದಾಗುವುದಿಲ್ಲ. ಕುಮಾರವ್ಯಾಸನೂ ಒಪ್ಪಿದ. ಅಶ್ವತ್ಥಾಮನ ಉಪದೇಶ ದಂತೆ ನಾರಣಪ್ಪ ದಿನವೂ ಸ್ನಾನಮಾಡಿ ಒದ್ದೆಬಟ್ಟೆಯನ್ನುಟ್ಟು ಕಾವ್ಯ ರಚಿಸಲು ತೊಡಗುತ್ತಿದ್ದನಂತೆ. ಯಾವುದೋ ಶಕ್ತಿ ಅವನಿಂದ ಈ ಕೆಲಸ ಮಾಡಿಸುತ್ತಿತ್ತು. ಒದ್ದೆಬಟ್ಟೆ ಒಣಗಿದಂತೆ ಇವನ ಕಾವ್ಯ ಪ್ರತಿಭೆ ಕುಗ್ಗು ತ್ತಿತ್ತು. ಹೀಗೆ ಹತ್ತುಪರ್ವಗಳ ರಚನೆ ಸಾಗಿತು. ಅಷ್ಟರಲ್ಲಿ ಕುತೂಹಲ ವನ್ನು ತಾಳಲಾರದ ನಾರಣಪ್ಪ ಅಶ್ವತ್ಥಾಮನೊಂದಿಗಾಗಿದ್ದ ಕರಾರನ್ನು ಮರೆತು ರಹಸ್ಯವನ್ನು ಬಯಲು ಮಾಡಿದ. ಅಲ್ಲಿಗೇ ಕಾವ್ಯ ಮತ್ತು ಕವಿ ಇಬ್ಬ ರಿಗೂ ಸಮಾಪ್ತಿಯಾಯಿತು.

ಈ ಬಗೆಯ ದಂತಕಥೆಗಳೆಲ್ಲಾ ಕವಿಯ ಮಹತ್ವವನ್ನು ಹೆಚ್ಚಿಸಲು ಸಹೃದಯರು ಹುಟ್ಟುಹಾಕಿದ ಕಲ್ಪನೆಗಳು. ವಾಸ್ತವವಾಗಿ ಕುಮಾರವ್ಯಾಸ ಸಾಕಷ್ಟು ವಿದ್ಯಾವಂತನಾಗಿದ್ದ. ಕನ್ನಡ ಸಂಸ್ಕೃತ ಭಾಷೆಗಳ ಕಾವ್ಯ ನಾಟಕ ಗಳ ಆಳವಾದ ಪರಿಶ್ರಮವಿತ್ತು. ವ್ಯಾಕರಣ, ಅಲಂಕಾರ ಮುಂತಾದ ಶಾಸ್ತ್ರ ಪಾಂಡಿತ್ಯವಿತ್ತು. ಜೊತೆಗೆ ಸಹಜವಾದ ಪ್ರತಿಭೆಯಿತ್ತು. ಮೇಲೆ ಉದಾ ಹರಿಸಿರುವ ಪದ್ಯದಿಂದ ನಮಗೆ ಗೊತ್ತಾಗುವುದು ಆತ ಪ್ರಜ್ಞಾಪೂರ್ವಕ ವಾದ ಕಲೆಗಾರನಲ್ಲವೆಂಬ ವಿಚಾರ. ಉಳಿದ ಕವಿಗಳಂತೆ ಹಲಗೆ ಬಳಪವನ್ನು ಹಿಡಿದು, ಬರೆದು, ತಿದ್ದಿ, ಪ್ರತಿಮಾಡದೆ ನೇರವಾಗಿ ಆತ ಬರೆಯುತ್ತಿದ್ದನಂತೆ. ಅವನ ಈ ಶಕ್ತಿಯನ್ನು ವಿದ್ವಾಂಸರೊಬ್ಬರು ಮೆಚ್ಚುಗೆಯಿಂದ ಪರಿಹಾಸ

ಮಾಡಿದ್ದಾರೆ. ನಾರಣಪ್ಪನ ಕಾವ್ಯದಲ್ಲಿ 'ಪದವಿಟ್ಟಳುಪು'ವುದಿರಲಿ ಪಂಕ್ತಿ ಪಂಕ್ತಿಗಳನ್ನೇ ಸಂಧಿಗಳನ್ನೇ ತೊಡೆದುಹಾಕಬೇಕಿತ್ತೆಂದೂ ಆಗ ಅವನು ಮತ್ತೂ ಶ್ರೇಷ್ಠ ಕವಿಯಾಗುತ್ತಿದ್ದನೆಂದೂ ಹೇಳಿದ್ದಾರೆ. ಪಂಪನ ಸಂಗ್ರಹ ಗುಣವನ್ನು ಮೆಚ್ಚಿಕೊಳ್ಳುವ ಕೆಲವರು ಅದನ್ನು ಕುಮಾರವ್ಯಾಸನಲ್ಲಿಯೂ ಕಾಣಲು ತವಕಿಸುತ್ತಾರೆ.

ದೇಸಿ ಪರಂಪರೆಯ ಕವಿಗಳು ಕಾವ್ಯ ಬರೆದದ್ದು ಪಂಡಿತ ಮಂಡಳಿಗಲ್ಲ. ಜನಪದ ಕವಿಯಂತೆ ವಿಶಾಲವಾದ ಶ್ರೋತೃ ಸಮೂಹವೊಂದನ್ನು ಅವರು ಗುರಿಯಾಗಿಟ್ಟುಕೊಂಡಿದ್ದರು. ಆದುದರಿಂದ ಪಂಪನ ಸಂಗ್ರಹ ಗುಣವನ್ನು ಕುಮಾರವ್ಯಾಸನಲ್ಲಿ ನಿರೀಕ್ಷಿಸಬಾರದು. ಭಾಗವತ ಕವಿಯಾದ ಆತನಲ್ಲಿ ಪ್ರವಚನ ಕಾರನ ವಾಚಾಳತ್ವವಿದೆ. ಸೀರೆ ಸೆಳೆಯಲು ನಿಂತ ದುಶ್ಶಾಸನ, ಬೆರಗು ಕವಿದ ಸಭೆ ಇವುಗಳ ನಡುವೆ ಕ್ಷಣವೊಂದು ಯುಗವಾಗಿರಬಹುದಾದ ಸಂದರ್ಭ ದಲ್ಲಿ ದ್ರೌಪದಿ ಆರ್ತಳಾಗಿ ಕೃಷ್ಣನನ್ನು ಭಜಿಸುತ್ತಾಳೆ. ಈ ನಾಮ ಸಂಕೀರ್ತನೆಗೆ ಸುಮಾರು ಇಪ್ಪತ್ತು ಷಟ್ಪದಿಗಳನ್ನು ಕವಿ ಮೀಸಲಿರಿಸಿದ್ದಾನೆ. ಅತಿ ಬುದ್ಧಿ ವಂತರಾದವರು ಇಲ್ಲಿ ಕವಿಯ ಔಚಿತ್ಯ ಪ್ರಜ್ಞೆಯನ್ನು ಪ್ರಶ್ನಿಸಬಹುದು. ಆದರೆ ಸಾವಿರಾರು ಜನರಿಂದ ಕೂಡಿದ ಶ್ರೋತೃ ಸಮೂಹದ ಮುಂದೆ ಇದನ್ನು ಗಮಕಿಯೊಬ್ಬನು ಹಾಡಿ ಕೀರ್ತಿಸಿ ವ್ಯಾಖ್ಯಾನಿಸಿದಾಗ ಜನ ಕಣ್ಣೀರು ಸುರಿಸುತ್ತಾ ಗಂಟೆಗಟ್ಟಲೆ ಸ್ತಬ್ಧರಾಗಿ ಕೇಳುತ್ತಾರೆ. ಉಚಿತಾನುಚಿತಗಳ ಪ್ರಶ್ನೆ ಅವರ ಮುಂದಿಲ್ಲ. ಇವರಲ್ಲಿ ಕವಿ ಯಾರಿಗಾಗಿ ಕಾವ್ಯ ಬರೆಯಬೇಕು? 'ಜನ ಬದುಕಬೇಕೆಂದು' ತಾವು ಬರೆದುದಾಗಿ ಷಟ್ಪದಿಕಾರರು ಹೇಳುತ್ತಾರೆ.

ಗದುಗಿನ ಭಾರತದ ವೈಶಿಷ್ಟ್ಯವೇನು ? ಎಂದು ಕೆಲವರು ಪ್ರಶ್ನಿಸುವ ದುಂಟು. ಏಕೆಂದರೆ ಹಳಗನ್ನಡ ಸಾಹಿತ್ಯವೆಲ್ಲ ಅವರ ಪಾಲಿಗೆ ಚರ್ವಿತ ಚರ್ವಣ : ಎಲ್ಲ ಕವಿಗಳೂ ಸಂಸ್ಕೃತದ ರಾಮಾಯಣ ಮಹಾಭಾರತಗಳನ್ನೇ ಪುನರಪಿ ಕನ್ನಡದಲ್ಲಿ ಹೇಳಿದರು. ಹೊಸದಾಗಿ ಕನ್ನಡದಲ್ಲಿಯಾಗಲೀ ಇತರ ಭಾರತೀಯ ಭಾಷೆಗಳಲ್ಲಿಯಾಗಲೀ ಸೃಷ್ಟಿಯಾಗಿರುವುದೇನು ?

ಕನ್ನಡದ ಮಟ್ಟಿಗೆ ಹೇಳುವುದಾದರೆ ಈ ಆರೋಪಕ್ಕೆ ತಳಬುಡವಿಲ್ಲ. ಹಳಗನ್ನಡ ಸಾಹಿತ್ಯದಲ್ಲಿಬಹು ಸಂಖ್ಯೆಯಲ್ಲಿರುವ ವೀರಶೈವ ಕವಿಗಳು ರಾಮಾಯಣ ಮಹಾಭಾರತಗಳನ್ನು ಆಕಸ್ಮಾತ್ತಾಗಿಯೂ ಮುಟ್ಟಲಿಲ್ಲ. ಜೈನ ಕವಿಗಳ ರಾಮಾಯಣ ಮಹಾಭಾರತಗಳು ವೈದಿಕ ಪರಂಪರೆಗಿಂತ ಭಿನ್ನವಾಗಿವೆ.

ವ್ಯಾಸ ವಾಲ್ಮೀಕಿಗಳ ಕಥೆಯ ಜಾಡಿನಲ್ಲೇ ನಡೆದಿದ್ದರೂ ಪಂಪ ಕುಮಾರವ್ಯಾಸರ ಕೃತಿಗಳು ವಿಶಿಷ್ಟವಾಗಿವೆ. ಕನ್ನಡ ನಾಡಿನಲ್ಲಿ ಇಂದಿನವರೆಗೂ ಅವುಗಳಿಗೆ ಎಲ್ಲ ವರ್ಗಗಳಲ್ಲಿಯೂ ಮನ್ನಣೆಯಿದೆ. ಹಾಗೆ ನೋಡಿದರೆ ಯಾವುದೇ ದೇಶದ ಸಾಹಿತ್ಯವೂ ತನ್ನ ಪ್ರಾಚೀನ ಪುರಾಣ ಇತಿಹಾಸಗಳಿಂದ ಸಂಪೂರ್ಣ ಮುಕ್ತವಾಗಿಲ್ಲ. ಹಳೆಯ ವಸ್ತುವನ್ನೇ ಪುನರ್‌ರಚಿಸುವುದು ಎಲ್ಲ ದೇಶ ಭಾಷೆಗಳಲ್ಲಿಯೂ ಸಾಮಾನ್ಯ. ವಸ್ತು ಯಾವುದೇ ಇರಲಿ ಕಾವ್ಯದ ಮಹತ್ವ ನಿಲ್ಲುವುದು ಕವಿಯ ಪ್ರತಿಭೆಯ ಬಲದ ಮೇಲೆ ಮತ್ತು ಆತನ ವೈಯಕ್ತಿಕ ಕಾಣ್ಕೆಯ ಸತ್ವದಿಂದ. ಇದರಿಂದಲೇ 'ವಿಕ್ರಮಾರ್ಜುನ ವಿಜಯ' ಮತ್ತು 'ಗದುಗಿನ ಭಾರತ'ಗಳು ಕನ್ನಡದ ಮೇರು ಕೃತಿಗಳಾಗಿ ಉಳಿದಿವೆ.

ಪಂಪ ಕುಮಾರವ್ಯಾಸರಿಬ್ಬರೂ ಮಹಾಭಾರತದ ವಸ್ತುವನ್ನೇ ಸ್ವೀಕರಿಸಿದ್ದರೂ, ಅವರಿಬ್ಬರ ದೃಷ್ಟಿ ಬೇರೆಯಾಗಿದೆ. ಅವರವರ ದೃಷ್ಟಿಗನುಸಾರವಾಗಿದೆ ಸೃಷ್ಟಿ. ಪಂಪ ಜೈನ ಕವಿ. ಆದುದರಿಂದ ಆತನಿಗೆ ಮಹಾಭಾರತ ಲೌಕಿಕ ಕಾವ್ಯ. ಅರ್ಜುನ ಆತನ ಕಾವ್ಯನಾಯಕ. ತನ್ನ ದೊರೆ ಅರಿಕೇಸರಿಯನ್ನು ಅರ್ಜುನನೊಂದಿಗೆ ಹೋಲಿಸಿ ಆತ ಕೃತಿ ರಚಿಸಿದ್ದಾನೆ. ಅಲ್ಲಿ ಸಮಕಾಲೀನ ಇತಿಹಾಸವೂ ಬೆರೆತಿದೆ. ಕುಮಾರವ್ಯಾಸನಿಗೆ ಮಹಾಭಾರತ ಕೃಷ್ಣಕಥೆ. ಆತನೇ ಕಾವ್ಯದ ನಾಯಕ. ಕೃಷ್ಣನ ಮೆಚ್ಚುಗೆಗಾಗಿಯೇ ಕೃತಿರಚನೆ. 'ಇದ ವಿಚಾರಿಸೆ ಬರಿಯ ತೊಳಸಿಯ ಉದಕದಂತಿರೆ ಇಲ್ಲಿ ಸೋಳ್ವುದು ಪದುಮನಾಭನ ಮಹಿಮೆ ಧರ್ಮ ವಿಚಾರ ಮಾತ್ರವನು' ಎಂದಿದ್ದಾನೆ ನಾರಣಪ್ಪ. ಪಂಪನದು ಸಂಗ್ರಹ ದೃಷ್ಟಿಯಾದರೆ ಕುಮಾರವ್ಯಾಸನದು ಭಾಗವತ ಪ್ರವಚನಕಾರನದು. ನೀತಿ ಬೋಧೆ ಕುಮಾರವ್ಯಾಸನ ಕಾವ್ಯದ ಪ್ರಮುಖ ಉದ್ದೇಶಗಳಲ್ಲೊಂದು. ವಿದುರ ನೀತಿಯಂಥ ಪ್ರಸಂಗಗಳು ಓದುಗರಿಗೆ ಬೇಸರ ತರಿಸುವಂತಿರಬಹುದು. ಆದರೆ ಕುಮಾರವ್ಯಾಸನೇ ಹೇಳಿರುವಂತೆ ಈ ಕಥೆ ಪುಣ್ಯಫಲಕಾರಿಯಾಗಿದೆ :

ವೇದ ಪಾರಾಯಣದ ಫಲಗಂ
ಗಾದಿ ತೀರ್ಥಸ್ನಾನ ಫಲ ಕೃ
ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮ ಯಾಗ ಫಲ
ಮೇದಿನಿಯನೊಲಿದಿತ್ತ ಫಲ ವ
ಸ್ತ್ರಾದಿ ಕನ್ಯಾದಾನ ಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ

ಪಂಪನೂ ಮಹಾಭಾರತದ ಕಥೆ ಲೋಕಪೂಜ್ಯವಾದುದೆಂದು ಹೇಳಿದ್ದಾನೆ. ಪ್ರಾಚೀನ ಭಾರತೀಯ ಸಾಹಿತ್ಯವೆಲ್ಲವೂ ನೀತಿ ಧರ್ಮಗಳನ್ನೇ ಪ್ರಧಾನ ಉದ್ದೇಶವನ್ನಾಗಿಟ್ಟುಕೊಂಡಿದೆ. ಅಲ್ಲದೆ ಒಬ್ಬ ಕವಿಯನ್ನು ಆತ ಬದುಕಿ ಬಾಳಿದ ಸಾಂಸ್ಕೃತಿಕ ಹಿನ್ನೆಲೆಯಲ್ಲಿಯೇ ನಾವು ಪರಿಶೀಲಿಸಬೇಕಾಗುತ್ತದೆ. ಈ ಹಿನ್ನೆಲೆಯಿದ್ದೂ ನಮಗೆ ಎಷ್ಟರಮಟ್ಟಿಗೆ ಆತ ಪ್ರಸ್ತುತನಾಗುತ್ತಾನೆಂಬುದನ್ನು ನೋಡಬೇಕು. ಕುಮಾರವ್ಯಾಸ, ಹರಿಹರ ಮುಂತಾದ ಉದಾರ ದೃಷ್ಟಿಯ ಭಕ್ತ ಕವಿಗಳು ಆಗ ನಮಗೆ ಹತ್ತಿರದವರಾಗುತ್ತಾರೆ.

## 2

ಕುಮಾರವ್ಯಾಸ ಎಂದು ತನ್ನನ್ನು ಕರೆದುಕೊಳ್ಳುವುದರಿಂದಲೇ ನಾರಣಪ್ಪನಿಗೆ ಮಹಾಕವಿವ್ಯಾಸನಲ್ಲಿ ಅತೀವ ಗೌರವವಿದೆಯೆಂಬುದು ವ್ಯಕ್ತವಾಗುತ್ತದೆ. ಸಂಸ್ಕೃತ ಭಾರತವನ್ನು ಪ್ರಮುಖ ಭಾಗಗಳಲ್ಲಿ ಕುಮಾರವ್ಯಾಸನು ಅನುಸರಿಸಿದ್ದಾನೆ. ವ್ಯಾಸ ಭಾರತವನ್ನುಳಿದ ಇತರ ಸಂಸ್ಕೃತ ಕಾವ್ಯ ನಾಟಕಗಳೂ ಆತನಿಗೆ ಪ್ರೇರಣೆ ಕೊಟ್ಟಿವೆ. ಅನೇಕ ಪ್ರಸಂಗಗಳಲ್ಲಿ ಸ್ವಂತ ಸೃಷ್ಟಿಯಿದೆ. ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದಿರಬಹುದಾದ ದಕ್ಷಿಣ ಭಾರತದ ಇತರ ಭಾಷೆಯ ಮಹಾಭಾರತಗಳಿಂದಲೂ ಆತ ಪ್ರಭಾವಿತನಾಗಿದ್ದಾನೆಂಬುದನ್ನು ವಿದ್ವಾಂಸರು ತೋರಿಸಿಕೊಟ್ಟಿದ್ದಾರೆ. ಪಂಪ ಭಾರತದ ಪ್ರಭಾವವೂ ಸಾಕಷ್ಟಿದೆ. ಇದೆಲ್ಲ ಸಾಮಗ್ರಿಯೂ ಕುಮಾರವ್ಯಾಸನಲ್ಲಿ ಅರಗಿ ಸ್ವತಂತ್ರವಾದ ಪ್ರತಿನಿರ್ಮಾಣವಾಗಿದೆಯೆಂಬುದೇ ಇಲ್ಲಿ ವಿಶೇಷವಾದ ಸಂಗತಿಯಾಗಿದೆ.

ಗದುಗಿನ ಭಾರತದ ವೈಶಿಷ್ಟ್ಯವಿರುವುದು ಅದರ ಕಥಾ ರಚನೆಯಲ್ಲಿ; ಸನ್ನಿವೇಶ ನಿರ್ಮಾಣ ಚಾತುರ್ಯದಲ್ಲಿ ರಸವತ್ತಾದ ಕೆಲವು ಪ್ರಸಂಗಗಳ ಪರಿಚಯದ ಮೂಲಕ ಇದನ್ನು ಮನದಟ್ಟು ಮಾಡಿಕೊಳ್ಳಬಹುದಾಗಿದೆ.

ಆದಿಪರ್ವದಲ್ಲಿ ಬರುವ ಪಾಂಡುವಿನ ವೃತ್ತಾಂತ ಕುಮಾರವ್ಯಾಸ ಭಾರತದ ಕರುಣಾಜನಕ ಪ್ರಸಂಗಗಳಲ್ಲೊಂದು. ಬೇಟೆಗೆ ಹೋಗಿದ್ದ ಪಾಂಡುರಾಜನೊಮ್ಮೆ ಗೊತ್ತಿಲ್ಲದೆ ಜಿಂಕೆಗಳ ಜೋಡಿಯ ರೂಪದಲ್ಲಿದ್ದ ಮುನಿದಂಪತಿಗಳ ಮೇಲೆ ಬಾಣ ಬಿಡುತ್ತಾನೆ. 'ನಿನ್ನಯ ಲಲನೆಯನು ನೀ ಕೂಡಿದಾಗಲೆ ಮರಣ ನಿನಗಹುದು' ಎಂಬ ಶಾಪವಿತ್ತು ಅವರು ಸತ್ತರು. ಈ ಘಟನೆಯಿಂದಾಗಿ ಸಂಸಾರದಲ್ಲಿ ಬೇಸತ್ತ ಪಾಂಡುರಾಜನು ಭೀಷ್ಮಾದಿಗಳ

ಅಪ್ಪಣೆ ಪಡೆದು ತನ್ನ ಇಬ್ಬರು ಹೆಂಡತಿಯರಾದ ಕುಂತಿ ಮಾದ್ರಿಯರೊಡನೆ ಅರಣ್ಯವಾಸಿಯಾದ. ಋಷಿ ಮುನಿಗಳ ಸಹವಾಸದಲ್ಲಿ ಜಪತಪ ಯೋಗದಲ್ಲಿ ಸಮಯವನ್ನು ಅವರು ಸವೆಸುತ್ತಿರುವಾಗ ದೂರ್ವಾಸಮುನಿಯ ಮಂತ್ರ ಫಲದಿಂದ ಕುಂತಿಮಾದ್ರಿಯರಿಗೆ ಐವರು ಮಕ್ಕಳಾಗುತ್ತಾರೆ. ಹತ್ತಾರು ವರ್ಷಗಳ ಕಠಿಣ ಬ್ರಹ್ಮಚರ್ಯೆಗೆ ಪಾಂಡು ಒಗ್ಗಿ ಹೋಗಿರುತ್ತಾನೆ. ಆದರೆ ಒಮ್ಮೆ ಬಂದ ವಸಂತಕಾಲ ಅವನ ಧೈರ್ಯದ ಕಟ್ಟೆಯನ್ನು ಒಡೆಯುತ್ತದೆ. ತನ್ನೆಲ್ಲ ಪರಿವಾರ ಸಮೇತ ವಸಂತ ಪಾಂಡುವಿನ ಮೇಲೆ ಧಾಳಿಯಿಟ್ಟನಂತೆ. ಸುತ್ತಮುತ್ತ ತಳಿರು, ಹಕ್ಕಿಗಳ ಇಂಚರ, ತುಂಬಿ ಹರಿವ ತೊರೆಗಳು ಇಂಥ ವಾತಾವರಣದಲ್ಲೊಮ್ಮೆ ಮಾದ್ರಿದೇವಿ 'ಸರ್ವಾಂಗ ಶೃಂಗಾರದ ವಿಲಾಸದಲ್ಲಿ' ವನದೊಳಗೆ ಸುತ್ತಾಡುತ್ತಿದ್ದಳು. ಅಲ್ಲಿಗೆ ಬಂದ ಪಾಂಡು ಅವಳನ್ನು ನೋಡಿ ಬೆರಗಾದ. ಈಕೆ ಮಾದ್ರಿಯೋ ರಂಭೆಯೋ, ಊರ್ವಶಿಯೋ ಅಥವಾ ಯಾರಾದರೂ ದೇವವಧುವೋ ಎಂಬ ಭ್ರಾಂತಿಗೊಳಪಟ್ಟ. ವಿಧಿಯು ವಸಂತನ ಕುಮ್ಮಕ್ಕಿನೊಂದಿಗೆ ಪಾಂಡುರಾಜನ ಬೇಟೆಯಾಡಿದ :

ತಾಗಿದವು ಶರನಿಕರ ಕಾಮನ
ಲಾಗು ವೇಗವದೆಂತುಟೋ ತೆಗೆ
ಹೂಗಣೆಗಳೈದಲ್ಲ ರೋಮಗಳೆಂಟು ಕೋಟಿಯಲಿ
ತೂಗಿ ನೆಟ್ಟವು ಕಣೆಗಳೆಂಬವೊ
ಲಾಗರುವನಳುಕಿದನು ಪ್ರಜ್ಞಾ
ಸಾಗರಂಗಳು ಮಧ್ಯಕಟಿ ಜಾನ್ವಂಘ್ರಿ ಮಿತವಾಯ್ತು

ಈ ಪದ್ಯದ ಮೊದಲ ಐದು ಸಾಲುಗಳು ಪಾಂಡುವಿನ ಕಾಮದ ತೀವ್ರ ಆವೇಗವನ್ನು ಸೂಚಿಸಿದರೆ, ಕೊನೆಯ ಸಾಲು ಅವನ ಪತನದ ಅನಿವಾರ್ಯತೆಯನ್ನು ಸೂಚಿಸುತ್ತದೆ. ಪಾಂಡುವಿನ ವಿವೇಕ ಸಮಸ್ತವೂ ಮಾದ್ರಿಯ ದೇಹದ ಹೊಕ್ಕುಳು, ಸೊಂಟ, ತೊಡೆ, ಕಾಲುಗಳಿಗೆ ಸೀಮಿತವಾಯಿತಂತೆ. ಹಿಂದಿನಿಂದ ಮರೆಸಿಹೋಗಿ ಅವಳ ಸೆರಗು ಹಿಡಿಯುತ್ತಾನೆ. ಬೇಡ ಬೇಡವೆಂದರೂ ಬಿಡದೆ 'ತರುಣಿಯ ತುರುಬ ಹಿಡಿದೆತ್ತಿದನು'. ಸ್ವಲ್ಪ ಹೊತ್ತು ಹೆಣಗಿ ಮಾದ್ರಿ, ಸುಮ್ಮನಾದಳು. ಬೇರೆ ಸಂದರ್ಭದಲ್ಲಿ ರಸವತ್ತಾಗಿ ಸ್ವಲ್ಪ ದೀರ್ಘವಾಗಿ ಬಣ್ಣಿಸಬಹುದಾಗಿದ್ದ ಈ ಪ್ರಣಯ ಸನ್ನಿವೇಶವನ್ನು ಕವಿ ಮೂರು ನಾಲ್ಕು ಪದ್ಯಗಳಲ್ಲಿ ಸಂಕ್ಷೇಪವಾಗಿ ಮುಗಿಸಿದ್ದಾನೆ. ಮುಂದೊದಗಿದ ಅನಾಹುತದ ಭಯಂಕರ ಪರಿಣಾಮದ ಹಿನ್ನೆಲೆಯಲ್ಲಿ ನೋಡಿದಾಗ ಕವಿಯ ಔಚಿತ್ಯ ಪ್ರಜ್ಞೆ

ಯನ್ನು ಮೆಚ್ಚಬೇಕಾಗುತ್ತದೆ. ಮುನಿಯ ಶಾಪದಿಂದ ಪಾಂಡು, ಮಾದ್ರಿಯ ದೇಹದ ಮೇಲೆಯೇ ಒರಗಿ ಚಿರ ನಿದ್ರೆಗೆ ಸಲ್ಲುತ್ತಾನೆ. ಮಾದ್ರಿಯ ಚೀರಾಟ ವನ್ನು ಕೇಳಿ ಕುಂತಿಯೊಡನೆ ತಪಸ್ವಿಗಳೂ ಮಕ್ಕಳೂ ಸ್ಥಳಕ್ಕೆ ಬರುತ್ತಾರೆ. ಮಾದ್ರಿ ಪಾಂಡುವಿನೊಡನೆ ಚಿತೆಯೇರಿದರೆ ಕುಂತಿ ಮಕ್ಕಳ ಹೊಣೆ ಹೊತ್ತು ಹಸ್ತಿನಾಪುರಕ್ಕೆ ಹಿಂದಿರುಗಿದಳು. ಭೋಗದ ತುತ್ತತುದಿಯಲ್ಲಿ ಸಂಸಾರದ ಅಸಾರತೆಯನ್ನು ಮನಗಾಣುವ ಜೈನ ಪುರಾಣಗಳ ಕಥೆಗಳನ್ನು ಈ ಸಂದರ್ಭ ನೆನಪಿಗೆ ತರುವಂತಿದೆ. ಆದಿಪುರಾಣದ ಶ್ರೀಮತಿ ವಜ್ರಜಂಘರ ಪ್ರಣಯ ದುರಂತದಂತೆಯೇ ತೀವ್ರವಾದ ಅನುಭವವನ್ನು ತಂದುಕೊಡುತ್ತದೆ. ಅಲ್ಲಿನಂತೆ ಇಲ್ಲಿಯೂ ಸಾವು ಮಿಂಚಿನ ವೇಗದಲ್ಲಿ ಪ್ರಣಯಿಗಳನ್ನು ಮರೆಸಿ ಆಹುತಿ ತೆಗೆದುಕೊಳ್ಳುತ್ತದೆ. ಪಾಂಡು ಮಾದ್ರಿಯರ ಸಾವು ಮನಸ್ಸನ್ನು ಕಲಕಿ ತೀವ್ರ ಮರುಕಕ್ಕೆ ಪಾತ್ರವಾಗುವುದು ಈ ಕಾರಣಕ್ಕಾಗಿ. ನಿಸರ್ಗದ ಸಮಸ್ತ ಶಕ್ತಿಯೂ ಒಂದಾಗಿ ಪಾಂಡುರಾಜನನ್ನು ಬೇಟೆಯಾಡುವ ಮತ್ತು ಅಸಹಾಯಕಳಾದ ಮಾದ್ರಿಯೂ ಇದಕ್ಕೆ ಕಾರಣವಾಗುವ ಸ್ಥಿತಿ ದಿಗ್ಭ್ರಮೆ ಗೊಳಿಸುವಂತಿದೆ.

ರಾಜಸೂಯಯಾಗದ ಅಗ್ರಪೂಜೆಯ ಪ್ರಸಂಗ ಗದುಗಿನ ಭಾರತದ ಸೊಗಸಾದ ನಾಟಕೀಯ ಸನ್ನಿವೇಶ. ಶ್ರೀಕೃಷ್ಣ ಮಹಿಮೆಯನ್ನು ಸಾರಲು ಕವಿಗೆ ಸುಸಂದರ್ಭ.

ಸಮಸ್ತ ರಾಜರನ್ನೂ ಗೆದ್ದ ಪಾಂಡವರು ರಾಜಸೂಯಯಾಗ ನಿರತ ರಾಗಿದ್ದಾರೆ. ಋಷಿಗಳು, ಬ್ರಾಹ್ಮಣರು, ಸಕಲ ಪ್ರಜೆಗಳು ಮತ್ತು ಬೇರೆ ಬೇರೆ ದೇಶದ ರಾಜ ಮಹಾರಾಜರುಗಳು ಯಾಗದಲ್ಲಿ ಭಾಗವಹಿಸಲು ಅಸಂಖ್ಯಾ ತರಾಗಿ ಬಂದಿದ್ದಾರೆ. ಭೀಷ್ಮ ಕೃಷ್ಣರ ನಿರ್ದೇಶನದಲ್ಲಿ ಧರ್ಮರಾಯನ ಯಜಮಾನಿಕೆಯಲ್ಲಿ ನಡೆಯುವ ಈ ಯಾಗದಲ್ಲಿ ಅಗ್ರಪೂಜೆ ಯಾರಿಗೆ ಸಲ್ಲ ಬೇಕೆಂಬ ಪ್ರಶ್ನೆ ಏಳುತ್ತದೆ. ಭೀಷ್ಮರು ಇದಕ್ಕೆ ಉತ್ತರಿಸಿ ನಿಸ್ಸಂಶಯವಾಗಿ ಈ ಗೌರವ ಶ್ರೀಕೃಷ್ಣನಿಗೆ ಸಲ್ಲಬೇಕೆನ್ನುತ್ತಾರೆ. ಸಹದೇವನು ಶ್ರೀಕೃಷ್ಣನನ್ನು ಭಕ್ತಿಪೂರ್ವಕವಾಗಿ ಅರ್ಘ್ಯ ಸಿಂಹಾಸನಕ್ಕೆ ತಂದು ಕೂರಿಸುತ್ತಾನೆ. ಇಲ್ಲಿ ಮಾನವ ಸ್ವಭಾವದ ವೈಚಿತ್ರ್ಯವನ್ನು ಕವಿ ಪದ್ಯದಲ್ಲಿ ಮನಮುಟ್ಟುವಂತೆ ವಿವರಿಸಿ ದ್ದಾನೆ. ಶಿಶುಪಾಲನೊಬ್ಬ ಮಾತ್ರ ಬಹಿರಂಗವಾಗಿ ಶ್ರೀಕೃಷ್ಣನಿಗೆ ಅಗ್ರಪೂಜೆ

ಸಲ್ಲುವುದನ್ನು ಪ್ರತಿಭಟಿಸುತ್ತಾನಾದರೂ ಅನೇಕರಿಗೆ ಇದು ಒಪ್ಪಿಗೆಯಿರಲಿಲ್ಲ ವೆನಿಸುತ್ತದೆ :

> ಕೆಲರು ಪಾಂಡವ ಮೈತ್ರಿಯಲಿ ಕೆಲ
> ಕೆಲರು ಕೃಷ್ಣನ ಒಲುಮೆಯಲಿ ಕೆಲ
> ಕೆಲರು ಧೀರತ್ವದಲಿ ಕೆಲರನುಚಿತದ ಭೀತಿಯಲಿ
> ಕೆಲರಿದೇಕೆವಗೆಂದು ಧರಣೀ
> ವಳಯದವನಿಪರಿದ್ದರವರೊಳು
> ಖಳ ಶಿರೋಮಣಿ ಮಸಗಿದನು ಭೂಪಾಲ ಕೇಳೆಂದ

ಶಿಶುಪಾಲನಿಗೆ ಮುಂದೆ ಒದಗಲಿರುವ ದುರ್ಮರಣಕ್ಕೆ ತಕ್ಕ ರೀತಿಯಲ್ಲಿ ಅವನನ್ನು ಕವಿ ಸಿದ್ಧಪಡಿಸುತ್ತಾನೆ. ಪರಿಪರಿಯಾಗಿ ಶ್ರೀಕೃಷ್ಣನನ್ನು ಆತ ನಿಂದಿಸುತ್ತಾನೆ. ಗೋಪಿಜಾರ, ತುರಗಾಹಿ, ಸಿಂಹಾಸನಕ್ಕೆ ಬಾಹಿರನಾದ ಯಾದವ ಮುಂತಾಗಿ ಅವನ ಬೈಗುಳಕ್ಕೆ ತುದಿ ಮೊದಲಿಲ್ಲ. ಇಲ್ಲಿರುವವರೆಲಾ ಮಹಾ ಕ್ಷತ್ರಿಯರು, ರಾಜಋಷಿಗಳು, ಹೀಗಿರುವಾಗ ಗೊಲ್ಲನಿಗೆ ಅಗ್ರ ಪೂಜೆಯೇ? ಎಂದು ಪ್ರಶ್ನಿಸಿದ. ವಯಸ್ಸಿನಲ್ಲಿ ಚಿಕ್ಕವರಾದ ಪಾಂಡವರಿಗೆ ಯುಕ್ತಾಯುಕ್ತತೆಯ ಅರಿವಿಲ್ಲದಿರಬಹುದು. ಆದರೆ ಭೀಷ್ಮನೇ ಇದನ್ನು ಸೂಚಿಸಿದನಲ್ಲ! ಮೂರ್ಖಾಧಮನೆಂದು ಅವನನ್ನೂ ತೆಗಳಿದ. ಮುಂದುವರಿದು, ಈ ಸಭೆಯಲ್ಲಿರುವ ಅಗ್ರಪೂಜೆಗೆ ಅರ್ಹರಾದ ಮಹನೀಯರ ದೊಡ್ಡ ಪಟ್ಟಿಯನ್ನೇ ಕೊಡುತ್ತಾನೆ. ವಯಸ್ಸಿನಿಂದ ದೊಡ್ಡವನಾದ ಕೃಷ್ಣನ ತಂದೆ ವಸುದೇವ, ಪಾಂಡವರಿಗೆ ಮಾವನಾದ ದ್ರುಪದ, ಆಚಾರ್ಯನಾದ ದ್ರೋಣ, ವೇದವ್ಯಾಸಮುನಿ, ಪಿತಾಮಹ ಭೀಷ್ಮ, ರಣಧೀರ ಅಶ್ವತ್ಥಾಮ— ಹೀಗೆ ಅವನ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಒಟ್ಟಾರೆ ಯಾರಾದರೂ ಸರಿ ಕೃಷ್ಣನ ಹೊರತು ಎನ್ನುವ ಧೋರಣೆ ಅವನದು. ಆದುದರಿಂದಲೇ ದಂತವಕ್ತ್ರ, ಜಯದ್ರಥ, ಶಕುನಿಯಂಥವರನ್ನೂ ಅಗ್ರಪೂಜೆಗೆ ಅರ್ಹರೆಂದು ಹೆಸರಿಸಿದ.

ಯಾದವ ಪ್ರಮುಖರಿಗೆ ಕೃಷ್ಣನ ನಿಂದೆಯನ್ನು ಕೇಳುವುದಾಗಲಿಲ್ಲ. ಶಿಶುಪಾಲನ ಮೇಲೆ ಸಿಡಿದೆದ್ದರು. 'ಸೀಳಿವನ ಹೆಡತಲೆಯೊಳಗೆ ತೆಗೆ ನಾಲಗೆಯನೆಂದು' ಮುನ್ನುಗ್ಗಿದರು. ಯಾದವ ವೃಷ್ಣಿಗಳು ಈ ಗಲಾಟೆಗೆ ತಲ್ಲಣಿಸಿ ಹೋದರು. ಭೀಷ್ಮ ನಡುವೆ ನಿಂತು ಯಾದವರನ್ನು ತಡೆದ. ಆಗ ಸಹದೇವನು ಶಿಶುಪಾಲನನ್ನು ಭಂಗಿಸಿ ಯುದ್ಧಕ್ಕೆ ಆಹ್ವಾನಿಸಿದ. ಧರ್ಮ.

ರಾಯನಿಗಾದರೋ ಉಭಯ ಸಂಕಟ. ಶ್ರೀಕೃಷ್ಣನಲ್ಲಿ ಭಕ್ತಿ; ಅತಿಥಿಯಾದ ಶಿಶುಪಾಲನನ್ನು ಅವಮಾನಿಸುವಂತಿಲ್ಲ. ಭೀಷ್ಮನು ಆಗ ಕೃಷ್ಣ ಮಹಿಮೆಯನ್ನು ವಿಸ್ತಾರವಾಗಿ ನೆರೆದ ಸಭಿಕರಿಗೆ ವಿವರಿಸಿ ಶಿಶುಪಾಲನ ಮೂರ್ಖತನವನ್ನು ಖಂಡಿಸುತ್ತಾನೆ. ಕವಿ ಸುಮಾರು ಎಪ್ಪತ್ತು ಪದ್ಯಗಳನ್ನು ಇದಕ್ಕೆ ವಿನಾಸ ಲಿಟ್ಟಿದ್ದಾನೆ. ಧರ್ಮರಾಯನೂ ಅನುನಯದ ಮಾತುಗಳಿಂದ ಶಿಶುಪಾಲನನ್ನು ಒಲಿಸಲು ಪ್ರಯತ್ನಿಸಿದ. ಆದರೇನು? ಪರಿಣತರ ಮಾತುಗಳು ಅಲ್ಲಿದ್ದ ಕೆಲವು ಮೂರ್ಖರಿಗೆ ರುಚಿಸಲಿಲ್ಲ. ಅವರೆಲ್ಲಾ ಒಂದಾಗಿ ಯುದ್ಧ ಸನ್ನಾಹ ಮಾಡಿದರು; ಶಿಶುಪಾಲನೇ ಸ್ವಯಂಘೋಷಿತ ದಳಪತಿ. ಧರ್ಮರಾಯನಿಗೆ ಕಳವಳ. 'ಕುಪಿತ ಸಿಂಹವನಂಜಿಸುವವೇ ನಾಯ್ಗಳು' ಎಂದು ಭೀಷ್ಮನ ಸಮಾಧಾನ. ಇದರಿಂದ ಸಿಟ್ಟಿಗೆದ್ದ ಶಿಶುಪಾಲನು ಮತ್ತೆ ಭೀಷ್ಮನನ್ನು ನಪುಂಸಕ, ಭಂಡ ಇತ್ಯಾದಿಯಾಗಿ ಬೈದು ಕೃಷ್ಣನ ಜಾರ ಚೋರತನಗಳನ್ನು ವರ್ಣಿಸಿ, ಅವನ ಮಹಿಮೆಗಳನೆಲ್ಲಾ ಹೀಗಳೆಯತೊಡಗಿದ. ಗರ್ಜಿಸಿ ಮೇಲೆ ಬೀಳ ಬಂದ ಭೀಮನಿಗೂ ಬೈಗುಳದ ಮಂಗಳಾರತಿಯಾಯಿತು. ಆದರೂ ಶಿಶುಪಾಲನನ್ನು ಕೊಲ್ಲುವಂತಿಲ್ಲ. ಏಕೆಂದರೆ ಅವನು ಶ್ರೀಕೃಷ್ಣನಿಗೆ ವಿನಾಸಲು. ಸಾಕ್ಷಾತ್ ಹಿರಣ್ಯಾಕ್ಷ ರಾವಣಾಸುರರೇ ಈಗ ಶಿಶುಪಾಲನಾಗಿ ಹುಟ್ಟಿರುವರು. ಇವನ ತಾಯಿಯಾದರೋ ಕೃಷ್ಣನ ಅತ್ತೆ. ಹುಟ್ಟಿದಾಗಲೇ ಕೃಷ್ಣನಿಂದ ಅಭಯ ಪಡೆದಿದ್ದಾಳೆ; 'ಸೈರಿಸುವೆನಪರಾಧಶತವ ಕುಮಾರಕನ ನಾ ಕೊಲ್ಲೆ' ಎಂಬುದಾಗಿ. ಇದನ್ನೆಲ್ಲಾ ಭೀಷ್ಮನು ಹೇಳಿದಾಗ ಶಿಶುಪಾಲನ ಕೋಪಕ್ಕೆ ಮಿಗಿಲಿಲ್ಲವಾಯಿತು. ಬೆಂಕಿಗೆ ತುಪ್ಪ ಹೊಯ್ದಂತೆ ಪ್ರಜ್ವಲಿಸಿತು. ಮಾತುಗಳ ಕಿಡಿಗಳನ್ನೇ ಉಗುಳಿದ.

ಎಲವೊ ಗೋಪ ಕುಮಾರನೆನ್ನನು
ಕೊಲುವನೇ ತಾನಿವನ ಕೈಯ್ಯಿಂ
ದಳಿವವನೆ ಶಿವಶಿವ ವಿಕಾರಿಯನೇನ ಮಾಡುವೆನು
ಗಳಹ ಭೀಷ್ಮ ವೃಕೋದರನ ಮೈ
ವಳಿಯ ಭಟನೋ ಮೇಣು ನೀ ಗೋ
ವಳರ ಹಳ್ಳಿಯ ಭಟ್ಟನೋ...

ಎಂದು ಅಬ್ಬರಿಸುತ್ತಾನೆ. 'ಕಾಕನಾರೆ ಕೊಂಡಾಡಿ ಗೊಲ್ಲರ ಗೋಕುಲದ ಗೋಪ ಪ್ರಸಂಗ ವ್ಯಾಕರಣ ಪಾಂಡಿತ್ಯ ಮೆರೆದುದು ಭೀಷ್ಮ ನಿನಗೆ' ಎಂದು ಧಿಕ್ಕರಿಸದ ಹೊಗಳುವುದೇ ಆದರೆ ಹೊಗಳು—ಪಾಂಡವ, ಕೌರವರನ್ನು ಇತ್ಯಾದಿಯಾಗಿ

ಮತ್ತೊಂದು ದೊಡ್ಡ ಪಟ್ಟಿಯನ್ನೇ ಮುಂದಿಟ್ಟ. ಅಲ್ಲಿಯವರೆಗೆ ಸುಮ್ಮನೆ ಪ್ರೇಕ್ಷಕರಾಗಿದ್ದ ಋಷಿಗಳನ್ನು ಮುದಿನರಿಗಳೆಂದೂ, ಗೂಬೆಗಳೆಂದೂ ತೆಗಳಿದ.

ಹೀಗೆ ಶ್ರೀಕೃಷ್ಣ ನಿಂದೆಯಲ್ಲಿ ಮಸಗುತ್ತಿದ್ದ ಶಿಶುಪಾಲ; ಶ್ರೀಕೃಷ್ಣ ಸ್ತುತಿಯಲ್ಲಿ ವರ್ಧಿಸುತ್ತಿದ್ದ ಭೀಷ್ಮ. ಎರಡೂ ಕಡೆಯ ವೀರರು ಬಡಿದಾಟಕ್ಕೆ ತವಕಿಸುತ್ತಿದ್ದರು. ಸ್ವತಃ ಶ್ರೀಕೃಷ್ಣ ಮಾತ್ರ ತುಟಿಪಿಟಕ್ಕೆನ್ನಲಿಲ್ಲ. ಈ ಮೌನ ಶಿಶುಪಾಲನ ಅಬ್ಬರಕ್ಕಿಂತ ತೀವ್ರ ಪರಿಣಾಮಕಾರಿಯಾಗಿ ಅಲ್ಲಿ ಕಂಡು ಬರುತ್ತದೆ; ನಾಟಕೀಯವಾಗಿಯೂ ಇದೆ. ಯಾವಾಗ ಶಿಶುಪಾಲ ಶತಾಪರಾಧವೆಸಗಿದನೋ ಆಗ ಶ್ರೀಕೃಷ್ಣನು ಮೌನ ಮುರಿದು ಮಾತಾಡಿ ಚಕ್ರ ಪ್ರಯೋಗಿಸಿ ಅವನನ್ನು ಸಂಹರಿಸಿದ. ಶಿಶುಪಾಲನ ಮಕ್ಕಳು ಗೋಳಿಡುತ್ತಾ ಕೃಷ್ಣನ ಮರೆ ಹೊಕ್ಕಾಗ ಅವರನ್ನು ಕರುಣೆಯಿಂದ ಸಂತೈಸಿ ಅಭಯ ಕೊಡುವನು. ಪ್ರಶಾಂತವಾದ ವಾತಾವರಣದಲ್ಲಿ ಸುಂಟರ ಗಾಳಿಯಂತೆ ಆಕಾಶ ಭೂಮಿಯನ್ನು ಒಂದುಗೂಡಿಸಿ ಮೇಲೆದ್ದ ಶಿಶುಪಾಲನು ಕ್ಷಣಾರ್ಧದಲ್ಲಿ ಮಾಯವಾಗುತ್ತಾನೆ. ಯಾಗ ನಿರ್ವಿಘ್ನವಾಗಿ ಮುಂದುವರಿಯುತ್ತದೆ. ಖಳ ಶಿರೋಮಣಿಯಾದ ಆತನ ಪಾತ್ರ ರಚನೆಯಲ್ಲಿ ಕವಿ ತೋರಿಸಿರುವ ಕೌಶಲ, ಕ್ಷಣದಿಂದ ಕ್ಷಣಕ್ಕೆ ಸಂದಿಗ್ಧವಾಗುತ್ತಾ ಹೋಗುವ ಸನ್ನಿವೇಶ ನಿರ್ವಾಣ— ಇದೆಲ್ಲಕ್ಕೂ ಇದ್ದಕ್ಕಿದ್ದಂತೆ ಮುಕ್ತಾಯ ತಂದುಕೊಡುವ ಶ್ರೀಕೃಷ್ಣನ ಕ್ರಿಯಾತ್ಮಕ ಪ್ರವೇಶಗಳೆಲ್ಲವೂ ನಾಟ್ಯಮಯವಾಗಿವೆ.

ಮಹಾಭಾರತದ ಕಥೆಯಲ್ಲಿ ಸಭಾಪರ್ವ ಪ್ರಮುಖವಾದ ಒಂದು ಘಟ್ಟ. ಇಲ್ಲಿ ನಡೆಯುವ ಘಟನೆಗಳು ಪಾಂಡವ ಕೌರವರ ಬದುಕಿನಲ್ಲಿ ಮುಂದಿನ ದಾರಿಯನ್ನು ನಿರ್ಣಯಿಸಿದವು. ಧರ್ಮರಾಯನಂಥ ಮಹಾಜ್ಞಾನಿ ಜೂಜಿನಲ್ಲಿಟ್ಟಿದ್ದ ಮೋಹವೇ ಮುಂದಿನ ಅನರ್ಥಗಳಿಗೆ ಕಾರಣವಾಯಿತು. ಅದು ಕ್ಷತ್ರಿಯ ಧರ್ಮವೆಂಬ ನೆಪ ಬೇರೆ. ಆದ್ದರಿಂದ ಕರೆದಾಗಲೆಲ್ಲ ಜೂಜಿಗೆ ಹೋಗಲೇಬೇಕಂತೆ. ಇಂಥ ಒಂದು ಜೂಜಿನಲ್ಲಿ ಧರ್ಮರಾಜನು ತನ್ನ ಸಮಸ್ತ ರಾಜ್ಯ, ಕೋಶ, ತಮ್ಮಂದಿರೆಲ್ಲರನ್ನೂ ಸೋತು ಕೊನೆಗೆ ತನ್ನನ್ನೇ ಪಣವಾಗಿಟ್ಟು ಸೋಲುತ್ತಾನೆ. ದ್ರೌಪದಿಯನ್ನು ಪಣವಾಗಿಡುವುದು ಈ ಆಟದ ಶಿಖರಪ್ರಾಯವಾದ ಸಂದರ್ಭ. ಶಕುನಿಯ ಮೋಸದಿಂದ ಎಲ್ಲವನ್ನೂ ಗೆದ್ದುಕೊಂಡ ಕೌರವ ಉಪಾಯದಿಂದ ದಕ್ಕಿಸಿಕೊಳ್ಳಲೂ ಬಹುದಿತ್ತು. ಆದರೆ ವಿಧಿ ಅವನನ್ನು ದ್ರೌಪದಿಯನ್ನು ಕೆಣಕಲು ಪ್ರೇರೇಪಿಸುತ್ತದೆ.

ಹೆಣ್ಣನ್ನು ಕೇವಲ ಭೋಗದ ವಸ್ತುವೆಂದೂ ಬಲವಿದ್ದವರಿಗೇ ಅದು ದಕ್ಕಬೇಕೆಂದೂ ಬಹುಪಾಲು ಮಹಾಭಾರತದ ವೀರರು ನಂಬಿದ್ದರು. ಶಂತನು ವಿನಿಂದ ಕೀಚಕನವರೆಗೆ ಇಂಥ ಅನೇಕ ಉದಾಹರಣೆಗಳನ್ನು ನೋಡಬಹುದು. ಭೀಷ್ಮನೂ ಸಹ ತನ್ನ ತಮ್ಮಂದಿರಿಗೆ ಹೆಣ್ಣುಗಳನ್ನು ಬಲಾತ್ಕಾರದಿಂದ ಅಪ ಹರಿಸಿ ಮದುವೆ ಮಾಡುತ್ತಾನೆ. ಹೆಣ್ಣಿನಂತೆಯೇ ಭೂಮಿಯನ್ನು ಈ ಕ್ಷತ್ರಿಯ ವೀರರು ಉದ್ದಕ್ಕೂ ನಡೆಸಿಕೊಂಡಿದ್ದಾರೆ. ಅದೇನೆ ಇರಲಿ, ಧರ್ಮವಿರೋಧಿಯಾದ ಕಾಮ ಮಹಾಭಾರತದ ದುರಂತಕ್ಕೆ ಬಹು ಪ್ರಮುಖ ವಾದ ಕಾರಣವೆನ್ನಬಹುದಾಗಿದೆ. ಕುರುಕುಲ ವಿನಾಶಕ್ಕೆ ಕಾರಣಳಾದವಳು ಒಬ್ಬ ಹೆಣ್ಣು. ಈ ಸನ್ನಿವೇಶವನ್ನು ಸಹ ಕುಮಾರವ್ಯಾಸ ಶ್ರೀಕೃಷ್ಣ ಮಹಿ ಮೆಯ ಪ್ರಕಟನೆಗೆ ಸಾಧನವನ್ನಾಗಿ ಮಾಡಿಕೊಂಡಿದ್ದಾನೆ. ಒಟ್ಟಾರೆ ಸನ್ನಿ ವೇಶದಲ್ಲಿ ಕಂಡುಬರುವ ಮಾನವನ ಬರ್ಬರತೆ, ದೌರ್ಬಲ್ಯ ಮತ್ತು ಹೆಂಗಸಿನ ಅಸಹಾಯಕ ಆಕ್ರೋಶಗಳನ್ನು ಕವಿ ತೀವ್ರವಾಗಿ ಮನದಟ್ಟು ಮಾಡಿಕೊಟ್ಟಿ ದ್ದಾನೆ. ಇದು ಎಂತಹ ಪ್ರತೀಕಾರಕ್ಕೆಡೆಮಾಡಿಕೊಟ್ಟಿತೆಂಬುದರ ಸೂಚನೆಯೂ ಅಲ್ಲಿಯೇ ಇದೆ.

ಪಗಡೆಯಾಟದಲ್ಲಿ ಪಾಂಡವ ಸಮಸ್ತವನ್ನೂ ಗೆದ್ದಕೂಡಲೆ ತನ್ನ ಗೆಲು ವನ್ನು ಆಚರಿಸಲು ತೊಡಗುತ್ತಾನೆ ದುರ್ಯೋಧನ. ದ್ರೌಪದಿಯನ್ನು ಪಾಂಡವರೆದುರೇ ವಶಪಡಿಸಿಕೊಂಡರೆ ರಾಜಸೂಯಯಾಗದಲ್ಲಾದ ಅಪ ಮಾನಕ್ಕೆ ಮುಯ್ಯಿ ತೀರಿಸಿಕೊಂಡಂತಾಗುತ್ತದೆಯೆಂದು ಆತನ ಎಣಿಕೆ. ಅವನ ದುಡುಕುತನದ ಅಪಾಯವನ್ನು ವಿದುರ ಮೊದಲೇ ಸೂಚಿಸುತ್ತಾನೆ :

ಸಿಡಿಲ ಪೊಟ್ಟಣಗಟ್ಟಿ ಸೇಕವ
ಕೊಡುವರೇ ಹರನೇತ್ರ ವಹ್ನಿಯೊ
ಳಡ ಬಳವ ಸುಡ ಬಗೆದಲಾ ಮರುಳೆ ಮಹೀಪತಿಯೆ
ಹೆಡ ತಲೆಯ ತುರಿಸುವರೆ ಹಾವಿನ
ಹೆಡೆಯಲಕಟಾ ಪಾಂಡು ಪುತ್ರರ
ಮಡದಿ ತೊತ್ತಹಳೇ ಶಿವಾಯೆಂದಳಲಿದನು ವಿದುರ

ಕಾಳ ಕೂಟದ ತೊರೆಗಳಲಿ ಜಲ
ಕೇಳಿಯೇ ಕಾಲಾಂತಕನ ದಂ
ಷ್ಟ್ರಾಳಿಯಲಿ ನವಿಲುಯ್ಯಲೆಯ ನೀವಾಡಲಾಪಿರಲ

ಕಾಲರುದ್ರನ ಲಳಿಯ ನಾಟ್ಯದ
ಕೇಳಿಕೆಗೆ ನೀವರ್ತಿಕಾರರೆ
ಹೋಲದೈ ಶಿವಯೆನುತ ಕಂಬನಿದುಂಬಿದನು ವಿದುರ

ಆದರೆ ಕೌರವರು ವಿದುರನನ್ನು ಪಾಂಡವ ಪಕ್ಷಪಾತಿಯೆಂದೂ ಒಣ ಉಪದೇಶಕನೆಂದೂ ಹೀಗಳೆಯುತ್ತಾರೆ. ದ್ರೌಪದಿಯನ್ನು ಸಭೆಗೆ ಕರೆತರಲು ದೂತನನ್ನು ಕಳಿಸಲಾಗುತ್ತದೆ. ದೂತನಿಂದ ಸುದ್ದಿ ತಿಳಿದ ದ್ರೌಪದಿ, ಜೂಜಿನಲ್ಲಿ ಮೊದಲು ತನ್ನನ್ನೇ ಸೋತುಕೊಂಡ ಧರ್ಮರಾಯನಿಗೆ ಆಮೇಲೆ ಹೆಂಡತಿಯನ್ನು ಪಣವಾಗಿಡುವ ಅಧಿಕಾರವಿಲ್ಲವೆಂಬುದು ಹೊಳೆಯುತ್ತದೆ. ಹಿರಿಯರಿಂದ ಈ ಧರ್ಮ ಸೂಕ್ಷ್ಮ ಇತ್ಯರ್ಥವಾಗದೆ ತಾನು ಬರುವುದಿಲ್ಲವೆನ್ನುತ್ತಾಳೆ. ಗೆಲುವಿನ ಮದ ನೆತ್ತಿಗೇರಿದವರಿಗೆ ಧರ್ಮ ಸೂಕ್ಷ್ಮ ತಿಳಿದೀತೆ? ಸ್ವತಃ ದುಶ್ಶಾಸನನೇ ಅವಳಿದ್ದಲ್ಲಿಗೆ ಬಂದು ಒರಟಾಗಿ ಜರೆದು ಮಾತಾಡಿದ. ಆದರೂ ಮೈದುನನೆಂದು ಅವನನ್ನು ಪ್ರೀತಿಯಿಂದ ಸಂಬೋಧಿಸಿ ಉತ್ತರ ಕೊಟ್ಟಳು ದ್ರೌಪದಿ. 'ಅನುಜ ಕೇಳೈ ಪುಷ್ಪವತಿಯಾದೆನಗೆ ರಾಜಸಭಾ ಪ್ರವೇಶವದನುಚಿತವಲೇ ಹೇಳು' ಎಂದರೆ, ಅವನು ರೂಕ್ಷವಾಗಿ 'ಪುಷ್ಪವತಿಯಾಗಿಲ್ಲಿ ಫಲವತಿಯಾಗು ನಡೆ ಕುರುರಾಜ ಭವನದಲಿ' ಎಂದು ತಿರಸ್ಕರಿಸಿ ಉತ್ತರಿಸುತ್ತಾನೆ. ರಾಜಸೂಯಯಾಗದಲ್ಲಿ ಪುಣ್ಯಜಲದಿಂದ ಅಭಿಷೇಕ ಮಾಡಲ್ಪಟ್ಟ ಪವಿತ್ರವಾದ ತುರುಬಿಗೆ 'ಕೈಯಿಕ್ಕಿ' ಅವಳನ್ನು ದರದರನೆ ಎಳೆದೊಯ್ದ. ಬೆದರುಗಣ್ಣಿನ, ಬಿಟ್ಟ ಮಂಡೆಯ, ಕೆದರಿದ ಬಟ್ಟೆಬರೆಗಳ ದ್ರೌಪದಿ ಸಭೆಗೆ ಬಂದಳು. ಅವಳ ಲೋಕ ವೀರರಾದ ಗಂಡರೈವರೂ ತಲೆತಗ್ಗಿಸಿ ನಿಂತಿದ್ದರು. ಭೀಷ್ಮ, ದ್ರೋಣ, ಧೃತರಾಷ್ಟ್ರ, ವಿದುರರೇ ಮುಂತಾದ ಹಿರಿಯರು ಮೂಕ ಪ್ರೇಕ್ಷಕರಾಗಿದ್ದರು. ಅವರ ನಿಷ್ಕ್ರಿಯತೆಯನ್ನು ದ್ರೌಪದಿ ಖಂಡಿಸಿದಳು. 'ಹಿರಿಯರಿಲ್ಲದ ಸಭೆ ಮನುಷ್ಯರ ನೆರವಿಯದು ಸಭೆಯಲ್ಲ ; ಹಿರಿಯರು ಹಿರಿಯರಲ್ಲ, ಯಥಾರ್ಥ ಭಾಷಣ ಭೀತ ಚೇತನರು' ಎಂದು ಹಲುಬಿದಳು. ಭೀಮ ಫಲುಗುಣರೇನೋ 'ಮನದೊಳಗೆ ಕೌರವನ ಕರುಳನು ತನಿರಕುತದಲಿ ಕುದಿಸಿದರು ; ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಗೆ ಬರಲು ಅಣ್ಣನ ಅಡ್ಡಿಯಿದೆ. 'ಪತಿಗಳೆನ್ನನು ನೂರಿ ಧರ್ಮಸ್ಥಿತಿಯ ಕೊಂಡರು' ಎಂದು ದ್ರೌಪದಿ ಜುಚ್ಚಿದಳು.

ಕೌರವನ ವಿಧಿ ಮಾತ್ರ ಅವನನ್ನು ದ್ರೌಪದೀ ಮಾನಹರಣದಲ್ಲಿ ಇನ್ನೂ ಮುಂದೆ ಹೋಗಲು ಪ್ರೇರೇಪಿಸುತ್ತದೆ. 'ದಾಸಿಗೆ ಒಡವೆ ವಸ್ತುಗಳೇಕೆ?

ಅವನ್ನೆಲ್ಲಾ ಕಳಚಿಹಾಕು' ಎಂದು ತಮ್ಮನಿಗೆ ಅಪ್ಪಣೆ ಕೊಡುತ್ತಾನೆ. ದುಶ್ಶಾಸನನಂತೂ ಅದಕ್ಕೆ ಮೊದಲೇ ನಿರ್ಧರಿಸಿದ್ದ. ಒಡವೆ ವಸ್ತುಗಳೆಲ್ಲಾ ಕಳಚಿಯಾಯಿತು. ಉಳಿದದ್ದು ಮೈ ಮೇಲಿನ ಬಟ್ಟೆಬರೆಗಳು. ಅವುಗಳನ್ನೂ ಕಳಚಲು ಸ್ವತಃ ತೊಡಗುತ್ತಾನೆ. ದ್ರೌಪದಿಯ ಸೆರೆಗು ಹಿಡಿದು ಆತ ಮುಂದುವರಿದಾಗ ದ್ರೌಪದಿ ಕಂಗಾಲಾದ ಪ್ರಸಂಗವನ್ನೂ ಕವಿ ಮನಮಿಡಿಯುವಂತೆ ಬಣ್ಣಿಸಿದ್ದಾನೆ :

ಅಳುಕಿದನೆ ಸುಡಲವನ ಮೇಲುದ
ಸೆಳೆದೊಡುನ್ನತ ಕುಚವ ನಳಿ ತೋ
ಳ್ಗಳಲಿ ಮುಚ್ಚಿದಳಬಲೆ ಬೆಚ್ಚಿದಳವನ ನಿಷ್ಠುರಕೆ
ಕಳವಳಿಸಿದಳು ಬೆರಳಿನಲಿ ದೃಗ್
ಜಲವ ಮಿಡಿಯುತ ನೋಡಿದಳು ನೃಪ
ತಿಲಕನನು ಭೀಮಾರ್ಜುನರ ಮಾದ್ರೀ ಕುಮಾರಕರ

ಆಗಲೂ ಪಾಂಡವರು ಗರ ಹೊಡೆದವರಂತೆ ಮೌನವಹಿಸುತ್ತಾರೆ. ಮಾನ ಸಂರಕ್ಷಣೆಯ ಸಲುವಾಗಿ ಆರ್ತಳಾಗಿ ದ್ರೌಪದಿ, ಭೀಷ್ಮ, ದ್ರೋಣ, ಧೃತರಾಷ್ಟ್ರರೇ ಮುಂತಾದ ಹಿರಿಯರನ್ನು ಗಾಂಧಾರಿ, ಭಾನುಮತಿ, ದುಶ್ಶಳೆಯರಂಥ ಅತ್ತೆ, ಸೋದರಿ, ನಾದಿನಿಯರನ್ನು ಪರಿಪರಿಯಾಗಿ ಬೇಡುತ್ತಾಳೆ. ಯಾರೂ ಅವಳ ನೆರವಿಗೆ ಬರುವುದಿಲ್ಲ. ಆಗ ಗತಿವಿಹೀನರಿಗೆ ಗತಿಯಾದ ಅನಾಥರಕ್ಷಕನಾದ ಕೃಷ್ಣನನ್ನು ಆಕೆ ಭಜಿಸುತ್ತಾಳೆ. ರುಕ್ಮಿಣಿಯೊಡನೆ ದ್ವಾರಕೆಯಲ್ಲಿ ಸರಸ ಸಲ್ಲಾಪದಲ್ಲಿ ಮಗ್ನನಾಗಿದ್ದ ಕೃಷ್ಣನನ್ನು ತನ್ನ ಭಕ್ತೆಯ ಆರ್ತನಾದ ಬಡಿದೆಬ್ಬಿಸುತ್ತದೆ. ಅಲ್ಲಿಂದಲೇ ಹರಸುತ್ತಾನೆ; 'ಅಕ್ಷಯ ಸೀರೆಯಾಗಲೀ' ಎಂಬುದಾಗಿ. ದುಶ್ಶಾಸನನ ರಟ್ಟೆಯ ಶಕ್ತಿ ಉಡುಗಿ ಬೆವರಿಳಿಯುವ ತನಕ ಸೆಳೆದ ಸೀರೆಯ ರಾಶಿ ಸಭೆಯಲ್ಲಿ ಬೆರಗು ಕವಿಸುತ್ತದೆ. ಕೂಡಲೆ ವಿದುರನು ಮುಂದೆ ಬಂದು ದೈವ ಅವಳಿಗೆ ಸಹಾಯವಾಗಿದೆಯೆಂದು ಹೇಳಿ ದುಶ್ಶಾಸನನನ್ನು ತಡೆಯುತ್ತಾನೆ.

ದೈವ ಅವಳಿಗೆ ಅಕ್ಷಯ ಸೀರೆ ಕೊಡಬಹುದೇ ಹೊರತು ಬಿಡುಗಡೆಯನ್ನು ಕೊಡಲಾರದೆಂದ ದುರ್ಯೋಧನನು ತಾನೇ ಅವಳಿಗೆ ದೈವವೆಂದನು. ಲಜ್ಜೆಗೆಟ್ಟು ಮುಂಜೆರಗೆತ್ತಿ ತನ್ನ ತೊಡೆಯನ್ನು ಅವಳಿಗೆ ತೋರಿಸಿದನು. ಇದರಿಂದ ಅಗ್ನಿ ಪುತ್ರಿಯಾದ ದ್ರೌಪದಿ ಭುಗಿಲ್ಲೆಂದು ಶಾಪ ಹಾಕಿದಳು ; 'ನಿನ್ನಳಿವು ತೊಡೆಯಲಿ ಮುಗಿವುದೆಂದು'. ದುಶ್ಶಾಸನನ ರಕ್ತ

ದಿಂದ ತೊಯ್ಯಿಸಿ ಹಲ್ಲ ಬಾಚಣಿಕೆಯಿಂದ ಬಾಚುವವರಿಗೂ ಕೆದರಿದ ಮುಡಿಯನ್ನು ಕಟ್ಟುವುದಿಲ್ಲವೆಂದು ಪ್ರತಿಜ್ಞೆ ಮಾಡಿದಳು. ಭೀಮನು ಕನಲಿ ಅವಳು ಮಾಡಿದ ಪ್ರತಿಜ್ಞೆಯೆಲ್ಲವನ್ನೂ ಈಡೇರಿಸುವ ಪಣತೊಟ್ಟನು. ನೂರು ಜನ ತಮ್ಮಂದಿರ ಸಹಿತ ಕೌರವನ ಕೊಲೆಗೆ ಸಭೆಯ ಸಾಕ್ಷಿಯಾಗಿ ದೀಕ್ಷೆ ವಹಿಸಿದನು. ಕಾರ್ಯವು ಮಿಂಚಿ ಹೋದಮೇಲೆ ಧೃತರಾಷ್ಟ್ರ ಮುಂತಾದವರು ದ್ರೌಪದಿಯನ್ನು ಸಮಾಧಾನಪಡಿಸಲೆತ್ನಿಸಿದರು. ಆದರೆ ಕೌರವ ಪಾಂಡವ ಸಂಬಂಧ ಇಷ್ಟು ಹೊತ್ತಿಗೆ ಸ್ಪಷ್ಟವಾದ ನಿರ್ಣಾಯಕ ಘಟ್ಟವನ್ನು ಮುಟ್ಟಿತ್ತು. ಮುಂದಾಗುವುದೆಲ್ಲ ಇದರ ಪರಿಣಾಮ ಫಲ.

ಹೊಟ್ಟೆಕಿಚ್ಚು ಮನುಷ್ಯನ ಮೂಲ ಸ್ವಭಾವಗಳಲ್ಲೊಂದು. ಇದಕ್ಕಿರುವ ಹಲವು ಮುಖಗಳಲ್ಲಿ ದಾಯಾದಿ ಮಾತ್ಸರ್ಯ ಪ್ರಮುಖವಾದುದು. ವಂಶ ಪಾರಂಪರ್ಯವಾದ ಭೂಮಿ ಮತ್ತು ಸಂಪತ್ತಿನ ಹಂಚಿಕೆಯೇ ದಾಯಾದಿ ಮಾತ್ಸರ್ಯಕ್ಕೆ ಸಾಮಾನ್ಯವಾದ ಕಾರಣ. ಕೌರವ ಪಾಂಡವರ ಪರಸ್ಪರ ದ್ವೇಷಕ್ಕೆ ಮತ್ತು ಕುರುಕುಲ ವಿನಾಶಕ್ಕೆ ಕಾರಣವಾದುದು ಇಂಥ ದಾಯಾದಿ ಮಾತ್ಸರ್ಯವೇ. ಮಹಾಭಾರತದ ಕಥೆಯನ್ನು ಅಣ್ಣ ತಮ್ಮಂದಿರ ಅಂತಃ ಕಲಹದ ಕಥೆ ಎಂದೂ ಕರೆಯುತ್ತಾರೆ. ಕೌರವರಿಗಿರುವಂತೆ ಪಾಂಡವರಿಗೂ ತಮ್ಮ ದಾಯಾದಿಗಳನ್ನು ಕುರಿತು ಮತ್ಸರವಿತ್ತು. ಚಿಕ್ಕಮಕ್ಕಳಿರುವಾಗಲೇ ಭೀಮ ಅದನ್ನು ಸ್ಪಷ್ಟವಾಗಿ ತನ್ನ ನಡೆನುಡಿಯಲ್ಲಿ ತೋರಿಸುತ್ತಿದ್ದ. ಆದರೆ ದುರ್ಯೋಧನನ ಮತ್ಸರ ಮಾತ್ರ ಸ್ವವಿನಾಶಕಾರಿಯಾದುದು. ಪಾಂಡವರ ಅಭ್ಯುದಯವನ್ನು ಆತ ಸೈರಿಸುತ್ತಿರಲಿಲ್ಲವೆನ್ನುವುದನ್ನೂ ಬೇಕಾದರೆ ಸಹಜವೆನ್ನಬಹುದು. ಆದರೆ ಅವರು ಕಾಡುಪಾಲಾಗಿ ನೆಮ್ಮದಿಯಿಂದಿರುವುದನ್ನೂ ಆತ ಸಹಿಸಲಿಲ್ಲವೆನ್ನುವುದು ಮಾತ್ರ ಮಾನವ ಸ್ವಭಾವದ ವೈಚಿತ್ರ್ಯಕ್ಕೆ ಉದಾಹರಣೆಯಾಗಿದೆ.

ಪಗಡೆಯಾಟದ ಪಣದಂತೆ ಹನ್ನೆರಡು ವರುಷ ವನವಾಸಕ್ಕಾಗಿ ಹೋಗಿದ್ದ ಪಾಂಡವರನ್ನು ಸುಮ್ಮನೆ ಬಿಡಲಿಲ್ಲ ಕೌರವ. ತನ್ನ ತಮ್ಮಂದಿರೊಡನೆ ಆಲೋಚಿಸಿ ಅವರಿಗೆ ಹೊಟ್ಟೆಯುರಿಸುವಂತಹ ಏರ್ಪಾಡೊಂದನ್ನು ಸನ್ನಾಹಿಸಿದ. ಸಮಸ್ತ ಚತುರಂಗ ಬಲ, ಅಂತಃಪುರದ ಪರಿವಾರ ಮತ್ತು ಇದಕ್ಕಾಗಿಯೇ ಆಯ್ದ ಸಹಸ್ರಾರು ಸುಂದರಿಯರಾದ ಗಣಿಕೆಯರೊಡನೆ ಪಾಂಡವರಿದ್ದ ಕಾಡಿಗೆ ಕೌರವರು ಘೋಷಯಾತ್ರೆ ಮಾಡಿದರು. ತಪಸ್ವಿಗಳ

ಶಾಂತಿಗೆ ಭಂಗತಂದು ಕಾಡಿನ ಸೌಂದರ್ಯವನ್ನೂ ಹಾಳುಗಡವಿ ಎಲ್ಲೆಂದರಲ್ಲಿ ಕೌರವನ ಲಲನೆಯರು ಚೆಲ್ಲಾಟವಾಡಿದರು. ಪಾಂಡವರಲ್ಲಿ ದೂರುವೆವೆಂದ ತಪಸ್ವಿಗಳಿಗೆ ತಾವು ಭೂಪಾಲನ ಕಡೆಯವರೆಂದು ಹೆಮ್ಮೆಯಿಂದ ಹೇಳಿಕೊಂಡರು. ಕೊನೆಗೆ ದ್ರೌಪದಿಯ ಬಡತನವನ್ನೂ ಬಿರಳುಮಾಡಿ ತೋರಿ ಹಾಸ್ಯಮಾಡಿದರು. ಇದರಿಂದ ಸಿಟ್ಟಿಗೆದ್ದ ಭೀಮನನ್ನು ಧರ್ಮರಾಯ ಸಂತೈಸಬೇಕಾಯಿತು. ಆದರೆ ಇವರ ಕುಚೇಷ್ಟೆ ಇಷ್ಟಕ್ಕೇ ನಿಲ್ಲದೆ ಗಂಧರ್ವ ರಾಯನ ಮಗನಿಗೆ ವಿಲಾಸಲಾಗಿದ್ದ ಉಪವನವನ್ನೂ ವ್ಯಾಪಿಸಿತು. ಅಲ್ಲಿದ್ದ ಕಾವಲುಗಾರರನ್ನು ಗಜರಿ ಗರ್ಜಿಸಿ ಉದ್ಯಾನವನವೆಲ್ಲವನ್ನೂ ತೊತ್ತಳ ದುಳಿದು ಸರೋವರದಲ್ಲಿ ಜಲಕೇಳಿಗೆ ಆರಂಭಿಸಿದರು. ಕಂಗೆಟ್ಟ ಕಾವಲವರು ಗಂಧರ್ವ ರಾಜನಲ್ಲಿ ದೂರನ್ನು ಒಯ್ದರು. ಚಿತ್ರಸೇನನ ನಾಯಕತ್ವದಲ್ಲಿ ಬಂದ ಗಂಧರ್ವ ಪಡೆ ಕೌರವ ಸೇನೆಯನ್ನು ಧೂಳೀಪಟಮಾಡಿ ಕರ್ಣ ಮುಂತಾದವರನ್ನು ಸೋಲಿಸಿ ರಾಜನನ್ನು ಸೆರೆ ಹಿಡಿಯಿತು.

ಪಾಂಡವರನ್ನು ಅಪಮಾನಿಸಲು ಬಂದವರು ಈಗ ಅವರ ಆಶ್ರಯವನ್ನು ಬೇಡುವ ದುಸ್ಥಿತಿಗೆ ತಲುಪಿದರು. ದುರ್ಯೋಧನನರಸಿ ಭಾನುಮತಿಯೇ ಮೊದಲಾದವರು ಧರ್ಮರಾಯನಲ್ಲಿಗೆ ಬಂದು ಕಾಲು ಹಿಡಿದು ಕ್ಷಮೆ ಕೇಳಿದರು. ಮಾಂಗಲ್ಯವುಳಿಸಲು ಅಂಗಲಾಚಿ ಬೇಡಿದರು. ಆಗ ಧರ್ಮರಾಯನು ಹೇಳಿದ ಮಾತು ಅವರೆಲ್ಲರನ್ನೂ ನಾಚಿ ನೀರಾಗಿಸುವಂತಿತ್ತು :

ಭರತ ವಂಶದೊಳವರ ಭಂಗವೆ
ನಿರುತವೆಮ್ಮದು ನಮ್ಮ ಭಂಗ
ಸ್ಫುರಣವವರದು ತಾವರಿಯರಾವರಿವೆವೀ ಹರನ
ಪರರ ಕಲಹಕೆ ನಾವು ನೂರೈ
ವರುಗಳಂತಃಕಲಹಕದುನೂ
ರ್ವರು ವಿಚಾರಿಸಲೈವರಾವೆಂದನು ಮಹೀಪಾಲ

ಹೀಗೆ ಹೇಳಿ ಅವರನ್ನು ಸಂತೈಸುವನು. ಅರ್ಜುನನನ್ನು ಕರೆದು ಕೂಡಲೆ ಯುದ್ಧ ಸನ್ನದ್ಧನಾಗಲು ಹೇಳಿದ. ಆತನ ಅಪ್ಪಣೆಯಂತೆ ಅರ್ಜುನನು ಚಿತ್ರಸೇನನನ್ನು ಹಿಂಬಾಲಿಸುತ್ತಾನೆ. ಗಂಧರ್ವ ನಾಯಕ ಚಿತ್ರಸೇನನಿಗಾದರೋ ಪಾಂಡವರ ಈ ವರ್ತನೆ ಆಶ್ಚರ್ಯ ತರಿಸುತ್ತದೆ :

ಹುಲಿಯು ಮುರಿದೊತ್ತಿದೊಡೆ ಪಶು ಸಂ
ಕುಲಕೆ ಸಂಕಟವೇನು ವಾಯಸ
ಕುಲವ ಕೈಮಾಡಿದರೆ ಕೋಟಲೆಯೇನು ಕೋಗಿಲೆಗೆ
ಖಳರ ಕೊಪ್ಪರಿಸಿದೊಡೆ ಸುಜನರ
ತಲೆಗೆ ವೇದನೆಯೇನು ಕೌರವ
ಕುಲವವಧ್ದಿರರೇನು ಜಠರದ ಶೂಲೆ ನಿನಗೆಂದ

ಚಿತ್ರಸೇನನ ಪ್ರಶ್ನೆಗೆ ಅರ್ಜುನನಲ್ಲಿ ಉತ್ತರವಿಲ್ಲ. ಧರ್ಮಾಧರ್ಮದ ಗೊಡವೆ ಧರ್ಮರಾಯನದು. ಅರ್ಜುನನಿಗೆ ಅಣ್ಣನ ಮಾತೇ ಧರ್ಮ; ಉಳಿದದ್ದೆಲ್ಲಾ ಅಧರ್ಮ. ಅಂತೂ ಚಿತ್ರಸೇನನನ್ನು ಹಿಮ್ಮೆಟ್ಟಿಸಿ ಕೌರವನನ್ನು ಬಿಡಿಸಿ ಹಿಂದಿರುಗುತ್ತಾನೆ ಅರ್ಜುನ. ಹಿಂಗಟ್ಟು ಮುಂಗಟ್ಟು ಬಿಗಿದಿದ್ದ ಕೌರವಾದಿ ಗಳನ್ನು ಕಂಡು ದ್ರೌಪದಿ ಕಟಕಿಯಿಂದ ಉಪಚಾರ ಮಾಡುತ್ತಾಳೆ. ಈ ಪ್ರಸಂಗದಲ್ಲಿ ಕೌರವನ ನೀಚತನ ಮತ್ತು ಧರ್ಮರಾಯನ ಉದಾತ್ತ ಗುಣ ಗಳೆರಡನ್ನೂ ಪರಿಚಯ ಮಾಡಿಕೊಡುವ ಮೂಲಕ ಕವಿ ಒಂದೇ ವಂಶಕ್ಕೆ ಸೇರಿದ ಇಬ್ಬರಲ್ಲಿರಬಹುದಾದ ಅಗಾಧ ಅಂತರವನ್ನು ತೋರಿಸಿಕೊಟ್ಟಿದ್ದಾನೆ. ಗದುಗಿನ ಭಾರತದಲ್ಲಿರುವ ನೂರಾರು ಘಟನಾವಳಿಗಳಲ್ಲಿ ಮೇಲೆ ಉದಾಹರಿ ಸಿರುವ ನಾಲ್ಕು ಪ್ರಸಂಗಗಳು ಕೇವಲ ಪ್ರಾತಿನಿಧಿಕವಾಗಿವೆಯಷ್ಟೆ. ಒಟ್ಟು ಕಾವ್ಯದ ಪರಿಚಯದಿಂದ ಮಾತ್ರ ಸಮಗ್ರ ಕಲ್ಪನೆ ಬಂದೀತು.

## 3

ಪಾತ್ರ ಕಲ್ಪನೆಯ ಜೀವಂತಿಕೆ ಗದುಗಿನ ಭಾರತದ ಮತ್ತೊಂದು ವೈಶಿಷ್ಟ್ಯ. ವ್ಯಾಸ ಭಾರತದ ಪಾತ್ರಗಳಿಗೇ ಕವಿ ಹೊಸ ವೇಷ ತೊಡಿಸಿ ದ್ದಾನೆ. ಒಂದೊಂದು ಪಾತ್ರವೂ ಕುಮಾರವ್ಯಾಸನ ಪ್ರತಿಭೆಯಲ್ಲಿ ಪುನರವ ತರಿಸಿದೆ. ಶ್ರೀಕೃಷ್ಣನಿಗೆ ಇಲ್ಲಿ ಕೇಂದ್ರಸ್ಥಾನವಿತ್ತುದರಿಂದ ಸಂವಿಧಾನದಲ್ಲಿ ಏಕಸೂತ್ರತೆಯನ್ನು ಕಾಪಾಡಿಕೊಂಡು ಬರಲು ಸಾಧ್ಯವಾಯಿತು. ಮಹಾ ಭಾರತವು ಕುಮಾರವ್ಯಾಸನಿಗೆ ಕೇವಲ ಕೃಷ್ಣ ಕಥೆ. ವ್ಯಾಸ, ಪಂಪ, ಕುಮಾರ ವ್ಯಾಸರಲ್ಲಿ ಎಲ್ಲರೂ ಶ್ರೀಕೃಷ್ಣನನ್ನು ಭಗವಂತನ ಅವತಾರವೆಂದೇ ಒಪ್ಪಿದ್ದಾರೆ. ಆದರೆ ಕುಮಾರವ್ಯಾಸನಂತೆ ಶ್ರೀಕೃಷ್ಣನ ಲೀಲೆಗಾಗಿಯೇ ತಾವು ಮಹಾಭಾರತ ವನ್ನು ರಚಿಸುತ್ತಿದ್ದೇವೆಂದು ಅವರಲ್ಲಿ ಯಾರೂ ಹೇಳಿಲ್ಲ. ಇದಕ್ಕೆ ಕಾರಣವೂ ಇದೆ. "ವ್ಯಾಸರದು ಇತಿಹಾಸದ ಅಥವಾ ಧರ್ಮದ ಮಹಾಯುಗವಾಗಿ

ಪಂಪನದು ಚರಿತ್ರೆಯ ವೀರ ಯುಗವಾದರೆ ನಾರಣಪ್ಪನದು ಭಕ್ತಿಯುಗ; ವೈಷ್ಣವ ಮತ ಪ್ರಾಬಲ್ಯದ ಕಾಲ. ಭಾರತ ಯುಗವು ಮುಗಿದು, ಭಾಗವತರ ಭಕ್ತಿಯಿಂದ ಕೃಷ್ಣ ಚಾರಿತ್ರ್ಯದ ಲೀಲಾವಿಲಾಸಗಳೆಲ್ಲ, ಅವತಾರ ಕಾರ್ಯಗಳೆಲ್ಲ, ವೀರರ ಸುತ್ತಲೂ ಹೆಣೆದುಕೊಂಡು ರಾಗ ಯುಕ್ತವಾಗಿದ್ದ ಕಾಲ"। ಇಂಥ ಕಾಲದಲ್ಲಿ ಮಹಾಭಾರತ ಕಥೆಯನ್ನು ರಚಿಸಿದ ಭಾಗವತ ಕವಿಯಾದ ಕುಮಾರ ವ್ಯಾಸ ಸಹಜವಾಗಿಯೇ ಕೃಷ್ಣನ ಮಹಿಮೆಯ ಪ್ರಚಾರಕ್ಕೆ ತನಗೆ ಸಿಕ್ಕಿದ ಎಲ್ಲ ಸಾಮಗ್ರಿಗಳನ್ನೂ ಅನುಕೂಲಗಳನ್ನೂ ಬಳಸಿಕೊಂಡಿದ್ದಾನೆ.

ಗದುಗಿನ ಭಾರತದಲ್ಲಿ ಮೊದಲ ಬಾರಿಗೆ ಕೃಷ್ಣ ಪ್ರವೇಶವಾಗುವುದು ದ್ರೌಪದಿ ಸ್ವಯಂವರದಲ್ಲಿ. ಅವನನ್ನು ನೋಡಿದ ದ್ರೌಪದಿಗೆ ಭಕ್ತಿ ಭಾವ ವುಂಟಾಯಿತಂತೆ. ಸ್ವಯಂವರದ ಬಳಿಕ ರಾತ್ರಿ ಪಾಂಡವರು ಉಳಿದಿದ್ದ ಸ್ಥಳಕ್ಕೆ ಬಂದು ಅವರನ್ನು ಹರಸಿದನಂತೆ. ಕೃಷ್ಣನು ನಿಮಗೆ ಮಾವನಾಗಬೇಕೆಂದು ಪಾಂಡವರಿಗೆ ಅವರ ತಾಯಿ ಪರಿಚಯಿಸುತ್ತಾಳೆ. ಆಗಲೇ ಅವರೈವರ ರಕ್ಷಣೆಯ ಹೊರೆಯನ್ನೂ ಅವನಿಗೆ ಕುಂತಿ ವಹಿಸಿಕೊಡುವುದು. ಇಲ್ಲಿಂದ ಮುಂದೆ ಪಾಂಡವರ ಬದುಕಿಗೆ ಸಂಬಂಧಿಸಿದ ಎಲ್ಲ ಮಹತ್ವದ ಸಂದರ್ಭ ಗಳಲ್ಲಿಯೂ ಕೃಷ್ಣ ಕಾಣಿಸಿಕೊಳ್ಳುತ್ತಾನೆ. ಕೃಷ್ಣನ ಅಪ್ಪಣೆಯಿಲ್ಲದೆ ಯಾವುದಕ್ಕೂ ಅವರು ತೊಡಗುವುದಿಲ್ಲ. ರಾಜಸೂಯಯಾಗ ನಿರ್ವಿಘ್ನ ವಾಗಿ ನಡೆಯಲು ಕಾರಣನಾದವನು ಕೃಷ್ಣ. ಪಾಂಡವರನ್ನು ಮುಂದಿಟ್ಟು ಕೊಂಡು ಭೂಭಾರವನ್ನಿಳುಹುವುದೇ ಅವನ ಗುರಿ. ಜರಾಸಂಧ, ಶಿಶುಪಾಲ, ದಂತವಕ್ರ ಮುಂತಾದವರನ್ನು ಕೊಲ್ಲಲು ರಾಜಸೂಯಯಾಗ ಒಂದು ನೆಪ. ಜೂಜಿನಲ್ಲಿ ಸಮಸ್ತವನ್ನೂ ಸೋತ ಧರ್ಮರಾಯನಿಂದಾಗಿ ಪರಿಭವವನ್ನನು ಭವಿಸಬೇಕಾದಾಗ ಅವಳಿಗೆ ಅಕ್ಷಯ ವಸ್ತ್ರವನ್ನಿತ್ತು ಕಾಪಾಡಿದವನು ಕೃಷ್ಣ.

ಮಹಾಭಾರತದ ಯುದ್ಧ ಪ್ರಾರಂಭವಾಗುವವರೆಗೂ ಆತ ಪಾಂಡವರ ಹಿತೈಷಿಯೂ ಬಂಧುವೂ ಆಗಿದ್ದ. ಆದರೆ ಉದ್ಯೋಗ ಪರ್ವದಿಂದ ಮುಂದೆ ಪಾಂಡವರೇ ಹಿನ್ನಲೆಗೆ ಸರಿದು, ಎಲ್ಲೆಲ್ಲಿಯೂ ಕೃಷ್ಣನ ಕೈವಾಡವೇ ಗೋಚರಿಸ ತೊಡಗುತ್ತದೆ. ಅರ್ಜುನ, ದ್ರೌಪದಿ, ವಿದುರ, ಭೀಷ್ಮರಂತಹ ಭಕ್ತರಿರಲಿ ವೈರಿಗಳಾದ ದುರ್ಯೋಧನನಂತಹವರ ಬಾಯಿಂದಲೂ ಕೃಷ್ಣನ ಪ್ರಶಂಸೆ ಕೇಳಿ ಬರುತ್ತದೆ. ಸಂಧಿಗಾಗಿ ಬಂದ ಕೃಷ್ಣನನ್ನು ಅಪಮಾನಿಸಲೆಳಸಿದ್ದ ಕೌರವನಿಗೆ ತಂದೆ ಧೃತರಾಷ್ಟ್ರನು ಎಚ್ಚರಿಕೆ ಕೊಡುತ್ತಾನೆ; ಕೃಷ್ಣನು ಸಾಕ್ಷಾತ್ ಮಹಾ

ವಿಷ್ಣುವೆಂದು. ಅದು ಕೌರವನಿಗೂ ಗೊತ್ತಿದೆ. ಕೃಷ್ಣನನ್ನು ಕೆಣಕಿ ವೀರ ಸ್ವರ್ಗ ಪಡೆಯುವುದೇ ಅವನ ಗುರಿ :

ನಾವು ಸಂಧಿಯನೊಲಿವೆಮ್ಮಯ
ಭಾವದಲಿ ಹುಳುಕಿಲ್ಲ ಸಂಪ್ರತಿ
ದೇವನಭಿಮತವಲ್ಲ ಬಲ್ಲೆನು ಮುರಹರನ ಬರವ
ನೀವು ಮೇಗರೆಯರಿತದವರೀ
ರಾವಣಾರಿಯ ಬಗೆಯ ಬಲ್ಲೆನು
ಸಾವೆನೀತನ ಕೈಯಬಾಯಲಿ ಭೀತಿ ಬೇಡೆಂದ

ಅಲ್ಲದೆ 'ಎನ್ನ ಹೃದಯದೊಳಿರ್ದು ಮುರಿವನು ಗನ್ನದಲಿ ಸಂಧಿಯನು' ಎಂದೂ ಹೇಳುತ್ತಾನೆ. ಮಹಾಭಾರತದ ಯುದ್ಧ ಜರುಗದಿದ್ದರೆ ಕೃಷ್ಣನ ಅವತಾರದ ಉದ್ದೇಶವೇ ಈಡೇರಿದಂತಾಗುವುದಿಲ್ಲ. ಆದುದರಿಂದ ಪಾಂಡವರಿಗಿಂತ ಕೃಷ್ಣನಿಗೆ ಯುದ್ಧ ಬೇಕಿದೆ. ಸಂಧಿಗೆ ಹೊರಡುವ ಮುನ್ನ ದ್ರೌಪದಿಗೆ ಹೇಳುವ ಕೃಷ್ಣನ ಮಾತಿನಲ್ಲಿ ಇದರ ಸ್ಪಷ್ಟ ಸೂಚನೆಯನ್ನು ಕಾಣಬಹುದು.

ಯುದ್ಧಕ್ಕೆ ತೊಡಗಿದಮೇಲೆ ಕೃಷ್ಣನು ನೆಪಕ್ಕೆ ಅರ್ಜುನನ ಸಾರಥಿ; ನೇರವಾಗಿ ಯುದ್ಧದಲ್ಲಿ ಭಾಗವಹಿಸದಿದ್ದರೂ ಅರ್ಜುನನು ಕೊಂದ ವೀರರೆಲ್ಲರ ಮರಣದ ಹಿಂದೆ ಕೃಷ್ಣನ ಕಾರಸ್ಥಾನವಿರುತ್ತಿತ್ತು. ಭೀಷ್ಮ, ದ್ರೋಣ, ಕರ್ಣ, ಭಗದತ್ತ ಮುಂತಾದವರ ಮೇಲೆ ಅರ್ಜುನನ ಗೆಲವು ಕೃಷ್ಣನ ನೆರವಿನಿಂದ. ಕರ್ಣ ಸರ್ಪಾಸ್ತ್ರವನ್ನು ಬಿಟ್ಟಾಗ ಭಗದತ್ತ ವೈಷ್ಣವಾಸ್ತ್ರವನ್ನು ಬಿಟ್ಟಾಗ ಮತ್ತು ಸೈಂಧವ ವಧೆಯ ಸಂದರ್ಭದಲ್ಲಿ ಅರ್ಜುನ ಸಾವಿನ ಬಾಯಿಗೆ ಹೋಗಿ ಕೃಷ್ಣ ಕರುಣೆಯಿಂದ ಪಾರಾಗುತ್ತಾನೆ. ಭೀಷ್ಮನ ಆಟಾಟೋಪ ಜಾಸ್ತಿಯಾಗಿ ಕೃಷ್ಣನೇ ಚಕ್ರ ಹಿಡಿದು ಮುನ್ನುಗ್ಗಿದಾಗ, ಭಗದತ್ತನ ವೈಷ್ಣವಾಸ್ತ್ರಕ್ಕೆ ತನ್ನ ಎದೆಯನ್ನು ಒಡ್ಡಿ ಅರ್ಜುನನನ್ನು ರಕ್ಷಿಸಿದಾಗ ಸ್ವತಃ ಅರ್ಜುನನೇ ಅಸಮಧಾನ ವ್ಯಕ್ತಪಡಿಸುತ್ತಾನೆ. ಶಸ್ತ್ರಾಸ್ತ್ರಗಳನ್ನು ಎಸೆದು ತಾನು ಕೃಷ್ಣನ ನೆರಳಿನಲ್ಲಿ ಯುದ್ಧ ಮಾಡೆನೆಂದು ಪ್ರತಿಭಟಿಸುತ್ತಾನೆ. ಆಗ ಕೃಷ್ಣನೇ ಅವನನ್ನು ಸಮಾಧಾನಪಡಿಸಿ ಯುದ್ಧಕ್ಕೆ ಪ್ರೇರೇಪಿಸಬೇಕಾಗುತ್ತದೆ.

ಕೃಷ್ಣನು ಸರ್ವಶಕ್ತ, ಅವತಾರಪುರುಷ ಎಂಬಂತೆ ಚಿತ್ರಿಸಿದ್ದರೂ ಅವನ ಮಾನವೀಯ ಸ್ವಭಾವಗಳನ್ನೂ ಕವಿ ಮರೆಮಾಚಿಲ್ಲ. ಭಗವಂತನಾದವನು ಇಂಥ ನೀಚ ಕೆಲಸಗಳನ್ನು ಮಾಡಬೇಕೆ ? ಎಂದು ಮೂಗು ಮುರಿಯ

ಬಹುದಾದ ಕುಟಿಲ ವೃತ್ತಿಗಳಿಗೆ ಆತ ಇಳಿದಿದ್ದಾನೆ. ಕೌರವ ಪಕ್ಷದ ಯಾವ ವೀರನೂ ನ್ಯಾಯವಾಗಿ ಸಾಯಲಿಲ್ಲ. ಎಲ್ಲರೂ ಕೃಷ್ಣನ ಮೋಸಕ್ಕೆ ಬಲಿಯಾದರು. ಒಟ್ಟು ಮಹಾಭಾರತ ಕಥೆಯ ಸಮಗ್ರವಾದ ಹಿನ್ನೆಲೆಯಲ್ಲಿ ಯುದ್ಧ ಪರ್ವಗಳಲ್ಲಿ ನಡೆದ ಘಟನೆಗಳನ್ನು ಪರಿಶೀಲಿಸಿದರೆ ಕೃಷ್ಣನ ನೀತಿ ನಮಗೆ ಅರ್ಥವಾದೀತು. ದುಷ್ಟ ಶಿಕ್ಷೆ; ಶಿಷ್ಟ ರಕ್ಷೆ ಅವನ ನೀತಿ. ಗುರಿಯನ್ನು ತಲುಪಲು ಅನುಸರಿಸಬೇಕಾದ ಮಾರ್ಗ ಅಷ್ಟು ಅವನಿಗೆ ಮುಖ್ಯವಲ್ಲ. ಇಷ್ಟಾದರೂ ಭೀಷ್ಮ, ಕರ್ಣ ಮಾತ್ರವಲ್ಲ ಕೌರವನಿಗೂ ಸಹ ಮರಣ ಕಾಲದಲ್ಲಿ ಕಾಣಿಸಿಕೊಂಡು ಸಂತೈಸಿ ಅಭಯವೀಯುತ್ತಾನೆ.

ಕೃಷ್ಣನನ್ನು ಭಗವಂತನೆಂದು ಎಲ್ಲರೂ ಕರೆಯುತ್ತಾರೆ. ಆದರೆ ಅವನೇ ಅದನ್ನು ಒಪ್ಪುವುದಿಲ್ಲ. ಅರ್ಜುನನಿಗೆ ಈ ಮಾತನ್ನು ಸ್ಪಷ್ಟಪಡಿಸಿದ್ದಾನೆ. ವಸುದೇವ, ಬಲರಾಮ, ಕುಂತಿ ಮುಂತಾದ ಹಿರಿಯರಿಗೆ ಸಾಮಾನ್ಯನಂತೆ ವಿನಯವನ್ನು ತೋರಿಸುತ್ತಾನೆ. ಇದೆಲ್ಲಾ ಮಾನವ ವೇಷದಲ್ಲಿರುವ ಭಗವಂತನು ಆಡುವ ಲೀಲೆಯೆನ್ನುತ್ತಾನೆ ನಾರಣಪ್ಪ. ಒಟ್ಟಿನಲ್ಲಿ "ಆತನೇ ಮಹಾಭಾರತಕ್ಕೆ ಸೂತ್ರಧಾರ; ಕಥೆಯ ಒಬ್ಬನೇ ನಾಯಕ; ಎಲ್ಲ ಚೈತನ್ಯಕ್ಕೂ ಮೂಲ; ಎಲ್ಲರ ಪ್ರವೃತ್ತಿಗಳಿಗೂ ಕಾರಣ; ಎಲ್ಲ ಪ್ರಯತ್ನಗಳ ಗುರಿ; ಎಲ್ಲ ಆಸೆಗಳ ನೆಲೆ. ಅವನಿಲ್ಲದೆ ಭಾರತವಿಲ್ಲ."[2]

ಕುಮಾರವ್ಯಾಸ ಭಾರತದಲ್ಲಿ ತನ್ನ ದುರಂತ ರಮಣೀಯತೆಯಿಂದ ಓದುಗರನ್ನು ಆಕರ್ಷಿಸುವ ಪಾತ್ರವೆಂದರೆ ಕರ್ಣನದು. ಮಹಾಭಾರತದ ಇನ್ನುಳಿದ ವೀರರಿಗೂ ಕರ್ಣನಿಗೂ ಇರುವ ವ್ಯತ್ಯಾಸ ಅಗಾಧವಾದುದು. "ಕರ್ಣನು ಮೊದಲು ಉನ್ನತ ಸ್ಥಿತಿಯಲ್ಲಿದ್ದು ತರುವಾಯ ಅಧೋಗತಿಗಿಳಿದವನಲ್ಲ. ಅದಕ್ಕೆ ವಿರೋಧವಾಗಿ ಧೀವರ ಪುತ್ರತ್ವದಿಂದ ಕ್ಷತ್ರಿಯತ್ವಕ್ಕೆ ಏರಿ, ಅಂಗಾಧಿಪತಿಯಾಗಿ, ತನ್ನ ಕೀರ್ತಿಯ ಪ್ರಚಂಡ ಜ್ಯೋತಿಯು ಪ್ರಜ್ವಲಿಸುತ್ತಿರುವಾಗಲೇ, ಆ ಜ್ವಾಲೆಯ ನಟ್ಟ ನಡುವೆ ಭಸ್ಮೀಭೂತನಾದ ವ್ಯಕ್ತಿ."[3] ಹುಟ್ಟಿನಿಂದ ಸಾವಿನವರೆಗೆ ವಿಧಿ ಅವನನ್ನು ಕಾಡುತ್ತದೆ. ದೂರ್ವಾಸ ಮುನಿಯಿಂದ ಐದು ಮಂತ್ರಗಳನ್ನು ಪಡೆದ ಕನ್ಯೆಯಾದ ಕುಂತಿ ಹುಡುಗಾಟಕ್ಕೆ ಸಹಜವಾದ ರೀತಿಯಲ್ಲಿ ಒಂದನ್ನು ಪರೀಕ್ಷಿಸ ಹೋಗುತ್ತಾಳೆ :

ಮಗುವುತನದಲಿ ಬೊಂಬೆಯಾಟಕೆ
ಮಗನನೇ ತಹನೆಂದು ಬಂದಳು
ಗಗನ ನದಿಯಲಿ ಮಿಂದುಳುಟ್ಟಳು ಲೋಹಿತಾಂಬರವ

ವಿಗಡ ಮುನಿಪನ ಮಂತ್ರವನು ನಾ
ಲಗೆಗೆ ತಂದಳು ರಾಗರಸದಲಿ
ಗಗನ ಮಣಿಯನು ನೋಡಿ ಕಣ್ಮುಚ್ಚಿದಳು ಯೋಗದಲಿ

ಮುನಿ ಕೊಟ್ಟ ಐದು ಮಂತ್ರಗಳಲ್ಲಿ ಸೂರ್ಯಮಂತ್ರವನ್ನೇ ಆಕೆ ಆಯ್ದುಕೊಂಡದ್ದು ಕರ್ಣನ ದುರಾದೃಷ್ಟ. ಇಲ್ಲದಿದ್ದರೆ ಅವನ ಜಾಗದಲ್ಲಿ ಪಾಂಡವರಲ್ಲಿ ಯಾರಾದರೊಬ್ಬರು ಇರಬೇಕಾಗುತ್ತಿತ್ತು. ಸೂರ್ಯ ಮಾತ್ರ ಪ್ರತ್ಯಕ್ಷನಾಗಿ 'ತನ್ನ ತೂಕದ ಮಗನ'ನ್ನನುಗ್ರಹಿಸಿ ಕನ್ನೆತನ ಅಳಿಯದಂತೆ ಆಶೀರ್ವದಿಸಿ ಮಾಯವಾದ. ಬಳಿಕವೇ ಕುಂತಿಗೆ ತಾನು ಮಾಡಿದ ಅಚಾತುರ್ಯ ಅರಿವಾದುದು. ತೊಳತೊಳಗುವ ನೇಸರಗುವರನನ್ನು 'ಜನದಪವಾದ ಭೀತಿ'ಯಿಂದ ತೊರೆಯಲು ನಿಶ್ಚಯಿಸಿದಳು. ಗಂಗಾನದಿಯಲ್ಲಿ ಈಡಾಡಿದಳು. ಆಕೆಯ ಪ್ರಾರ್ಥನೆಯನ್ನು ಮನ್ನಿಸಿದ ಗಂಗಾಮಾತೆ ಮಗುವನ್ನು 'ನೋಯಲೀಯದೆ, ಮುಳುಗಲೀಯದೆ' ದಡಕ್ಕೆ ಚಾಚಿದಳು :

ಕೆದರಿ ಕಾಲಲಿ ಮಳಲರಾಶಿಯ
ನೊದೆದು ಕೈಗಳ ಕೊಡಹಿ ಭೋಯೆಂ
ದೊದರುತಿರ್ದನು ಶಿಶುಗರಸನು ರವಿಯನೀಕ್ಷಿಸುತ

ಎಂಬುದಾಗಿ ಕವಿ ಆ ಸಂದರ್ಭವನ್ನು ವರ್ಣಿಸುತ್ತಾನೆ. 'ಶಿಶುಗಳರಸ' ಎಂಬುದು ಮಗುವಿನ ತೇಜಸ್ವಿತೆಯನ್ನು ಸೂಚಿಸುತ್ತದೆ. ತನ್ನ ಈ ಸ್ಥಿತಿಗೆ ಕಾರಣನಾದ ರವಿಯನ್ನು ಮಗು ಅಳುತ್ತಾ ನೋಡುತ್ತಿರುವ ಚಿತ್ರ ಧ್ವನಿಪೂರ್ಣವಾಗಿದೆ. 'ಶಿಶುಗಳರಸ' ಮುಂದೆ ಸೂತ ಪುತ್ರನಾಗುತ್ತಾನೆ. ರಾಧೇಯ ಎಂಬ ಹೆಸರಿನಿಂದ ಬೆಳೆದು ದೊಡ್ಡವನಾಗುತ್ತಾನೆ. ಪರಶುರಾಮರಲ್ಲಿ ಧನುರ್ವಿದ್ಯೆ ಕಲಿಯಹೋಗಿ ಅವರ ಜಾತಿ ಪಕ್ಷಪಾತಕ್ಕೆ ಬಲಿಯಾಗುತ್ತಾನೆ.

ಕೌರವನಲ್ಲಿ ಬಂದು ಸೇರುವವರೆಗೆ ಕರ್ಣ ಅನಾಥ. ಬಳಿಕ ಅವರಿಬ್ಬರೂ ಒಂದು ಜೀವ ಎರಡು ದೇಹ ಎಂಬಂತಿದ್ದರಂತೆ. ಬದುಕಿನ ಸುಖ ದುಃಖಗಳೆರಡರಲ್ಲಿಯೂ ಸಮಭಾಗಿಗಳಾಗುತ್ತಾರೆ. ದ್ರೋಣನಲ್ಲಿ ಧನುರ್ವಿದ್ಯಾಭ್ಯಾಸಂಗವಾದಮೇಲೆ ಪರೀಕ್ಷೆಯ ದಿನ ಸಮೀಪಿಸುತ್ತದೆ. ಅಂದು ಪಾಂಡವ ಕೌರವ ವೀರರಿಬ್ಬರ ಕೈಚಳಕ ಮೈಬಲಗಳ ಪ್ರದರ್ಶನ ನಡೆಯುತ್ತದೆ. ಅರ್ಜುನನ ಬಾಣಪ್ರಯೋಗ ಪರಿಣತಿ ಎಲ್ಲರನ್ನೂ ವಿಸ್ಮಯಗೊಳಿಸಿದಾಗ, ಕೌರವನ ಕಡೆಯವರು ದುಃಖದಿಂದ ಖಿನ್ನರಾದಾಗ ನಾಟಕೀಯವಾಗಿ ಕರ್ಣ ಪರೀಕ್ಷಾ ರಂಗವನ್ನು ಪ್ರವೇಶಿಸುತ್ತಾನೆ :

ಬಾಯ ಹೊಯ್ ಫಲುಗುಣನ ಹೊಗಳುವ
ನಾಯಿಗಳಲೇನಾಯ್ತು ಕೌತುಕ
ವಾಯಕಿವದಿರ ಪಕ್ಷಪಾತವನೋಡು ನೋಡೆನುತ
ಸಾಯಕವ ತಿರುಹುತ್ತಲಾ ಕ
ರ್ಣಾಯತಾಂಬಕ ನೆಡಬಲದ ಕುರು
ರಾಯನನುಜರ ಮೇಳದಲಿ ಹೊರವಂಟನಾ ಕರ್ಣ

ಆವ ವಿಧದಲಿ ಪಾರ್ಥತೋರಿದ
ನಾವ ದಿವ್ಯಾಸ್ತ್ರ ಪ್ರಪಂಚವ
ಪಾವಕಾನಿಲ ವಾರುಣಾದಿಯ ಸೈದೆ ವಿರಚಿಸಿದ
ಆವಿಧಾನದಲಾ ವಿಹಾರದ
ಲಾವಿಬಂಧದಲರ್ಜುನನ ಬಾ
ಣಾವಳಿಯ ಬಿನ್ನಾಣವನು ತೋರಿದ ಕಲಿಕರ್ಣ

ಇಷ್ಟು ಸಾಲದೆಂಬಂತೆ 'ಸೆಣಸುವೊಡೆ ಬಾ' ಎಂದು ಪಾರ್ಥನನ್ನು ಕೆಣಕಿದನಂತೆ. ಅರ್ಜುನನೇನು ಹೆಂಬೇಡಿಯೇ ? ಕ್ಷಣಾರ್ಧದಲ್ಲಿ ಪರೀಕ್ಷೆಯು ಕಣ ಯುದ್ಧ ರಂಗವಾಯಿತು. ಕಣ್ಣಿನಲ್ಲಿ ಕೆಂಪು ಕಾರುತ್ತಾ ಇಬ್ಬರೂ ವೀರರೂ ಹುರು ಪಿಸಿ ನಿಂತರು. ರಾಯ ಸಭೆ ಕಳವಳಿಸಿತು. ಕೃಪ, ಅಶ್ವತ್ಥಾಮ, ದ್ರೋಣರು ನಡುವೆ ನಿಂತು ಇಬ್ಬರನ್ನೂ ತಡೆದರು. ಕೃಪನು ಕರ್ಣನನ್ನು ಹೀಗಳೆದು ರಾಜಕುಮಾರನೊಡನೆ ಸೆಣಸಲು ನಿನಗಿರುವ ಯೋಗ್ಯತೆಯೇನು ? ಎಂದು ಪ್ರಶ್ನಿಸಿದನು. ಪ್ರತಿಭೆಯ ಯೋಗ್ಯತೆ ಅವರಿಗೆ ಸಾಲದಾಗಿತ್ತು. ಹುಟ್ಟಿನ ಯೋಗ್ಯತೆ ಕೇಳಿದರು. ಖಿನ್ನನಾಗಿ ಕರ್ಣ ಹಿಂಜರಿದ. ಈ ಸವಾಲು ಕೌರವ ನನ್ನು ತಾಗಿತು. 'ಈತನರಸಲ್ಲೆಂದು ಕೃಪ ಹಳಿವಾತನೇ ? ತಪ್ಪೇನು ? ರಾಜ್ಯದೊಳೀತನರಸೆನಿಸುವೆನು ಕರೆ ನಮ್ಮಯ ಪುರೋಹಿತರ' ಎಂದು ಹೇಳಿ ಅಲ್ಲಿಯೇ ಶಾಸ್ತ್ರ ವಿಧಿಗನುಸಾರವಾಗಿ ಅಂಗರಾಜ್ಯದ ಪಟ್ಟವನ್ನು ಕರ್ಣನಿಗೆ ಕಟ್ಟುತ್ತಾನೆ. 'ಪೂರ್ವಶೈಲದ ತರಣಿ'ಯಂತೆ ಕರ್ಣನು ರಾಜ ತೇಜದಿಂದ ಕಂಗೊಳಿಸಿದ. ಕರ್ಣನ ಅಪಮಾನ ತನ್ನದೆಂದು ಭಾವಿಸಿ ದುರ್ಯೋಧನನು ಅದನ್ನು ನಿವಾರಿಸಿದ. ಸ್ವಭಾವತಃ ಸ್ನೇಹ ಜೀವಿಯಾದ ಕರ್ಣ ಕೌರವನಿಗಾಗಿ ಪ್ರಾಣವನ್ನೇ ಮುಡಿಪಿಟ್ಟ. ಮುಂದೆ ಅವರಿಬ್ಬರ ನಡುವೆ ಆಳು–ಅರಸ ಎಂಬ ಬೇಧ ಭಾವ ಉಳಿಯಲಿಲ್ಲ.

ಕರ್ಣ ದುರ್ಯೋಧನರ ಸ್ನೇಹದ ನಿಜವಾದ ಪರಿಚಯವಾಗುವುದು ಕೃಷ್ಣನ ಕಾರಣದಿಂದ. ಉದ್ಯೋಗ ಪರ್ವದಲ್ಲಿ ಬರುವ ಕೃಷ್ಣ–ಕರ್ಣರ

ಸಮಾಗದು ಗದುಗಿನ ಭಾರತದ ಶ್ರೇಷ್ಠ ಸನ್ನಿವೇಶಗಳಲ್ಲೊಂದು. ಸಂಧಿ ಮುರಿದುಬಿದ್ದಾಗ ರಾಜನೀತಿಜ್ಞನಾದ ಕೃಷ್ಣನಿಗೆ ಉಳಿದಿದ್ದ ದಾರಿ ಶತ್ರು ಪಕ್ಷವನ್ನು ಉಪಾಯದಿಂದ ನಿಸ್ಸತ್ವಗೊಳಿಸುವುದು. ವಿದುರನ ಬಿಲ್ಲನ್ನು ಮುರಿದು ಹಾಕುವಂತೆ ಕೌರವ—ವಿದುರರ ನಡುವೆ ಮಾತ್ಸರ್ಯ ಬಿತ್ತಿದ್ದೇ ಈ ಕಾರಣಕ್ಕಾಗಿ. ಕರ್ಣನೊಬ್ಬನನ್ನು ಹಾಳುಗೆಡವಿದರೆ ಅಲ್ಲಿಗೆ ದೊಡ್ಡ ಆತಂಕವೊಂದನ್ನು ನಿವಾರಿಸಿದಂತೆ ಎನ್ನಿಸಿರಬೇಕು ಕೃಷ್ಣನಿಗೆ. ಹಸ್ತಿನಾವತಿಯಿಂದ ತನ್ನನ್ನು ಬಿಳ್ಕೊಡಲು ಬಂದ ಎಲ್ಲರನ್ನೂ ಕಳಿಸಿ ಕರ್ಣನೊಬ್ಬನನ್ನು ಉಳಿಸಿ ಕೊಂಡನಂತೆ. ತಾವಿಬ್ಬರೇ ಉಳಿದಾಗ ಸಮ ಸೋಂಕಿನಲಿ ಕುಳಿತು ಮೈದುನ ತನದ ಸರಸಕ್ಕೆಳಸಿದ. 'ಎನಗೆ ನಿಮ್ಮಡಿಗಳಲಿ ಸರಿ ಸೇವನೆಯೆ ದೇವ ಮುರಾರಿಯಂಜುವೆ' ನೆಂದ ಕರ್ಣನಿಗೆ, 'ಮೇದಿನೀಪತಿ ನೀನು, ಚಿತ್ತದೊಳಾದು ದಿಲ್ಲರಿವೆನುತ' ಭಯವನ್ನು ಕಿವಿಯಲ್ಲಿ ಬಿತ್ತಿದನಂತೆ. ಸಾಲದೆಂಬಂತೆ 'ಭಾನುವಂಶಲಲಾಮ ನೀ ರಾಮಂಗೆ ಸರಿ' ಎಂದು ಗೌರವಿಸಲೂ ಮುಂದಾದ. ಬಳಿಕ ವೀಳೆಯದ ಸಂಚಿ ತೆಗೆದು ಅವನ ಜನನ ವೃತ್ತಾಂತವನ್ನು ತಿಳಿಸಿದ. ಪಾಂಡವರಿಗೆ ಅಣ್ಣನಾಗಿದ್ದು ಕೌರವರಲ್ಲಿ ಸೇವಕತನದಿಂದಿರುವುದು ಉಚಿತ ವಲ್ಲವೆಂದ. ಸಂಧಿಗೆ ಕೌರವನನ್ನು ಒಡಂಬಡಿಸಿ ಎರಡು ಪಕ್ಷಗಳಿಗೂ ರಾಜನಾಗಿ ಮೆರೆಯುವ ಆಕರ್ಷಣೆಯನ್ನು ಮುಂದೊಡ್ಡಿದ. ಆದರೆ ಕೃಷ್ಣನ ಭೇದೋಪಾಯ ಕರ್ಣನನ್ನು ತಾಗಿದ್ದೇ ಬೇರೆ ರೀತಿಯಲ್ಲಿ. ಪಾಂಡವರನ್ನು ವೈರಿಗಳೆಂದು ತಿಳಿದಿದ್ದ ತನ್ನ ಮನಸ್ಸನ್ನು ಕದಡಿ ದುರ್ಯೋಧನನಿಗೆ ಕೃಷ್ಣ ಅನ್ಯಾಯ ಮಾಡುತ್ತಿರುವನೆಂದು ಆತ ಯೋಚಿಸಿದ. ತನ್ನಂತಹ ಸ್ನೇಹಿತನೂ ಇಬ್ಬಗೆಯ ಮನಸ್ಸಿನಿಂದ ಕಾದಿದರೆ ಕೌರವನ ಗತಿ ಏನಾದೀತೆಂದು ಚಿಂತಿಸಿದ ನಂತೆ :

ಕೊರಳ ಸೆರೆ ಹಿಗ್ಗಿದವು ದೃಗುಜಲ
ವುರವಣಿಸಿ ಕಡುನೊಂದನಕಟಾ
ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ
ಹರಿಯ ಹಗೆ ಹೊಗೆದೋರದುರುಹದೆ
ಬರಿದೆ ಹೋಹುದೆ ತನ್ನ ಜನನವ
ನರುಹಿ ಕೊಂದನು ಹಲವು ಮಾತೇನೆಂದು ಚಿಂತಿಸಿದ

ಕಾದಿ ಕೊಲುವೊಡೆ ಪಾಂಡುಸುತರು ಸ
ಹೋದರರು ಕೊಲಲಿಲ್ಲ ಕೊಲ್ಲದೆ
ಕಾದೆನಾದೊಡೆ ಕೌರವಂಗವನಿಯಲಿ ಹೊಗಲಿಲ್ಲ

ಭೇದದಲಿ ಹೊಕ್ಕಿರಿದನೋ ಮಧು
ಸೂದನನು ತಾನಕಟಟೆನುತ ಚಿಂ
ತೋದಧಿಯಲದ್ದಂತೆ ಮೌನದೊಳಿರ್ದನಾ ಕರ್ಣ

ಕೃಷ್ಣನಿಗೆ ಕರ್ಣನ ಮೌನ ಅರ್ಥವಾಯಿತು. ಆದರೂ ಮತ್ತೆ ಪ್ರಶ್ನಿಸಿದ. ಕರ್ಣನು ತನ್ನ ಮತ್ತು ಕೌರವನ ಸ್ನೇಹದ ಬೆಲೆ ಕಟ್ಟಲಾಗದೆಂದು ಹೇಳಿ 'ಅತನ ಹಗೆಯೇ ತನ್ನ ಹಗೆ' ಎಂದು ದೃಢೀಕರಿಸುತ್ತಾನೆ. ಆದರೂ ಕರ್ಣನ ಮನಸ್ಸು ಹೋಳಾಗಿರುತ್ತದೆ. ಎಲ್ಲೋ ಆಳದಲ್ಲಿ ತಮ್ಮಂದಿರನ್ನು ಕುರಿತ ವ್ಯಾಮೋಹ ಕಾಡುತ್ತಿರುತ್ತದೆ. 'ಸುಭಟ ಕೋಟಿಯನು ತೀರಿಸಿಯೆ ಪತಿಯುವಸರಕೆ ಶರೀರವನು ಸೂಕುವೆನು' ಎಂದು ಹೇಳಿದ ಉಸುರಿನಲ್ಲಿಯೇ "ನಿನ್ನಯ ಧೀರರೈವರ ನೋಯಿಸೆನು ರಾಜೀವ ಸಖನಾಣೆ" ಎಂದೂ ಭರವಸೆ ಕೊಡುತ್ತಾನೆ. ಕೃಷ್ಣನಿಗೆ ಬೇಕಿದ್ದದ್ದೂ ಇಷ್ಟೆ. ಕೂಡಲೆ ಕರ್ಣನನ್ನು ಹೊಗಳಿ ಹಿಂದಕ್ಕೆ ಕಳುಹಿಸುತ್ತಾನೆ. ಇದಾದ ಕೆಲವು ದಿವಸಗಳಲ್ಲಿಯೇ ತಾಯಿಯಾದ ಕುಂತಿಯೂ ಬಂದು ಕರ್ಣನಿಂದ ತನ್ನ ಮಕ್ಕಳ ಪರವಾಗಿ ಭರವಸೆ ಪಡೆಯುತ್ತಾಳೆ. ಕುಮಾರವ್ಯಾಸನಂತೂ ಕುಂತಿ ಕರ್ಣರ ಭೇಟಿಯನ್ನು ತೀರಾ ಚುಟುಕಾಗಿ ಮುಗಿಸಿಬಿಟ್ಟಿದ್ದಾನೆ. "ಕುಂತಿಯು ಮಾತ್ರ ಕರ್ಣನ ಅಂಗಡಿಗೆ ಹೋಗಿ ತನ್ನ ತಾಯ್ತನವೆಂಬ ನಗದು ಹಣವನ್ನು ಕೊಟ್ಟು 'ಸರಳಭಿಕ್ಷೆ'ಯನ್ನು ಕೊಂಡುಕೊಂಡೇ ಬಂದು ಬಿಟ್ಟಳು"[4] ಎಂಬ ವಿಮರ್ಶೆ ಈ ಸನ್ನಿವೇಶವನ್ನು ಯಥಾರ್ಥವಾಗಿಯೇ ವಿವರಿಸಿದೆ. ಕವಿ ಇನ್ನೂ ಸ್ವಲ್ಪ ಮಾನವೀಯವಾಗಿ ಈ ಸಂಬಂಧವನ್ನು ಚಿತ್ರಿಸಬಹುದಿತ್ತು.

ಕರ್ಣನನ್ನೂ-ಸೇರಿ ಎಲ್ಲ ಕೌರವಪಕ್ಷದ ವೀರರಿಗೂ ಗೊತ್ತಿತ್ತು ಮಹಾಭಾರತ ಸಂಗ್ರಾಮದ ಫಲಿತಾಂಶವೇನೆಂದು. ಆದರೆ ಕರ್ಣನಂತೆ ಸಾಯಲು ನಿಶ್ಚಯಿಸಿಯೇ ಯುದ್ಧರಂಗವನ್ನು ಪ್ರವೇಶಿದವರು ಯಾರೂ ಇಲ್ಲ. ತನ್ನ ಜನನದ ರಹಸ್ಯ ತಿಳಿದ ಮೇಲೆ ಬದುಕಿನಲ್ಲಿ ಆತನಿಗೆ ಒಂದು ರೀತಿಯ ವೈರಾಗ್ಯ ಬಂದುಬಿಡುತ್ತದೆ. ಕೈದಣಿಯೆ ಹೊಯ್ದಾಡಿ ಸ್ವಾಮಿಯ ಋಣವನ್ನು ತೀರಿಸಿ ಸಾಯಬೇಕೆನ್ನುವ ಆಸೆ ಮಾತ್ರ ಉಳಿಯುತ್ತದೆ. ಅದೂ ಕೈಗೂಡಲು ಅವಕಾಶ ಬೇಗ ಬರುತ್ತದೆ. ಭೀಷ್ಮ, ದ್ರೋಣರು ಶರಮಂಚ ಮತ್ತು ಸಾವನ್ನು ಸ್ವೀಕರಿಸಿದ ಮೇಲೆ ನ್ಯಾಯವಾಗಿಯೇ ಕರ್ಣ ದಳಪತಿಯಾಗುತ್ತಾನೆ. ಸಾರಥಿಯಾದ ಶಲ್ಯನು ಅಡಿಗಡಿಗೆ ನಿರುತ್ಸಾಹಗೊಳಿಸುತ್ತಿದ್ದರೂ ಲೆಕ್ಕಿಸನೆ

ಸಾಹಸ ಪರಾಕ್ರಮದಿಂದ ಶತ್ರುಗಳನ್ನು ತರಿದೊಟ್ಟುತ್ತಾನೆ. ಕೌರವನಿಗಂತೂ ಇದು ಆಶ್ಚರ್ಯವೇ ಅಲ್ಲ. ಏಕೆಂದರೆ ಅವನು ಯುದ್ಧದಲ್ಲಿ ನೆಚ್ಚಿದ್ದುದು ಕರ್ಣನ ಭುಜಬಲವನ್ನು ಮಾತ್ರ. ತನ್ನ ಸ್ನೇಹಿತನನ್ನು ಕರ್ಣ ಎಷ್ಟು ಪ್ರೀತಿಸುತ್ತಿದ್ದನೆಂದರೆ ಒಮ್ಮೆ ತಾನು ಕೊಟ್ಟ ವಚನವನ್ನೂ ಮರೆತುಬಿಡುತ್ತಾನೆ. ಕೃಷ್ಣನಿಗೆ ಮತ್ತು ತಾಯಿ ಕುಂತಿಗೆ ಕೊಟ್ಟ ವಚನವನ್ನು ಮರೆತು ಅರ್ಜುನನನ್ನು ಕೊಲ್ಲಲು ಮುಂದಾಗುತ್ತಾನೆ; ಸರ್ಪಾಸ್ತ್ರವನ್ನು ಪ್ರಯೋಗಿಸಿ; ಕೃಷ್ಣನ ಸಮಯೋಚಿತ ಜಾಣ್ಮೆಯಿಂದ ಮಾತ್ರ ಅರ್ಜುನನ ಜೀವವುಳಿಯುತ್ತದೆ. ಮರಳಿ ಬಂದ ಸರ್ಪವನ್ನು ಕರ್ಣ ನಿರಾಕರಿಸಿ ಹಿಂಪಕ್ಕೆ ಕಳಿಸುತ್ತಾನೆ. ಶಲ್ಯನು ಇದನ್ನು ಒಪ್ಪುವುದಿಲ್ಲ. ಮತ್ತೊಮ್ಮೆ ಪ್ರಯತ್ನಿಸಲು ಹೇಳಿದನು. ತೊಟ್ಟ ಬಾಣವನ್ನು ತಾನು ಮತ್ತೆ ತೊಡೆನೆಂದು ಕರ್ಣ ನಿರಾಕರಿಸಿದಾಗ ಶಲ್ಯನಿಗೆ ರೋಷವುಂಟಾಗಿ 'ಕುಲ ಹೀನನಲಿ ಗುಣವರಸಲೇಕೆಂದು' ಕುದುರೆಯ ಕಡಿವಾಣಗಳನ್ನು ಎಸೆದು ರಥವನ್ನು ಬಿಟ್ಟು ಹೋಗುತ್ತಾನೆ. ಸಾರಥಿಯಿಲ್ಲದೆ ಏಕಾಂಗ ವೀರನಾಗಿ ಕರ್ಣ ಸೆಣಸುತ್ತಿರುವಾಗ ರಥದ ಚಕ್ರಗಳು ರಕ್ತದ ಕೆಸರಿನಲ್ಲಿ ಹೂತು ಹೋಗುತ್ತವೆ. ಅರ್ಜುನನಿಗೆ ಶಸ್ತ್ರ ಧರ್ಮವನ್ನು ನೆನಪಿಸಿ ರಥವನ್ನು ಮೇಲೆತ್ತಲು ಕರ್ಣ ಕೆಳಗಿಳಿಯುತ್ತಾನೆ. 'ಆಪತ್ತೆಸಗಿದಾಗಳೆ ಹಗೆಯ ಗೆಲುವುದು ವಸುಮತೀಶರ ನೀತಿ' ಎಂಬ ಕೃಷ್ಣನ ಮಾತಿಗೆ ಒಲ್ಲದ ಮನಸ್ಸಿನಿಂದ ಕಟ್ಟುಬಿದ್ದ ಅರ್ಜುನ ಬಾಣ ಪ್ರಯೋಗಿಸುತ್ತಾನೆ. ಕರ್ಣನೂ ಇದರಿಂದ ಎದೆ ಗುಂದದೆ ಕಾದುತ್ತಾನೆ. ತನ್ನ ಅವಸಾನವು ಸನ್ನಿಹಿತವಾದಂತೆ ಕೌರವನ ನೆನಪು ಅವನ ಮೇಲಿನ ಮೋಹ ದಟ್ಟೈಸತೊಡಗುತ್ತದೆ. ಅರ್ಜುನನ ಬಾಣ ಅವನ ಎದೆಯಲ್ಲಿ ನಾಟಿದ್ದರೂ ಪ್ರಾಣ ಹೋಗದ ಮರ್ಮವನ್ನರಿತ ಕೃಷ್ಣ ಬ್ರಾಹ್ಮಣ ವೇಷದಲ್ಲಿ ಕರ್ಣನ ಬಳಿ ಸಾರಿ ಅವನ ಕುಂಡಲವನ್ನು ಬೇಡಿದನು. ಎದೆಯನ್ನು ಬಗಿದು ನಿರ್ಮಲೋದಕದಿಂದ ಧಾರೆಯೆರೆದು ಕೊಡುತ್ತಿರುವಂತೆಯೇ ಕರ್ಣನ ಒಡಲಿನಿಂದ ತೇಜಃ ಪುಂಜವೊಗೆದುಪ್ಪರಿಸಿ ಹಾಯ್ದು ಸೂರ್ಯನನ್ನು ಸೇರುತ್ತದೆ. ಕರ್ಣನಂತಹ ಮಹಾವೀರನನ್ನು ಎರಡು ಯುಗದಲ್ಲಿಯೂ ಕಾಣಲಿಲ್ಲವೆಂದು ಅರ್ಜುನನ ಬಾವುಟದಲ್ಲಿದ್ದ ಹನುಮಂತ ಕಣ್ಣೀರು ಮಿಡಿದನಂತೆ:

ಕಳಚಿ ದುರಿಯೋಧನನ ಬೆಳುಗೊಡೆ
ನೆಲಕೆ ಬೀಳ್ವಂದದಲಿ ಕೌರವ
ಕುಲದ ನಿಖಿಳೈಶ್ವರ್ಯವಿಳೆಗೊರ್ಗುಡಿಸಿ ಕೆಡೆವಂತೆ

ಥಳ ಥಳಿಪ ನಗೆಮೊಗದ ಗಂಟಿಕಿ
ಬಲಿದ ಹುಬ್ಬಿನ ಬಿಟ್ಟ ಕಂಗಳ
ಹೊಳೆವ ಹಲುಗಳ ಕರ್ಣ ಶಿರ ಕೆಡೆದುದು ಧರಿತ್ರಿಯಲಿ

ಎಂದು ಕವಿಯೂ ಅಳಲಿನಲ್ಲಿ ಭಾಗಿಯಾಗಿದ್ದಾನೆ. ಕರ್ಣನ ಸಾವನ್ನು ಕಂಡ ದುರ್ಯೋಧನನ ಅಳಲು ಪಾತಿಗೆ ಮೀರಿದ್ದು. ದುಃಖ ಜರ್ಝರಿತನಾಗಿ ಮೂರ್ಛೆಗೆ ಸಲ್ಲುತ್ತಾನೆ. ಕೇವಲ ಉದ್ಗಾರಗಳಿಂದಲೇ ಹೃದಯ ಬಿರಿವಂತಹ ಅವನ ಶೋಕವನ್ನು ಕವಿ ಸಹಜವಾಗಿ ವರ್ಣಿಸಿದ್ದಾನೆ. ಕೌರವ ಪರಿವಾರವೇ ಕಂಬನಿಯ ಕಡಲಿನಲ್ಲಿ ಹೊರಳಾಡುತ್ತದೆ. ಕರ್ಣನಂತಹ ಅಮೂಲ್ಯ ಜೀವ ಗಳನ್ನೇ ಬಲಿ ತೆಗೆದುಕೊಳ್ಳುವ ಯುದ್ಧವೇಕಾದರೂ ಬಂತೆಂದು ಅವರು ಹಲುಬಿದರಂತೆ :

ಕಿತ್ತರೋ ಕಲ್ಪದ್ರುಮವ ಕೆಡೆ
ಗುತ್ತಿದರೋ ಸುರಧೇನುವನು ಕೈ
ವರ್ತಿಸಿದರೋ ಪರುಷವನು ಹಾ ಜಲಧಿ ಮಧ್ಯದಲಿ
ಎತ್ತಣದು ಭಾರತದ ರಣ ನಮ
ಗೆತ್ತಲರಸುತ ಬಂದುದಕಟಾ
ಮಿತ್ತುವೆಂದೊರಲಿದರು ಮಂದಿಗಳೆರಡು ಥಟ್ಟಿನಲಿ

ವಿರಾಟ ಪರ್ವದಲ್ಲಿ ಬರುವ ಉತ್ತರ ಕುಮಾರನ ಪಾತ್ರ ಕುಮಾರ ವ್ಯಾಸನ ಹಾಸ್ಯ ಪ್ರತಿಭೆಗೆ ಸೊಗಸಾದ ಉದಾಹರಣೆ. ಎಂತಹ ಗಂಭೀರ ಸನ್ನಿ ವೇಶದಲ್ಲಿಯೂ ನಿರೂಪಣೆಯ ಚಮತ್ಕೃತಿಯಿಂದ ಹಾಸ್ಯ ಅಲ್ಲಲ್ಲಿ ಮಿಂಚಿ ಮಾಯವಾಗುವುದು ಗದುಗಿನ ಭಾರತದಲ್ಲಿ ಕಂಡುಬರುವ ವಿಶೇಷ ವಿಚಾರ. ಹಿಡಿಂಬಾಸುರನು ಪಾಂಡವರನ್ನು ಭಕ್ಷಿಸಲು ಮುನ್ನುಗ್ಗಿದ್ದರೆ, ನಿದ್ರಿಸುತ್ತಿದ್ದ ಅವರಿಗೆ ಎಚ್ಚರಾದೀತೆಂದು ಭೀಮನು ಅವನಿಗೆ ಎಚ್ಚರಿಕೆ ಕೊಡುತ್ತಾನೆ :

ಒರಲ ಬೇಡವೊ ಕುನ್ನಿ ಮೆಲ್ಲನೆ
ತರುಬಿ ಕಾದುವುದೆಲವೊ ಮೈಮರ
ದೊರಗಿದವರೇಳ್ವರು ಕಣಾ ಸತ್ತಂತೆ ಸಾರೆನುತ...

ಹಸಿವೆಯಿಂದ ರೋಷ ಭಯಂಕರನಾದ ಬಕಾಸುರನಿಗೆ 'ಮತ್ತೆ ಶೇಷಾನ್ನದಲಿ ತೋರುತ್ತ, ತುತ್ತುಗಳ ತೂಗುತ್ತ ಮಾರುತಿ ಮೆತ್ತಿಕೊಂಡನು ಬಾಯೊಳವನನು ಬೆರಳಲೇಡಿಸುತ' ಎಂಬ ಭೀಮಚೇಷ್ಟೆ ಹೇಗಿರಬೇಕು ?

ಹಾಸ್ಯಪರ ಮನೋಭಾವ ಉತ್ತಮ ಕವಿಗೆ ಪ್ರಮುಖ ಸ್ವಭಾವಗಳಲ್ಲೊಂದಾಗಿರುತ್ತದೆ. ಉತ್ತರಕುಮಾರ ಪ್ರಸಂಗವಂತೂ ಕುಮಾರವ್ಯಾಸ ಭಾರತದ ರಸವತ್ತಾದ ಭಾಗಗಳಲ್ಲೊಂದು. ವಿರಾಟನ ತುರು ಮಂದೆಯನ್ನೆಲ್ಲಾ ಕೌರವ ಸೇನೆ ಅಪಹರಿಸಿಕೊಂಡು ಹೋದ ಸುದ್ದಿಯನ್ನು ಕೇಳಿ ಆತ ಯುದ್ಧ ಸನ್ನದ್ಧನಾಗುವಾಗ ಅಂತಃಪುರದ ಮಹಿಳೆಯರ ಮುಂದೆ ಕೊಚ್ಚಿಕೊಳ್ಳುವ ಪ್ರತಾಪ ಕನ್ನಡ ನಾಡಿನಲ್ಲಿ ಗಾದೆ ಮಾತಾಗಿ ಬಿಟ್ಟಿದೆ. ತನ್ನ ಸಮಾನ ವೀರರಲ್ಲದ ಕೌರವರೊಡನೆ ಕಾದುವುದೇ ತನಗೆ ಅಪಮಾನವೆಂದು ಭಾವಿಸುತ್ತಾನೆ. ಭೀಷ್ಮ, ದ್ರೋಣ, ಕರ್ಣ ಮುಂತಾದ ವೀರರು ಅರ್ಹರಲ್ಲ :

ಆರೊಡನೆ ಕಾದುವೆನು ಕೆಲಬರು
ಹಾರುವರು ಕೆಲರಂತಕನ ನೆರೆ
ಯೂರವರು ಕೆಲರಧಮ ಕುಲದಲಿ ಜನಿಸಿ ಬಂದವರು
ವೀರರೆಂಬವರಿವರು ಮೇಲಿ
ನ್ನಾರ ಹೆಸರುಂಟವರೊಳಂದು ಕು
ಮಾರ ನೆಣಗೊಬ್ಬಿನಲಿ ನುಡಿದನು ಹೆಂಗಳಿದಿರಿನಲಿ

ಅರ್ಹನಾದ ಸಾರಥಿಯೊಬ್ಬನ ಕೊರತೆ ಬೇರೆ ಈ ಸುಕುಮಾರನಿಗೆ ಚಿಂತೆಯುಂಟುಮಾಡಿದೆ. ಬೃಹನ್ನಳೆಯಾಗಿದ್ದ ಅರ್ಜುನ ಸಾರಥಿ ಸಿಕ್ಕಿದ ಮೇಲೆ ಅವನಿಗೆ ಸ್ವಲ್ಪ ಸಮಾಧಾನವಾಯಿತು. ಇಷ್ಟೆಲ್ಲಾ ವ್ಯವಸ್ಥೆ ಮಾಡಿಕೊಂಡು ಹೊರಟ ಉತ್ತರಕುಮಾರನ ಅವಸ್ಥೆ ಯುದ್ಧಭೂಮಿಯನ್ನು ತಲುಪಿದಮೇಲೆ ಹಾಸ್ಯಾಸ್ಪದವಾಗುವುದು ಅವನತಿಯ ಹಾದಿಹಿಡಿದ ರಾಜವಂಶಗಳ ಅಣಕದಂತಿದೆ. ಸಾರಥಿಯಾದ ಅರ್ಜುನ ರಥವನ್ನು ಮುಂದೆ ನಡೆಸಿದರೆ ಅವನ ನಡುಕ ಹತ್ತಾರು ಪಟ್ಟು ಹೆಚ್ಚುತ್ತದೆ :

ಏಕೆ ಸಾರಥಿ ರಥವ ಮುಂದಕೆ
ನೂಕಿ ಗಂಟಲ ಕೊಯ್ವೆ ನುಡು ನುಡು
ಕಾಕಲಾ ಕಣ್ಣೊಡೆಯುತಿದೆ ಕಾಣಾ ಮಹಾಬಲವ
ನಾಕ ನಿಳಯರಿಗರಿದು ನಿನಗೆ ವಿ
ವೇಕ ವೆಳ್ಳನಿತಿಲ್ಲಲಾ ತೆಗೆ
ಸಾಕು ವಾಘೆಯ ಮರಳಿ ಸೆಳೆ ತೇಜಿಗಳ ತಿರುಹೆಂದ

ನುಡಿಯ ಕೇಳದೆ ಮುಂದೆ ನಾಲ್ಕೆಂ
ಟಡಿಯುನರ್ಜುನ ರಥವ ನಡೆಸಲು
ಹಿಡಿದ ಬಿಲ್ಲಂಬುಗಳು ಬಿದ್ದವು ಕೈಯ ನರತೆಗೆದು

ಹಿಡಿ ಹಯುವ ನಿರಿಗಾರ ಸಾರಥಿ
ಸುಡಿಪವರು ನಾವ್ ಹಗೆಗಳೇ ನಿ
ನ್ನೊಡೆಯರಲ್ಲಾ ಸ್ವಾಮಿ ದ್ರೋಹಿತೆ ಲೇಸು ಲೇಸೆಂದ

ಎಂದೊಡರ್ಜುನ ನಗುತೆ ರಥವನು
ಮುಂದೆ ನಾಲ್ಕೆಂಟಡಿಯ ನೂಕಲು
ಕೊಂದನೈ ಸಾರಥಿಯೆನುತ ಸಂವರಿಸಿ ಮುಂಜೆರಗ
ನಿಂದು ಮೆಲ್ಲನೆ ರಥದ ಮೊದಲಿಗೆ
ಬಂದು ಧುಮ್ಮಿಕ್ಕಿದನು ಬದುಕಿದೆ
ನೆಂದು ನಿಟ್ಟೋಟದಲಿ ಹಾಯ್ದನು ಬಿಟ್ಟ ಮಂಡೆಯಲಿ

ಪಲಾಯನ ಚತುರ ಉತ್ತರಕುಮಾರನನ್ನು ಅರ್ಜುನನು ಹಿಂದೆ ತಂದು ಸಾರಥಿಯನ್ನಾಗಿಸಿ ತಾನೇ ಯುದ್ಧವನ್ನು ಮುಂದುವರಿಸಬೇಕಾಯಿತು.

## 4

ಗದುಗಿನ ಭಾರತದ ಯುದ್ಧ ವರ್ಣನೆಗಳು ಕುಮಾರವ್ಯಾಸನು ಬದುಕಿದ್ದ ವೀರಯುಗಕ್ಕೆ ತಕ್ಕಂತಿವೆಯೆನ್ನುತ್ತಾರೆ ವಿದ್ವಾಂಸರು. ಅದರಂತೆ ಅವನು ಬದುಕಿದ್ದ ಕಾಲದ ಅನೇಕ ಉತ್ತರಕುಮಾರನಂತಹ ಅರಸುಗಳೂ ಅವನ ಬಣ್ಣನೆಗೆ ತುತ್ತಾಗಿದ್ದಾರೆನ್ನಬೇಕಾಗುತ್ತದೆ.

ಪಂಪನಂತೆ ಕುಮಾರವ್ಯಾಸ ಯಾವ ಯುದ್ಧದಲ್ಲಿಯೂ ಭಾಗವಹಿಸಿದವನಲ್ಲ. ಕೆಲವು ಸಂಶೋಧಕರು ಅವನನ್ನು ಗಜಸೇನಾಪತಿ ಮಾಡಲು ಹೆಣಗಿದ್ದಾರೆ. ಅವನ ಕಾವ್ಯದಲ್ಲಿ ಇದಕ್ಕೆ ಆಧಾರವಿಲ್ಲ, ರಾಜಾಶ್ರಯಕ್ಕೆ ಇಂಥ ಸ್ವತಂತ್ರ ಭಕ್ತಕವಿ ಒಗ್ಗಿಕೊಂಡಿರಲಾರ. ಸ್ವತಃ ತನ್ನನ್ನು 'ಯೋಗೀಂದ್ರ'ನೆಂದು ಆತ ಕರೆದುಕೊಂಡಿದ್ದಾನೆ. ಆದರೂ ಕುಮಾರವ್ಯಾಸನಂತೆ ಭೀಕರ ರಮ್ಯವಾದ ಯುದ್ಧ ವರ್ಣನೆಗಳನ್ನು ಕೊಟ್ಟ ಕವಿಗಳು ಕನ್ನಡದಲ್ಲಿ ಯಾರೂ ಇಲ್ಲವೆನ್ನಬಹುದಾಗಿದೆ. ವಿಜಯನಗರದ ವೈಭವವು ತುತ್ತತುದಿಯಲ್ಲಿದ್ದ ಆ ಕಾಲದಲ್ಲಿ ಇಡೀ ದಕ್ಷಿಣ ಭಾರತವೇ ಶೌರ್ಯ ಪ್ರತಾಪಗಳ ಹೆಮ್ಮೆಯಲ್ಲಿ ಮೆರೆಯುತ್ತಿತ್ತು. ತಾನು ಜೀವಿಸಿದ್ದ ಕಾಲವೇ ಕವಿಯ ಅನುಭವದ ಮೂಲ ದ್ರವ್ಯವಾದುದರಿಂದ ಕುಮಾರವ್ಯಾಸ ಭಾರತವು ವೀರರಸ ಪ್ರಧಾನವಾಗದೇ ಗತ್ಯಂತರವಿಲ್ಲ. ಯುದ್ಧ ವರ್ಣನೆಗೆ ಕುಮಾರವ್ಯಾಸನೇ ಯುದ್ಧದಲ್ಲಿ ಭಾಗ

ವಹಿಸಿರಬೇಕಿಲ್ಲ. ತಾನು ಜೀವಿಸಿದ್ದ ಕಾಲಕ್ಕೆ ತೀವ್ರ ಸಂವೇದನಾಶೀಲನಾಗಿದ್ದರೆ ಸಾಕು.

ಕುರುಪಾಂಡವ ಸೇನೆಯ ವಿಸ್ತಾರ ಮತ್ತು ಯುದ್ಧದ ಭಯಂಕರ ಸ್ವರೂಪವನ್ನು ಮನದಟ್ಟು ಮಾಡಿಕೊಡುವ ಆತನ ಎರಡು ಪದ್ಯಗಳನ್ನು ಇಲ್ಲಿ ಉದಾಹರಿಸಬಹುದಾಗಿದೆ :

ಬಿಡದೆ ಕಡಿದಾಡಿದರು ಸೇನಾ
ಗಡಲು ರಕುತದ ಕಡಲನುಗುಳಿತು
ಬಿಡದೆ ಸುಂಟರುಗಾಳಿ ವಿಲಯದ ಮಳೆಯು ಪಡೆದಂತೆ
ಒಡೆದು ನಾನಾ ಘಟ್ಟುಗಳ ಮೈ
ವಿಡಿದು ವಾರಿಡುವರುಣ ಜಲದಲಿ
ಕಡಿಕುಗಳು ಬೆಂಡೇಳೆ ದಂತಿಗಳಟ್ಟೆ ಕೊಡೆ ನೆಗೆಯೆ

ಪ್ರಚಂಡವಾದ ಮಳೆ, ಬಿರುಗಾಳಿ ಮತ್ತು ಪ್ರವಾಹದ ಚಿತ್ರವನ್ನು ಯುದ್ಧ ಭೀಕರತೆಗೆ ಹೊಂದಿಸುವ ಸಹಜ ಕಲೆಗಾರಿಕೆಯನ್ನು ಮೇಲಿನ ಪದ್ಯ ತೋರಿಸಿದರೆ, ಪರಂಪರಾನುಗತ ರೀತಿಯ ವರ್ಣನೆಯೇ ಪ್ರಸ್ತುತ ಸನ್ನಿವೇಶಕ್ಕೆ ಎಷ್ಟು ಚೆನ್ನಾಗಿ ಶೋಭಿಸುತ್ತವೆಯೆಂಬುದನ್ನು ಕೆಳಗಿನ ಪದ್ಯದಲ್ಲಿ ಕಾಣಬಹುದಾಗಿದೆ:

ಖುರದ ಹೊಯಿಲಲಿ ನಡುಗಿತಿಳೆ ಫಣಿ
ವರನ ಹೆಡೆಗಳು ನೊಂದವಂಬುಧಿ
ಹೊರಳಿದವು ಹೋಗಾಡಿದವು ಕುಲಗಿರಿಗಳಚಲತೆಯ
ಅರರೆ ಸೂಟಿಯೊಳಟ್ಟಿದರೆ ದಿ
ಕ್ಕರಿಯ ಸೊಕ್ಕಡಗಿದವು ನಿಗುರುವ
ತುರುಗದಳವೊಡವೆರಸಿದವು ಕುರು ಪಾಂಡು ಸೈನ್ಯದಲಿ

ಯುದ್ಧ ವೀರರ ಪ್ರತಾಪಗಳಿರಲಿ, ಭಗದತ್ತನ ಆನೆಯ ಭಯಂಕರ ಆಟಾಟೋಪವನ್ನು ಕವಿ ವರ್ಣಿಸಿರುವ ರೀತಿಯೂ ಅಸಾಧಾರಣವಾದುದು :

ಜಗದ ನಿಡು ನಿದ್ರೆಯಲಿ ಮೋಹರ
ದೆಗದ ಮುಗಿಲೋ ಮೇಣಖಿಳ ಕುಲ
ದಿಗಿಭವಂಟೊಂದಾಯ್ತೊ ಕೈಕಾಲ್ ಮೂಡಿತೊ ನಭಕೆ

ಎಂಬಂತಹ ಅತಿಶಯೋಕ್ತಿಯ ಬಣ್ಣನೆಯು ಅದರ ದೈತ್ಯ ಆಕಾರವನ್ನು ಭವ್ಯವಾದ ರೀತಿಯಲ್ಲಿ ಮನದಟ್ಟು ಮಾಡಿಕೊಟ್ಟರೆ ಕೇವಲ ಸ್ವಭಾವೋಕ್ತಿಯ ಮೂಲಕವೇ ಅದರ ಆಟೋಪವನ್ನು ಮತ್ತೊಂದು ಪದ್ಯದಲ್ಲಿ ವರ್ಣಿಸಿದ್ದಾನೆ:

ನೆಳಲು ಗಂಡವ್ವಳಿಸುವುದು ಸುಂ
ಡಿಲನು ತೂಗಾಡುವುದು ಹೋರಿದು
ಬಳಲುವುದು ಮೊಗ ನೆಗಹಿ ಭೀಮನ ದನಿಯನಾಲಿಪುದು
ಅಳಿಯ ಮುತ್ತಿಗೆಗಳನು ಬೀಸದೆ
ನೆಲಕೆ ಕಿವಿಯನು ಜೋಲು ಬಿಡುವುದು
ಬಲು ಕಣೆಯ ಹಿಡಿ ಹಿಂಗೆ ಲಾಗಿಸುತಿರ್ದುದಾದಂತಿ

ಕುಮಾರವ್ಯಾಸನ ವೀರರ ಮೂದಲಿಕೆಗಳು ಅವರ ಬಾಣಗಳಷ್ಟೆ ಹರಿತವಾದವು. ಕನ್ನಡದ ಯಕ್ಷಗಾನ ಬಯಲಾಟಗಳು ಇಲ್ಲಿಂದ ಸಾಕಷ್ಟು ಪ್ರಭಾವಿತಗೊಂಡಿವೆ.

ಎಲವೊ ಕೌರವ ಕೊಬ್ಬಿನರಿ ಹೆ
ಬ್ಬುಲಿಯ ಕೂಸನು ಬೇಡುವಂದದಿ
ಅಳವನರಿಯದೆ ಅಧಮರತಿಕರ ಕೂಡೆ ತೊಡಕುವರೆ
ಮಲೆತು ನೀನೆನ್ನೊಡನೆ ರಣದಲಿ
ಹಳಚಿ ನೀ ತಲೆವೆರಸಿ ಮರಳಿದ
ಡಿಳುಹುವೆನು ಕೈದುವನು ಶರ ಸನ್ಯಾಸ ತನಗೆಂದ

ದುಶ್ಯಾಸನನನ್ನು ಹಂಗಿಸುವ ಅಭಿಮನ್ಯುವಿನ ಮೇಲಿನ ಮಾತುಗಳಂತೆಯೇ, ಭೀಷ್ಮ, ಕರ್ಣ, ಅರ್ಜುನ, ದ್ರೋಣ ಮುಂತಾದ ಮಹಾವೀರರೂ ಪರಸ್ಪರ ಮೂದಲಿಕೆಗಳಲ್ಲಿ ತೊಡಗುತ್ತಾರೆ. ಕೈ ಬಾಯಿಗಳೆರಡರಲ್ಲಿಯೂ ಒಂದೇ ಸಮನೆ ಯುದ್ಧ ಮಾಡುವುದು ಇವರ ವಿಶೇಷ. ಕೇವಲ ವೈರಿನಿಂದೆ ಮಾತ್ರ ಅವರ ಗುಣವಲ್ಲ. ಶೌರ್ಯ ಪ್ರತಾಪಗಳಲ್ಲಿಯೂ ಪರಸ್ಪರ ಸ್ಪರ್ಧಿಸುತ್ತಾರೆ. ವೈರಿಯ ಮಹಾಸತ್ವವನ್ನೂ ಮೆಚ್ಚುವ ಉದಾರ ಗುಣಚರಿತರು. ಅಭಿಮನ್ಯು ಪರಾಕ್ರಮುವನ್ನು ಕಂಡ ದುರ್ಯೋಧನ ಹೆಮ್ಮೆ ಪಟ್ಟನಂತೆ :

ಹುರುಡ ಮರೆದೆನು ಮಗನೆ ಸಾಲದೆ
ಭರತ ಕುಲದಲಿ ನಿನ್ನ ಬೆಳವಿಗೆ
ಯೆರಡು ಕವಲನ್ವಯಕೆ ಕೊಡದೇ ಸುಗತಿ ಸಂಪದವ
ಕರುಳು ಬೀಳವೆ ತನ್ನ ಬಸುರಿಂ
ದುರುಳಿದವದಿರಲೇನು ಫಲ ಮ
ತ್ಸರವೆ ಪಾರ್ಥ ಕೃತಾರ್ಥನೆಂದನು ಕೌರವರ ರಾಯ

ಮುಂದೆ ಕೌರವ ಭೀಮರು ಗದಾಯುದ್ಧದಲ್ಲಿ ತೊಡಗಿದಾಗ ಭೀಮ ಬಿದ್ದರೂ ಅವನನ್ನು ಕೊಲ್ಲದೆ, ಗದೆಯ ಗಾಳಿಯಲ್ಲಿ ಎಚ್ಚರಿಸಿ ಪುನಃ ಯುದ್ಧಕ್ಕೆ ತೊಡಗಿ

ದನಂತೆ ಕೌರವ. ಮಹಾಭಾರತದ ಹದಿನೆಂಟು ಪರ್ವಗಳಲ್ಲಿ ಕುಮಾರ ವ್ಯಾಸನು ಬರೆದಿರುವುದು ಮೊದಲ ಹತ್ತು ಪರ್ವಗಳನ್ನು ಮಾತ್ರ. ಅಲ್ಲಿನ ಐದು ಪರ್ವಗಳು ಪೂರ್ತಿ ಯುದ್ಧಕ್ಕೆ ಮೀಸಲಾಗಿವೆ. ಉದ್ಯೋಗ ಪರ್ವವೂ ಒಂದು ರೀತಿಯಲ್ಲಿ ಯುದ್ಧಕ್ಕೆ ಹಿನ್ನೆಲೆಯಾಗಿ ಬರುತ್ತದೆ. ಮೊದಲ ನಾಲ್ಕು ಪರ್ವಗಳಲ್ಲಿಯೂ ಸಾಕಷ್ಟು ಯುದ್ಧಗಳಾಗುತ್ತವೆ. ಆದುದರಿಂದ ಗದುಗಿನ ಭಾರತದಲ್ಲಿ ವೀರರಸವೇ ಪ್ರಧಾನ.

ಪಂಪಭಾರತದಲ್ಲಿ ಒಬ್ಬೊಬ್ಬ ಮಹಾವೀರನು ಮಡಿದಾಗಲೂ ಅವನ ಮಹತ್ವವನ್ನು ಸ್ಥಾಪಿಸುವ ಚರಮ ಗೀತೆಯೊಂದನ್ನು ಕವಿ ರಚಿಸಿದ್ದಾನೆ. ಕುಮಾರವ್ಯಾಸನೂ ಸಹ ಕೆಲವರ ಸಾವುಗಳನ್ನು ಹೃದಯ ಕಲಕುವಂತೆ ವರ್ಣಿಸುವುದರ ಜೊತಗೆ ಅಲ್ಲಿನ ಗಹನತೆಯನ್ನು ಸೂಚಿಸುವಂತಹ ಒಂದು ರೂಪಕವನ್ನೋ ಪ್ರತಿಮೆಯನ್ನೋ ನಿಲ್ಲಿಸುತ್ತಾನೆ. ಶರಶಯ್ಯಾಗತನಾದ ಭೀಷ್ಮನನ್ನು ಕೌರವ ಪಾಂಡವರಿಬ್ಬರೂ ಉಪಚರಿಸಿ ಬಿಡಾರಗಳಿಗೆ ಹಿಂದಿರುಗುತ್ತಾರೆ. ಅಂದಿನ ಸೂರ್ಯಾಸ್ತವನ್ನು ಕವಿ ರೂಪಕ ಭಾಷೆಯಲ್ಲಿ ವರ್ಣಿಸಿದ್ದಾನೆ. "ಪಡುವಣ ಶೈಲ ವಿಪುಲ ಸ್ತಂಭ, ದೀಪಿಕೆಯಂತೆ ರವಿ ಮೆರೆದ" ಎಂಬ ಒಂದು ಸಾಲು ಭೀಷ್ಮನ ಮಹತ್ವವನ್ನು ಸಮರ್ಥವಾಗಿ ಹೇಳುತ್ತದೆ. ದ್ವಾಪರ ಯುಗದ ಕಳಶದಂತಿದ್ದ ಭೀಷ್ಮ ಮರಣಶಯ್ಯೆಯಲ್ಲಿದ್ದಾಗ ಅವನ ತಲೆ ದೆಸೆಯಲ್ಲಿ ಮಣ್ಣಿನ ಹಣತೆಯಿಡಲು ಸಾಧ್ಯವೇ? ಸಾಕ್ಷಾತ್ ಸೂರ್ಯನೇ ಹಣತೆ; ಪಶ್ಚಿಮ ಪರ್ವತವೇ ದೀಪಸ್ತಂಭವಾಗಿದೆ.

ಅಭಿಮನ್ಯು ಯುದ್ಧರಂಗದಲ್ಲಿ ಸಿಡಿಲಾಗಿ ಮಿಂಚಿ ಮಾಯವಾದ ಮೇಲೆ ಹಬ್ಬಿದ ನೀರವತೆಯನ್ನು ಎರಡು ಉಪಮೆಗಳಲ್ಲಿ ಕವಿ ಸೊಗಸಾಗಿ ನಿರೂಪಿಸಿದ್ದಾನೆ; ಅವು ಅವನ ಪರಾಕ್ರಮಕ್ಕೆ ನಿಲ್ಲಿಸಿದ ಧ್ವಜ ಪ್ರಶಸ್ತಿಯಂತಿವೆ:

ಕಾಳು ಕಿಚ್ಚಿದ್ದಡವಿಯನು ಕುಡಿ
ನಾಲಗೆಯೊಳಳವಡಿಸಿ ದಳ್ಳುರಿ
ಜ್ವಾಲೆ ತಗ್ಗಿದವೋಲು ಗಗನದ ಮುಗಿಲ ಮೋಹರವ
ಥಾಳಿಯುಲಿಯುರೆಯಟ್ಟೆ ಸುಂಟರು
ಗಾಳಿಯುರವಣೆ ನಿಂದವೊಲು ಸುರ
ಪಾಲ ತನಯನ ತನಯನಸ್ತಮಿಸಿದನು ರಣದೊಳಗೆ

ದ್ರೋಣನ ಮರಣ ವಾರ್ತೆಯನ್ನು ಧೃತರಾಷ್ಟ್ರನಿಗೆ ಸಂಜಯನು ಹೇಳುತ್ತಾನೆ. ಅದನ್ನು ಕವಿ 'ಕೋಲ ಗುರುವಿನ ಮರಣವಾರ್ತಾ ಕಾಲಸರ್ಪನ ತಂದು

ಸಂಜಯ ಹೇಳಿಗೆಯ ನೀಡಾಡಿದನು ಧೃತರಾಷ್ಟ್ರನಿದಿರಿನಲಿ' ಎಂದು ಬಣ್ಣಿಸುತ್ತಾನೆ. ದ್ರೋಣನ ಸಾವು ಧೃತರಾಷ್ಟ್ರನ ಮನಸ್ಸಿನಲ್ಲಿ ಹುಟ್ಟಿಸಿದ ಭಯವನ್ನು ಇದಕ್ಕಿಂತ ಪರಿಣಾಮಕಾರಿಯಾಗಿ ಭಾಷೆಯಲ್ಲಿ ಹೇಗೆ ಮೂಡಿಸಲು ಸಾಧ್ಯ ? ಇಂಥ ಭಯಂಕರ ವಾರ್ತೆಯಾಗುವ ಸಾವನ್ನು ಪಡೆದ ದ್ರೋಣ ಎಂಥ ಪರಾಕ್ರಮಶಾಲಿಯಾಗಿರಬೇಕು !

ಸಕಲೈಶ್ವರ್ಯ ಸಹಿತ ದುರ್ಯೋಧನನ ಬೆಳ್ಗೊಡೆ ಭೂಮಿಗೆ ಉರುಳಿದಂತೆ ಕರ್ಣಶಿರ ಬಿತ್ತೆಂದು ಕವಿ ಹೇಳುತ್ತಾನೆ. ಕರ್ಣನೊಡನೆ ಸೂರ್ಯನೂ ಅಸ್ತಮಿಸಿದನಂತೆ. ಸೂರ್ಯಾಸ್ತದಿಂದ ಬಾಡುವ ಕಮಲದಂತೆ ಕರ್ಣನ ಸಾವಿನಿಂದ ದುರ್ಯೋಧನನು ಮುಖ ಬಾಡಿ ಖಿನ್ನನಾದನಂತೆ. ಶೋಕತಮದೊಡನೆ ಕತ್ತಲೆ ಲೋಕವನ್ನು ಆವರಿಸಿತು.

ದುರ್ಯೋಧನನ ಸಾವೂ ಕವಿಯ ಗಂಭೀರ ಪರಿಗಣನೆಗೆ ಪಾತ್ರವಾಗಿದೆ. ಪ್ರತಿನಾಯಕನಾದರೂ ಮಹಾಸತ್ವನಾಗಿದ್ದುದರಿಂದ ಆತ ಸತ್ತಾಗ ಲೋಕದಲ್ಲಿ ಉತ್ಪಾತಗಳು ತಲೆದೋರಿದವು. ಆತನು ನೆಲಕ್ಕೆ ಬಿದ್ದರೆ, 'ರುಧಿರದ ತಿಲಕವಾದನಲ್ಲೈ ಧರಾಂಗನೆಗೆ' ಎಂದು ಕವಿ ಬಣ್ಣಿಸಿದ್ದಾನೆ :

ನಡುಗಿತಿಳೆ ನಿರ್ಘಾತದಲಿ ಬರ
ಸಿಡಿಲು ಸುಳಿದುದು ನೆಣನ ಬಸೆಸಹಿ
ತಡಗು ಸುರಿದವು ಕದಡಿ ಹರಿದುದುರಕುತದರೆವೊನಲು
ಸಿಡಿದವರೆಗಳು ಕೆರೆಗಳುಕ್ಕಿದ
ವಡಿಗಡಿಗೆ ಹೆಮ್ಮರ ನಿವಾತದ
ಉಡಿದು ಬಿದ್ದವು ಕೌರವೇಂದ್ರನ ಪತನ ಕಾಲದಲಿ

ಬೀಸಿದುದು ಬಿರುಗಾಳಿ ಕತ್ತಲೆ
ಸೂಸಿದುದು ದಿಗುವಳಯದಲಿ ಪರಿ
ವೇಷದಲಿ ಗ್ರಹ ನೆರೆದವೈದಾರೇಳು ರವಿಯೊಡನೆ
ಸೂಸಿದವು ಹಗಲುಳುಕು ಮೃಗಗಣ
ವಾಸುರದಲೊದರಿದವು ಕಂದಿತು
ವಾಸರಪ್ರಭೆ ಕೌರವೇಂದ್ರನ ಪತನ ಕಾಲದಲಿ

ಗದುಗಿನ ಭಾರತದ ಕಥಾರಚನೆ, ಪಾತ್ರ ಪರಿಪೋಷಣೆಗಳು ಎಷ್ಟೇ ಉನ್ನತ ಮಾದರಿಯಲ್ಲಿದ್ದರೂ ಅದಕ್ಕೆ ಹಿನ್ನಲೆಯಾಗಿ ವ್ಯಾಸಭಾರತ, ಸಂಸ್ಕೃತ-

ಕನ್ನಡದ ಕಾವ್ಯ ನಾಟಕಗಳಿವೆ. ಕುಮಾರವ್ಯಾಸ ಅವುಗಳಿಗೆ ಹೊಸ ಬಣ್ಣದ ಒಪ್ಪವಿಟ್ಟಿದ್ದಾನೆ. ಆದರೆ ಗದುಗಿನ ಭಾರತದ ಭಾಷಾ ಶೈಲಿಯಂತೂ ಕುಮಾರವ್ಯಾಸನ ಸ್ವಂತಿಕೆಯನ್ನೇ ಪೂರ್ಣವಾಗಿ ಅವಲಂಬಿಸಿರುವುದು. 'ನಾರಣಪ್ಪ ವಚನಗಾರುಡಿ. ಕನ್ನಡ, ಸಂಸ್ಕೃತ, ಕೊಂಚ ಮರಾಠಿ ಶಬ್ದಗಳು ಅವನ ಕವಿತ್ವ ಮೋಡಿಗೆ ಪೂರ್ತಿ ವಶವಾಗಿ ಅವನು ಹೇಳಿದಂತೆ ಕೇಳುತ್ತವೆ. ಅವುಗಳ ಸಂಯೋಗದ ವೈಚಿತ್ರ್ಯ ಪ್ರಶಂಸೆಯನ್ನು ಮೀರಿದ್ದು. ಮಾತುಗಳನ್ನು ಅವನ ಹಾಗೆ ಆಳುವ ಬೇರೊಬ್ಬ ಕವಿ ಕನ್ನಡದಲ್ಲಿ ಅಗೋಚರ'[5] ಎಂಬ ವಿಮರ್ಶೆಯಲ್ಲಿ ಸ್ವಲ್ಪವೂ ಅತಿಶಯೋಕ್ತಿಯಿಲ್ಲ. ಕಾವ್ಯದ ಆರಂಭದಲ್ಲಿ ಕವಿಯು ಶಾರದೆಯನ್ನು ಸ್ತುತಿಸುತ್ತಾ 'ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ' ಎಂದಿರುವ ಮಾತುಗಳು ನಿಜವಾಗಿವೆ. ಆತ ಮಹಾಕವಿಯೆನ್ನಲು ಗದುಗಿನ ಭಾರತದ ಸಹಜಭಾಷಾ ಪರಿಣತಿಯೊಂದೇ ಸಾಕು.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಅಷ್ಟಾದಶ ವರ್ಣನೆಗಳ ವ್ಯಾಮೋಹಕ್ಕೆ ಸಿಲುಕದೆ ಇರುವ ಸಮರ್ಥ ಕವಿಗಳಲ್ಲಿ ಕುಮಾರವ್ಯಾಸನು ಅಗ್ರಗಣ್ಯ. ಪ್ರಕೃತಿ ವರ್ಣನೆಯಲ್ಲಿಯಂತೂ ಆತ ಅನಾಸಕ್ತ. ಆದರೆ ಮಾನವ ಜೀವನದ ಹಾಸುಹೊಕ್ಕಾಗಿ ಪ್ರಕೃತಿಯನ್ನು ಆತ ಚೆನ್ನಾಗಿ ಬಳಸಿಕೊಂಡಿದ್ದಾನೆ. ಭೀಷ್ಮ, ಕರ್ಣರ ಅವಸಾನ ಸಮಯದಲ್ಲಿನ ಸೂರ್ಯಾಸ್ತ, ಪಾಂಡುವಿನ ಅಕಾಲ ಮೃತ್ಯುವಿಗೆ ಕಾರಣವಾದ ವಸಂತ ಋತುವಿನ ವರ್ಣನೆಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದಾಗಿದೆ. ಉಳಿದ ಕವಿಗಳಂತೆ ಹೆಣ್ಣಿನ ಅಂಗೋಪಾಂಗಗಳ ವರ್ಣನೆಗೆ ಆತ ಸಾಮಾನ್ಯವಾಗಿ ತೊಡಗುವುದಿಲ್ಲವಾದರೂ ಸ್ವಯಂವರದ ವಧುವಾಗಿದ್ದ ದ್ರೌಪದಿ, ಅರ್ಜುನನಲ್ಲಿ ಪ್ರಣಯ ಭಿಕ್ಷೆಗೆ ಬಂದ ಊರ್ವಶಿಯರ ವರ್ಣನೆಗಳು ಮನಸ್ಸು ಮಾಡಿದರೆ ಆತ ಎಂಥ ರಸಿಕ ಶಿಖಾಮಣಿಯಾಗಬಲ್ಲನೆಂಬುದಕ್ಕೆ ನಿದರ್ಶನವಾಗಿವೆ.

ಶ್ರೀಕೃಷ್ಣ ಮಹಿಮೆಯ ಪ್ರಸಂಗಗಳು ಮತ್ತು ನೀತಿಬೋಧೆಯಲ್ಲಿ ಮಾತ್ರ ಆತ ಅತಿಯಾದ ಧಾರಾಳತನವನ್ನು ತೋರುತ್ತಾನೆ. ಶ್ರೀಕೃಷ್ಣನ ರೂಪವನ್ನು ಎಷ್ಟು ರೀತಿಯಲ್ಲಿ ಹೊಗಳಿದರೂ ಅವನಿಗೆ ತೃಪ್ತಿಯಿಲ್ಲ. ನಾಮಾವಳಿಯನ್ನು ಎಷ್ಟು ವಿಸ್ತರಿಸಿದರೂ ಬೇಸರವಿಲ್ಲ. ಇದು ಒಮ್ಮೊಮ್ಮೆ ಅತಿರೇಕವನ್ನು ತಲುಪಿ ಸನ್ನಿವೇಶದ ಔಚಿತ್ಯಕ್ಕೆ ಭಂಗ ಬಂದಿರುವುದುಂಟು.

ಕುಮಾರವ್ಯಾಸನ ಮಾತಿನ ಮೋಡಿಗೆ ಉದಾಹರಣೆಯಾಗಬಹುದಾದ ಅನೇಕ ಪದ್ಯಗಳನ್ನು ಈಗಾಗಲೇ ನಾವು ಉದ್ಧರಿಸಿದ್ದೇವೆ. ಆದರೂ ಆತನ ರೂಪಕ ನಿರ್ಮಾಣ ಪ್ರತಿಭೆಯನ್ನು ಪ್ರತ್ಯೇಕವಾಗಿ ಪ್ರಸ್ತಾಪಿಸದಿದ್ದರೆ ಅಪಚಾರವಾಗುತ್ತದೆ. 'ನಾರಣಪ್ಪನು ರೂಪಕ ಸಾಮ್ರಾಜ್ಯದ ಚಕ್ರವರ್ತಿ',[6] 'ರೂಪಕವೆಂಬುದು ಅವನಿಗೆ ಹೇಳಿಕೆಗೆ ಭೂಷಣ ತರುವ ಬಾಹ್ಯೋಪಾಯ ವಾಗಿರಲಿಲ್ಲ ; ಅವನ ನುಡಿಗಟ್ಟಿನ ಸ್ವಾಭಾವಿಕ ಚರ್ಯೆಯಾಗಿತ್ತು'.[7] ಎರಡು ಸಂಗತಿಗಳ ನಡುವಿರುವ ಸಾದೃಶ್ಯವನ್ನು ಬಹು ಸಹಜವಾಗಿ ಗುರುತಿಸಿ ಹೊಂದಿಸುವ ಅವನ ಈ ಕಲೆಗಾರಿಕೆಗೆ ಸಮನಾದ ಮತ್ತೊಬ್ಬ ವ್ಯಕ್ತಿಯೆಂದರೆ ಬಸವಣ್ಣ. ಪ್ರಾಣಿ ರೂಪಕಗಳಲ್ಲಿಯಂತೂ ಇಬ್ಬರೂ ಒಬ್ಬರೊಡನೊಬ್ಬರು ಸ್ಪರ್ಧಿಸುತ್ತಾರೆ. 'ಗಾಯ ತಾಕಿದ ಹಂದಿಯೋ ರಾಧೇಯ', 'ಬಾಲದ ಕದವ ತೆಗೆ ಬಟ್ಟೆಯುಲಿಸುತ ಗರ್ಜಿಸಿದ,' 'ನಮ್ಮ ಪುಣ್ಯವು ಗಾಳಿಗೊಡ್ಡಿದ ಸೊಡರಲಾ', 'ಅಪಕೀರ್ತಿನಾರಿಯ ಸೆರಗಹಿಡಿವರು', 'ಕುರುಕುಲದ ಬೇರನು ಕೊಯ್ವನೀ ಹರಿ ಬಳಿಸಲಿಸಿ ಭೀಮಾರ್ಜುನಾಸ್ತ್ರದಲಿ,' 'ಬೇರು ನೀರುಂಡಾಗ ತಣಿಯವೆ ಭೂರುಹದ ಶಾಖೋಪಶಾಖೆಗಳು', 'ಮುಗಿಲ ಬೆಸಕಗೆ ಲಡ್ಡುಗೆ ಗಳಾದವು ಸಮಸ್ತ ಗ್ರಹಸುತಾರೆಗಳು', 'ತತ್ತ ಕೋಪಾಯುಧವ ಮಸೆದಳು ಧಾರೆಗಂಗಳಲಿ', 'ಶಿವನ ಕಾರುಣ್ಯಾಯುಧವ ಮಸೆದುದು ಸುರೇಂದ್ರ ಸ್ನೇಹ ಸಾಣೆಯಲಿ' ಮುಂತಾದ ನೂರಾರು ಉದಾಹರಣೆಗಳನ್ನು ಈ ಸಂಬಂಧದಲ್ಲಿ ಕೊಡಬಹುದು. ರೂಪಕಗಳ ರಾಶಿರಾಶಿಯನ್ನೇ ಆತ ಒಟ್ಟಿದ್ದಾನೆ ; ರೂಪಕಗಳ ಮಾಲೆ ಮಾಲೆಯನ್ನೇ ಹೆಣೆದಿದ್ದಾನೆ. ಹೀಗೆ ಸಾದೃಶ್ಯ ಕಲ್ಪನೆಗಳು ಕುಮಾರವ್ಯಾಸನಿಗೆ ಸಂಭಾಷಣೆಯಷ್ಟೇ ಸಹಜವಾಗಿ ಬಿಟ್ಟಿವೆ. ಕೀಚಕ, ಭೀಮನಿಂದ ಹತನಾಗಿ ನೆಲದ ಮೇಲೆ ಬಿದ್ದಿದ್ದರೆ 'ಖಳನು ಕಾಲ ಕೋಣ ತುಳಿದಂತಿಳೆ ಯೊರಗಿರೆ'ಎಂದು ಬಣ್ಣಿಸುತ್ತಾನೆ. 'ಕಾರಿರುಳ ಪಟ್ಟಣಕೆ ಚಂದ್ರನ ತೋರಣವ ಬಿಗಿದಂತೆ' ಘಟೋತ್ಕಚ ಕಾಣುತ್ತಿದ್ದನಂತೆ. ಅಭಿಮನ್ಯು ಸತ್ತಾಗ ಧರ್ಮಜನ ಶೋಕ, 'ಒಳಗುದಿವ ಹಸಿಮರದ ತುದಿಯಲಿ ಜಲವೊಗುವ ವೊಲು' ಇತ್ತಂತೆ.

ಕನ್ನಡ ಭಾಷೆಯ ಸಾಧ್ಯತೆಯನ್ನು ಅದರ ಎಲ್ಲ ಮಗ್ಗುಲಿನಿಂದಲೂ ಬಳಸಿದ ಕವಿ ಕುಮಾರವ್ಯಾಸ. ಆತನ ಕಾಲದ ಕನ್ನಡದ ಮಾದರಿಗಳನ್ನು ಗದುಗಿನ ಭಾರತದಲ್ಲಿ ಕಾಣಬಹುದು. ಗಾದೆ ಮಾತುಗಳಂತೂ ಅಲ್ಲಿ ಸೂರೆ

ಯಾಗಿ ಹೋಗಿವೆ. 'ಹೋದಮಾರಿಯ ಕರೆದು ಮನೆಯೊಳಗಾದರಿಸಿದವ ರುಂಟೆ', 'ಕೈದು ಮುರಿದರೆ ಹಗೆಗೆ ತನ್ನಯ ಕೈದುಕೊಟ್ಟವರುಂಟೆ', 'ಹಾವು ಹಲಬರ ನಡುವೆ ಸಾಯದು, 'ತಾಯಿಯಿಕ್ಕಿದ ನಿರುತ ತವುಡೇ ಪಥ್ಯ ಧರೆಯೊಳಗೆ', 'ಕೆಲಬರು ಗಳಿಸಿದರೆ, ಕೆಲರುಂಡು ಜಾರುವರು', 'ಕೋಡ ಗದ ಮೊಗಸಿರಿಗೆ ಕಾವಲಿಯೋಡು ಕನ್ನಡಿಯಾಯ್ತು' ಇಂಥ ಗಾದೆಗಳ ಕೋಶವೇ ಅಲ್ಲಿ ಕೆದರಿಹೋಗಿದೆ. ಕನ್ನಡ ಭಾಷೆಯ ಬೈಗುಳ ಸಾಮರ್ಥ್ಯ ವನ್ನು ನೋಡಬೇಕೆಂದರೆ ಗದುಗಿನ ಭಾರತದ ಯುದ್ಧ ಪರ್ವಗಳೇ ನಮಗೆ ಆಕರಗಳು. ಸಂಸ್ಕೃತದ ನುಡಿಗಟ್ಟನ್ನು ಅವನು ಕನ್ನಡಿಸಿರುವ ರೀತಿಯಂತೂ ಅನ್ಯಾದೃಶವಾದುದು. 'ಕೋಲಗುರು', 'ಕರೆ ಹೊಂಗೊಡನ', 'ಕೊರಳು ಹಲವಾದಸುರ', 'ಹೆಂಗಳ್ಳ ವಿದ್ಯೆ' ಇತ್ಯಾದಿಗಳು ಅಲ್ಲಿ ಹೇರಳವಾಗಿ ಸಿಗುತ್ತವೆ.

ಭಾಮಿನಿ ಷಟ್ಪದಿಯ ಅತ್ಯುನ್ನತ ಶಿಖರ ಕುಮಾರವ್ಯಾಸ. "ಕವಿಯು ಹೇಗೋ ಅವನ ಶೈಲಿಯೂ ಹಾಗೆ. ಅವನ ಷಟ್ಪದಿಯನ್ನು ಓದಿದರೆ ತಣ್ಣ ಗಾದ ರಕ್ತವು ಬಿಸಿಯಾಗುವುದು; ದುರ್ಬಲ ಹೃದಯವು ಬಲಿಷ್ಠವಾಗುವುದು; ಕುಗ್ಗಿದ ಚೇತನವು ಎದ್ದುನಿಲ್ಲುವುದು; ಮಿಥ್ಯೆಯೆಂದು ತೋರುವ ಪ್ರಪಂಚವು ಸತ್ಯವಾಗುವುದು. ಇದೇ ನಾರಣಪ್ಪನ ಶೈಲಿಯ ಅಗ್ಗಳಿಕೆ."[8] ಈ ಮಾತುಗಳು ಮೇಲುನೋಟಕ್ಕೆ ಭಾವುಕವೆಂಬಂತೆ ಕಂಡರೂ ಕಾವ್ಯದಲ್ಲಿ ತನ್ಮಯವಾದ ಬುದ್ಧಿಗೆ ಅಲ್ಲಿ ಗೋಚರಿಸುವುದು ಕೇವಲ ಸತ್ಯವಷ್ಟೆ.

**ಅಡಿ ಟಿಪ್ಪಣಿಗಳು**

1. ವಿ. ಸೀತಾರಾಮಯ್ಯ, ಕುಮಾರವ್ಯಾಸ ಪ್ರಶಸ್ತಿ, ಪು. 165
2. ಅದೇ ಪು. 183
3. ಕುವೆಂಪು, ಕುಮಾರವ್ಯಾಸ ಪ್ರಶಸ್ತಿ, ಪು. 207
4. ಅದೇ ಪು. 227
5. ಎಸ್. ವಿ. ರಂಗಣ್ಣ, ಕುಮಾರವ್ಯಾಸ, ಪು. 73
6. ,, ಕುಮಾರವ್ಯಾಸ ಪ್ರಶಸ್ತಿ, ಪು. 330
7. ,, ಕುಮಾರವ್ಯಾಸ (ಐ.ಬಿ.ಎಚ್.), ಪು. 123
8. ,, ಕುಮಾರವ್ಯಾಸ ಪ್ರಶಸ್ತಿ, ಪು. 347

## ಚಾಮರಸ

ಕುಮಾರವ್ಯಾಸನ ಕಾಲದಲ್ಲಿಯೇ ಜೀವಿಸಿದ್ದ ಚಾಮರಸ ಕನ್ನಡದ ಮಹಾಕವಿಗಳಲ್ಲೊಬ್ಬ. ಬೇರೆ ಬೇರೆ ಧರ್ಮಕ್ಕೆ ಸೇರಿದ ಇಬ್ಬರು ಶ್ರೇಷ್ಠ ಕವಿಗಳು ಒಂದೇ ಕಾಲದಲ್ಲಿ ಬದುಕಿದ್ದರೆ ಅವರವರ ಅಭಿಮಾನಿಗಳು ಕಟ್ಟುವ ದಂತಕತೆಗಳಿಗೆ ಲೆಕ್ಕವಿಲ್ಲ. ಪರಸ್ಪರ ಸಂಬಂಧ ಹೇಗಿತ್ತೋ ಏನಿತ್ತೋ ತಿಳಿಯದು, ಆದರೆ ದಂತಕತೆಗಳು ಮಾತ್ರ ಕುಮಾರವ್ಯಾಸ ಚಾಮರಸರನ್ನು ಜಿದ್ದಾಜಿದ್ದಿನ ಸ್ಪರ್ಧಿಗಳನ್ನಾಗಿಸಿವೆ. ಒಂದು ದಂತಕತೆಯ ಪ್ರಕಾರ ಕುಮಾರ ವ್ಯಾಸ ಚಾಮರಸನ ತಂಗಿಯ ಗಂಡ; ಭಾವಮೈದುನ. ಗದುಗಿನ ದೊರೆ ಯಾದ ದೇವರಾಯನ ಅಪ್ಪಣೆಯಂತೆ ಇಬ್ಬರೂ ಮಹಾಭಾರತದ ಮೊದಲ ಹತ್ತು ಪರ್ವಗಳನ್ನು ಬರೆದರಂತೆ; ತಲಾ ಐದೈದು ಪರ್ವಗಳನ್ನು ಹಂಚಿ ಕೊಂಡು. ಪಂಡಿತರೆಲ್ಲ ಒಮ್ಮತದಿಂದ ಚಾಮರಸನ ಕೃತಿ ಶ್ರೇಷ್ಠವೆಂದರು. ಕುಮಾರವ್ಯಾಸ ಅಪಮಾನವನ್ನು ತಾಳಲಾರದೆ ಹೆಂಡತಿಯ ಮರೆಹೊಕ್ಕ. ಆಕೆ ಅಣ್ಣನ ಕೃತಿಯನ್ನು ಸುಟ್ಟು ಭಸ್ಮಮಾಡಿ ಗಂಡನಿಗೆ ರಕ್ಷೆಯಾದಳು. ಇದರಿಂದ ವೈರಾಗ್ಯಹೊಂದಿದ ಚಾಮರಸ ವೀರಶೈವ ದೀಕ್ಷೆ ಪಡೆದ. ಪ್ರಭು ಲಿಂಗಲೀಲೆ ಬರೆದು ರಾಜಮನ್ನಣೆ ಹೊಂದಿದ. ಆನೆಯ ಮೇಲಿಟ್ಟು ಈ ಕೃತಿಯನ್ನು ಮೆರೆಸಲಾಯಿತು. ಹೀಗೆ ಗೌರವಿಸಿದ ರಾಜನು ವಿಜಯನಗರದ ಅರಸು ಪ್ರೌಢದೇವರಾಯನೆಂದು ಒಂದು ಮೂಲ ಹೇಳುತ್ತದೆ.

ಈ ವಿವಾದಗಳೇನೇ ಇದ್ದರೂ ಚಾಮರಸ ಕುಮಾರವ್ಯಾಸರಿಗೆ ಸಮಾನ ವಾದ ಒಂದು ಅಂಶವಿದೆ. ಇಬ್ಬರೂ ತಮ್ಮ ಕಾವ್ಯಗಳಲ್ಲಿ ಸ್ವವಿಷಯವನ್ನು ಹೇಳಿಕೊಂಡಿಲ್ಲ. ಹೀಗಾಗಿ ಕುಮಾರವ್ಯಾಸನಂತೆಯೇ ಚಾಮರಸನ ಹೆಸರೂ ಸಹ ಅನುಮಾನಕ್ಕೆ ಆಸ್ಪದ ಕೊಟ್ಟಿದೆ. ಬೇರೆ ಬೇರೆ ಮೂಲಗಳಿಂದ ದೊರೆ ಯುವ ಸಂಗತಿಗಳನ್ನೆಲ್ಲಾ ಕ್ರೋಢೀಕರಿಸಿ ಚಾಮರಸನ ಜೀವನ, ಕಾಲ ಮತ್ತು ದೇಶಗಳನ್ನು ಕಂಡುಹಿಡಿದಿದ್ದಾರೆ.

ಚಾಮರಸನ ತಂದೆತಾಯಿಗಳ ಹೆಸರು ಗೊತ್ತಿಲ್ಲ. ನಾಗಣಾಪುರ ಅಥವಾ ಗದುಗು ಈತನ ಊರು. ಗದುಗಿನಲ್ಲಿ ಬಹುಕಾಲ ಆತ ವಾಸಿಸುತ್ತಿದ್ದ. ವಿಜಯನಗರದ ಅರಸು ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರೊಡನೆ ಈತನ ಹೆಸರು ಬರುವುದರಿಂದ ಆ ಕಾಲದಲ್ಲಿ ಜೀವಿಸಿದ್ದನೆಂದು ಸ್ಪಷ್ಟವಾಗಿ ಹೇಳಬಹುದು. ಆದುದರಿಂದ ಈತನ ಕಾಲವನ್ನು ಕ್ರಿ. ಶ. 1430 ಎಂಬುದಾಗಿ ಒಪ್ಪಿದ್ದಾರೆ.

ಪ್ರೌಢದೇವರಾಯನು ಚಾಮರಸನ ಅಭಿಮಾನಿ. ಚಾಮರಸನು ಜನ್ಮತಃ ವೀರಶೈವನಾಗಿರದೆ, ದೊಡ್ಡವನಾದ ಮೇಲೆ ವೀರಶೈವ ದೀಕ್ಷೆ ಪಡೆದಿರಬೇಕೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. 'ಅನ್ಯಮತ ಕೋಲಾಹಲ', 'ವೀರಶೈವಾಚಾರ ಮಾರ್ಗ ಸಾರೋದ್ಧಾರ' ಮುಂತಾಗಿ ಮುಂದಿನ ವೀರಶೈವ ಕವಿಗಳೇನೋ ಹೊಗಳಿದ್ದಾರೆ. ಚಾಮರಸನು ಲೌಕಿಕವಾಗಿ ಉನ್ನತ ಸ್ಥಾನಮಾನಗಳನ್ನು ಹೊಂದಿದ್ದನೆಂದು ಕೆಲವು ಪುರಾಣಗಳ ಹೇಳಿಕೆ. ಆದರೆ ಅವನ ಕಾವ್ಯವನ್ನೇ ಮೂಲಮಾಪನವನ್ನಾಗಿಟ್ಟುಕೊಂಡು ಪರೀಕ್ಷಿಸಿದರೆ ಆತನ ಪ್ರವೃತ್ತಿ ವೈರಾಗ್ಯಶೀಲವಾದುದೆಂಬುದು ಸ್ಪಷ್ಟವಾಗುತ್ತದೆ. ಯಾವ ರಾಜಾಶ್ರಯಕ್ಕೂ ಹೊಂದಿಕೊಳ್ಳುವ ವ್ಯಕ್ತಿತ್ವ ಅವನದಲ್ಲ.

'ಪ್ರಭುಲಿಂಗಲೀಲೆ' ಕನ್ನಡದ ಮಹಾಕಾವ್ಯಗಳಲ್ಲೊಂದು. ವೀರಶೈವರಿಗಂತೂ ಪೂಜನೀಯ ಗ್ರಂಥ. ಬೇರೆಯವರಿಗೂ ಪ್ರಿಯವಾದ ಕೃತಿ. ತೆಲುಗು, ತಮಿಳು, ಮರಾಠಿ ಮತ್ತು ಸಂಸ್ಕೃತಗಳಿಗೆ ಈ ಕಾವ್ಯವು ಬಹುಕಾಲದ ಹಿಂದೆಯೇ ಭಾಷಾಂತರವಾಗಿದೆ. ಇಷ್ಟೊಂದು ಭಾಷೆಗಳಿಗೆ ಶತಮಾನಗಳ ಹಿಂದೆಯೇ ಭಾಷಾಂತರಗೊಂಡ ಕೃತಿ ಕನ್ನಡದಲ್ಲಿ ಇದೊಂದೆ ಎಂದು ಹೇಳಬಹುದು.

'ಪ್ರಭುಲಿಂಗಲೀಲೆ'ಯ ನಾಯಕನಾದ ಅಲ್ಲಮಪ್ರಭು ಕನ್ನಡನಾಡಿನ ಮಹಾಸಂತರಲ್ಲೊಬ್ಬ. ವೀರಶೈವ ಧರ್ಮ ಪ್ರತಿಪಾದಕರಲ್ಲಿ ಅಗ್ರಗಣ್ಯ. ಹನ್ನೆರಡನೆಯ ಶತಮಾನದ ವೀರಶೈವ ಕ್ರಾಂತಿಯ ಮುಂಚೂಣಿಯಲ್ಲಿದ್ದವನು. ಶೂನ್ಯಸಿಂಹಾಸನದ ಅಧಿಪತಿ. ಬಸವಣ್ಣನಿಂದ ಮೊದಲುಗೊಂಡು ಮುಕ್ತಾಯಕ್ಕನವರೆಗೆ ಆ ಕಾಲದ ಎಲ್ಲ ಶರಣ ಶರಣೆಯರಿಗೆ ಮಾರ್ಗದರ್ಶಕ, ಗುರು ಮತ್ತು ಪಿತೃಸ್ಥಾನದಲ್ಲಿದ್ದ ಹಿರಿಯ ವ್ಯಕ್ತಿ. ವೀರಶೈವ ಧರ್ಮ ಮತ್ತು ವಚನ ಸಾಹಿತ್ಯಕ್ಕೆ ರಾಜಕೀಯ ಸಾಮಾಜಿಕ ಹಿನ್ನೆಲೆಯನ್ನು ಕಲ್ಪಿಸಿ

ಕೊಟ್ಟವನು ಬಸವಣ್ಣನಾದರೆ ಅನುಭಾವ ಮತ್ತು ತಾತ್ವಿಕ ಬೆನ್ನೆಲುಬಾದವನು ಪ್ರಭುದೇವ. ಆತನ ಹೆಸರೇ ವಿಚಿತ್ರವಾಗಿದೆ ; ಆತನ ಬದುಕು ಒಬ್ಬೊಬ್ಬ ಕವಿಗೆ ಒಂದೊಂದು ರೀತಿಯಲ್ಲಿ ಗೋಚರಿಸಿದೆ ; ಆತನ ವಚನಗಳು ರಹಸ್ಯ ರಮ್ಯವಾಗಿವೆ. "ಎಲ್ಲಿಯೋ ಹುಟ್ಟಿ ಕಾಡಿನಲ್ಲಿ ಕಣಿವೆಗಳಲ್ಲಿ ಮೊರೆದು, ಅನಂತರ ಬಯಲು ಪ್ರದೇಶದಲ್ಲಿ ಶಾಂತವಾಗಿ ಹರಿದು ಅನೇಕ ತೀರ್ಥಗಳನ್ನು ಕಲ್ಪಿಸಿ ಜೀವಜಂತುಗಳನ್ನು ಗದ್ದೆಗಳನ್ನು ತಣಿಸಿ, ಬಳಿಕ ಸಾಗರದಲ್ಲಿ ಲೀನಗೊಳ್ಳುವ ನದಿಯಂತೆ ಅಲ್ಲಮನ ಬಾಳು."[1] ಚಾಮರಸನ 'ಪ್ರಭುಲಿಂಗಲೀಲೆ' ಇಂಥ ಒಂದು ಬದುಕನ್ನು ಚಿತ್ರಿಸುವ ಕಾವ್ಯವೆಂದರೆ ಕವಿಯ ಹೊಣೆಗಾರಿಕೆ ಏನೆಂಬುದು ಗೊತ್ತಾದೀತು. ಅದನ್ನು ಚಾಮರಸನು ಹೇಗೆ ನಿರ್ವಹಿಸಿದ್ದಾನೆಂಬುದನ್ನು ಪರಿಶೀಲಿಸುವುದಕ್ಕಿಂತ ಮುಂಚೆ ಕಾವ್ಯವಸ್ತುವನ್ನು ಕುರಿತು ಕೆಲವು ಸಂಗತಿಗಳನ್ನು ಪರಿಚಯಮಾಡಿಕೊಳ್ಳಬಹುದು.

"ಪ್ರಭುದೇವರ ಕಥಾ ಸಂಪ್ರದಾಯದಲ್ಲಿ ಮೂರು ಪ್ರಕಾರಗಳಿವೆ : ಮೊದಲನೆಯದು ಹರಿಹರನಿಂದ, ಎರಡನೆಯದು ಸಿಂಗಿರಾಜನಿಂದ, ಮೂರನೆಯದು ಚಾಮರಸನಿಂದ ಪ್ರವರ್ತಿತ. ಕೊನೆಯದು ಪಾಲ್ಕುರಿಕೆ ಸೋಮನಾಥನಲ್ಲೇ ಪ್ರಚ್ಛನ್ನವಾಗಿತ್ತು. ಅದನ್ನು ಸ್ಫುಟಗೊಳಿಸಿದವನು ಚಾಮರಸ ಎನ್ನಲೂಬಹುದು. ಹರಿಹರನ ಮತ್ತು ಸಿಂಗಿರಾಜನ ಸಂಪ್ರದಾಯಗಳನ್ನು ಮೇಳನಗೊಳಿಸಿ ಬಳಸಿದವರು ಶಿವಗಣಪ್ರಸಾದಿ ಮತ್ತು ಹಲಗೆಯ ದೇವ; ಚಾಮರಸನದನ್ನು ಬಳಸಿದವರು ಗುಮ್ಮಳಾಪುರದ ಸಿದ್ಧಲಿಂಗ ಮತ್ತು ಗೂಳೂರು ಸಿದ್ಧವೀರರು. ಅಂತೆಯೇ ಚಾಮರಸನ ಪ್ರಭುಲಿಂಗಲೀಲೆಯೂ ಶಿವಗಣ ಪ್ರಸಾದಿ ಮಹಾದೇವಯ್ಯ (ಮತ್ತು ಹಲಗೆಯದೇವ) ನ ವಿಚಾರ ಧಾರೆಯಿಂದ ಪ್ರಭಾವಿತವಾಗಿದೆಯೆಂಬುದೂ ಅಷ್ಟೇ ಸತ್ಯ."[2]

ಪ್ರಭುಲಿಂಗ ಲೀಲೆಯ ಕಥಾವಸ್ತುವಿನ ಮೂಲಚೂಲಗಳನ್ನು ಮೇಲಿನ ಹೇಳಿಕೆ ಸ್ಪಷ್ಟವಾಗಿ ಸಂಗ್ರಹವಾಗಿ ವಿವರಿಸಿದೆ. ಪ್ರಕೃತಕ್ಕೆ ಹೆಚ್ಚಿನ ವಿವರಗಳ ಅಗತ್ಯವಿಲ್ಲ. ಆದರೂ ಹರಿಹರನ ಕಥಾಸಂಪ್ರದಾಯವೊಂದನ್ನು ಮಾತ್ರ ಸ್ಥೂಲವಾಗಿ ಪರಿಚಯ ಮಾಡಿಕೊಳ್ಳಬಹುದು. ಏಕೆಂದರೆ ಹರಿಹರನು ಮಾತ್ರ ಮೊದಲ ಬಾರಿಗೆ ಕನ್ನಡದಲ್ಲಿ ಶಿವಶರಣರ ಚರಿತೆಗಳನ್ನು ಬರೆದವನು. ಬಸವ, ಅಲ್ಲಮ, ಮಹಾದೇವಿ ಮುಂತಾದ ಹರಿಹರನ ಕಥಾನಾಯಕರು ಮತ್ತು ರಾಘವಾಂಕನ ಸಿದ್ಧರಾಮ-ಇವರೆಲ್ಲ ಕೈಲಾಸದಿಂದ ಭೂಮಿಗೆ ಶಿವನ ಶಾಪದಿಂದ

ಅವತರಿಸಿದವರು. ಅಲ್ಲಿ ಮಾಡಿದ ಯಾವುದೋ ಒಂದು ತಪ್ಪಿಗೆ ಪ್ರಾಯಶ್ಚಿತ್ತವಾಗಿ ಭೂಮಿಯಲ್ಲವತರಿಸಿ ಇಲ್ಲಿನ ತಮ್ಮ ಬದುಕಿನಿಂದ ಶಿವನನ್ನು ಮೆಚ್ಚಿಸಿ ಮತ್ತೆ ಕೈಲಾಸಕ್ಕೆ ಶಿವನ ಅನುಗ್ರಹದಿಂದ ಹಿಂದಿರುಗಿದವರು.

ಹರಿಹರನ 'ಪ್ರಭುದೇವರ ರಗಳೆ' ಯಲ್ಲಿ ಚಿತ್ರಿತವಾಗಿರುವ ಅಲ್ಲಮ ಸ್ವಯಂಸಿದ್ಧನಲ್ಲ ; ಸಾಕ್ಷಾತ್ ಪರಮೇಶ್ವರನ ಅವತಾರಿಯಲ್ಲ. ಶಿವನ ಗಣದಲ್ಲಿದ್ದ ನಿರ್ಮಾಯನೆಂಬುವನು ಸುರಸತಿಯೊಬ್ಬಳನ್ನು ಆಸೆಯಿಂದ ನೋಡಲು, ಶಿವನ ಅಪ್ಪಣೆಯಂತೆ ಭೂಮಿಯಲ್ಲಿ ಹುಟ್ಟಿದವನು. ಬಳ್ಳಿಗಾವೆಯ ನಾಗವಾಸಾಧಿಪತಿಯ ಮಗನಾಗಿ ನಿರ್ಮಾಯ ಅಲ್ಲಮನೆಂಬ ಹೆಸರಿನಿಂದ ಹುಟ್ಟಿದರೆ ಆತನು ಒಲಿದಿದ್ದ ಸುರಕಾಂತೆಯೂ ಆ ಪುರದ ಧನದತ್ತನ ಮಗಳಾಗಿ ಕಾಮಲತೆಯೆಂಬ ಹೆಸರಿನಿಂದ ಹುಟ್ಟಿದಳು. ಪ್ರಾಪ್ತವಯಸ್ಕರಾದ ಮೇಲೆ ಇಬ್ಬರೂ ಒಂದುದಿನ ಅಕಸ್ಮಾತ್ತಾಗಿ ಆ ಊರಿನ ಗೊಗ್ಗೇಶ್ವರಾಲಯದಲ್ಲಿ ಸಂಧಿಸುವರು. ಹಿಂದಿನ ಜನ್ಮದ ನಂಟು ವಿಧಿ ಲಿಖಿತವೆರಡೂ ಸೇರಿ ಇಬ್ಬರೂ ಪ್ರಥಮ ನೋಟದಲ್ಲಿಯೇ ಒಂದಾಗಿ, ಉದ್ವೇಗದಿಂದ ಮೂರ್ಛೆಗೊಳ್ಳುವರು. ಮುಂದೆ ಅವರಿಬ್ಬರ ಹಿತೈಷಿಗಳೂ ಅವರನ್ನು ಪರಸ್ಪರ ಒಂದು ಗೂಡಿಸುವರು. ಹಲವು ಕಾಲ ಸುಖಿವಾಗಿರಿಸುವರು. ಇತ್ತ ಶಿವನ ಅಪ್ಪಣೆಯಂತೆ ಕಾಮಲತೆ ಜ್ವರಗ್ರಸ್ತಳಾಗಿ ಸತ್ತು ಹೋಗುತ್ತಾಳೆ. ಆಕೆಯ ವಿರಹದಿಂದ ಪರಿತಾಪಪಟ್ಟು ನೊಂದು ಬೆಂದ ಅಲ್ಲಮ ಒಂದು ದಿನ ಇದ್ದಕ್ಕಿದ್ದಂತೆ ನಡೆದ ಪವಾಡ ಸದೃಶ ಘಟನೆಯಿಂದ ಮಾರ್ಪಟ್ಟು ಮಹಾ ವೈರಾಗ್ಯದ ಹೊಸ ಹುಟ್ಟು ಪಡೆದ.

ಅಕ್ಕಮಹಾದೇವಿಯೂ ಸಹ ಹರಿಹರನ ನಿರೂಪಣೆಯಂತೆ ಶಾಪದಿಂದ ಅವತರಿಸಿದ ರುದ್ರ ಕನ್ನಿಕೆ. ಪ್ರಾಪ್ತ ವಯಸ್ಕಳಾದ ಮೇಲೆ ಭವಿಯಾದ ಕೌಶಿಕನನ್ನು ಮದುವೆಯಾಗಿ ಕೆಲಕಾಲ ಅವನೊಡನಿದ್ದು ಅನಂತರ ತ್ಯಜಿಸುತ್ತಾಳೆ.

ಹೀಗೆ, ಶರಣರು ಶಾಪದಿಂದ ಅವತರಿಸಿದವರು ಎನ್ನುವ ವಿಚಾರ ಅಲ್ಲಮ ಪ್ರಭುವಿನಂತಹ ಮಹಾಪುರುಷ ಕೇವಲ ಹೆಣ್ಣೊಬ್ಬಳ ಕಾಮಕ್ಕೆ ಸಿಲುಕಿದನೆಂಬ ಅಂಶ, ಅಕ್ಕಮಹಾದೇವಿ ಭವಿಯನ್ನು ಮದುವೆಯಾಗಿ ಅವನೊಡನೆ ಕೆಲಕಾಲ ಬಾಳಿದಳೆಂಬ ಸಂಗತಿ ಮುಂದೆ ಬಂದ ವೀರಶೈವರಿಗೆ ರುಚಿಸಲಿಲ್ಲ. ಹರಿಹರನಿಂದ ಚಾಮರಸನವರೆಗೆ ಸುಪ್ತವಾಗಿ ಹೊಗೆಯಾಡುತ್ತಿದ್ದ ಪ್ರತಿಭಟನೆಗೆ ಪ್ರಭುಲಿಂಗ ಲೀಲೆಯಲ್ಲಿ ಸ್ಪಷ್ಟ ರೂಪು ದೊರೆಯಿತು. ಚಾಮರಸನ ಕಾಲದಲ್ಲಿಯೇ ಅನ್ಯ

ಮತೀಯರು ಪ್ರಭುದೇವ-ಕಾಮಲತೆಯರ ಪ್ರಸಂಗವನ್ನು ಅಪಹಾಸ್ಯ ಮಾಡಿ ದಂತೆಯೂ ಇದನ್ನು ಹೋಗಲಾಡಿಸುವ ಸಲುವಾಗಿಯೇ ಪ್ರಭುಲಿಂಗ ಲೀಲೆ ಯನ್ನು ಆತ ಬರೆದನೆಂದೂ ಪ್ರೌಢರಾಯನ ಕಾವ್ಯದಲ್ಲಿ ಹೇಳಲಾಗಿದೆ.

ಈ ಎಲ್ಲ ವಾದವಿವಾದಗಳ ಐತಿಹಾಸಿಕ ಸತ್ಯಾಸತ್ಯತೆಯ ವಿವೇಚನೆ ಇಲ್ಲಿ ಅನಗತ್ಯ. ಆದರೆ ಶಿವಶರಣರೆಲ್ಲರ ಅವತಾರಕ್ಕ ಕಾರಣ, ಕಾಮಲತಾ ಪ್ರಸಂಗ, ಮಹಾದೇವಿ - ಕೌಶಿಕರ ವಿವಾಹ ಮುಂತಾದ ಎಲ್ಲ ಸಂಗತಿಗಳನ್ನೂ ಒಗ್ಗೂಡಿಸಿ ಒಂದೇ ಕಥಾಚೌಕಟ್ಟಿಗೆ ಅಳವಡಿಸಿ, ಹರಿಹರ ಕಥಾಸಂಪ್ರದಾಯದ ಊನ(?) ಗಳನ್ನು ಸರಿಪಡಿಸಿ ಸಾಂಕೇತಿಕ ಮಹಾಕಾವ್ಯವೊಂದನ್ನು ರಚಿಸಿದ ಚಾಮರಸನ ಪ್ರತಿಭೆಯನ್ನು ಕೊಂಡಾಡದಿರುವಂತಿಲ್ಲ. ಪ್ರಭು ದೇವರನ್ನು ಕೇಂದ್ರದಲ್ಲಿರಿಸಿಕೊಂಡು ಬೇರೆಬೇರೆ ಪ್ರಸಂಗಗಳನ್ನು ಕಲ್ಪಿಸಿ ಕೊಳ್ಳುವ ಈ ಕಥಾರಚನೆಗೆ ಶಿವಗಣ ಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆ ಪ್ರೇರಣೆ ಕೊಟ್ಟಿರಬಹುದು. ಅದರಂತೆ ಚಾಮರಸನಿಗಿಂತ ಹಿಂದ ಬಂದಿದ್ದ ಇತರ ವೀರಶೈವ ಕಾವ್ಯ ಪುರಾಣಗಳೂ ಪ್ರಭಾವವನ್ನು ಬೀರಿವೆ. "ಹರಿಹರನಂತೆಯೇ ಮೊದಲ ಶೂನ್ಯಸಂಪಾದನೆಯಂತೆಯೇ ಚಾಮರಸನೂ ತನ್ನ ಕಥೆಯನ್ನು ಕೈಲಾಸದಿಂದ ಆರಂಭಿಸಿದರೂ ಇವನ ಕಥಾಸರಣಿ ಭಿನ್ನ ವಾಗಿದೆ"[3]. ಇಷ್ಟು ಸ್ಥೂಲ ಹಿನ್ನೆಲೆಯೊಂದಿಗೆ ಪ್ರಭುಲಿಂಗಲೀಲೆಯ ಕಾವ್ಯ ಪರಿಚಯಕ್ಕೆ ಮುಂದುವರಿಯಬಹುದು.

2

ಕೈಲಾಸದಲ್ಲಿ ಒಮ್ಮೆ ಶಿವ ಪಾರ್ವತಿಯರು ತಮ್ಮ ಪರಿವಾರ ಸಹಿತವಾಗಿ ಒಡ್ಡೋಲಗದಲ್ಲಿರಲು, ಪಾರ್ವತಿ ತನ್ನ ಪತಿಯನ್ನು ಕುರಿತು ಒಂದು ಪ್ರಶ್ನೆ ಕೇಳಿದಳು : 'ಶಿವನೆ ನಿನ್ನ ಒಡ್ಡೋಲಗದಲ್ಲಿರುವ ಘನಮಹಿಮರೆಲ್ಲರೂ ಭವಕೆ ಬಾರದೆ ನಿತ್ಯ ಸುಖದಿಂದಿರುವರೋ ಅಥವಾ ಇವರಿಗೂ ನೆಲೆಯಿಲ್ಲವೊ?' ಆಗ ಶಿವನು ನಾಮ ರೂಪಕ್ರಿಯೆಗಳನ್ನು ಗೆಲ್ಲ ಬಲ್ಲವರಿಗೆ ಮಾತ್ರ ನಿತ್ಯ ಸುಖ ವೆಂದೂ ಉಳಿದವರು ಭೂಮಿಯಲ್ಲಿ ಜನಿಸಿ ಸಾಧನೆಮಾಡಿ ಸತ್ಯವನ್ನರಿಯ ಬೇಕು ಎಂದು ತಿಳಿಸಿದನು. ಇದನ್ನು ಭೂಮಿಯಲ್ಲಿ ಬೋಧಿಸುವವರು ಯಾರು? ಎಂದು ಪ್ರಶ್ನಿಸಿದಾಗ ಅಲ್ಲಮಪ್ರಭುವಿನ ಹೆಸರನ್ನು ಸೂಚಿಸಿದ. ಪಾರ್ವತಿ ಅಲ್ಲಮನನ್ನು ಬಹು ಸುಲಭನೆಂದಳು. ಆಗ ಶಂಕರನು ಆತ ಅನುಪಮನೆಂದೂ

ಅಸಾಧ್ಯನೆಂದೂ ಹೇಳಿ ತನ್ನ ಅಂಶದಿಂದಲೇ ಜನಿಸಿದನೆಂಬ ಸಂಗತಿಯನ್ನು ತಿಳಿಸಿದ. ಆದರೆ ಪಾರ್ವತಿ ಮಾತ್ರ ಹಠತೊಟ್ಟು ಅಲ್ಲಮನನ್ನು ವಶಪಡಿಸಿ ಕೊಂಡು ಬರಲು ತನ್ನ ತಾಮಸಕಳೆಗೆ ಅಪ್ಪಣೆ ಕೊಟ್ಟು ಭೂಮಿಗೆ ಕಳುಹಿಸಿದಳು.

ಪಾರ್ವತಿಯ ತಾಮಸಕಳೆಯಾದ ಮಾಯೆಯು ಬೆಳುವಲ ದೇಶದ ಬನವಸೆಯೆಂಬ ಪಟ್ಟಣದ ಅರಸನಾದ ಮಮಕಾರ ಮತ್ತು ಆತನ ಮಡದಿ ಯಾದ ಮೋಹಿನಿದೇವಿಯರಿಗೆ ಮಗಳಾಗಿ ಹುಟ್ಟಿದಳು. ಆಕೆ ಹುಟ್ಟಿದೊಡ ನೆಯೇ ಲೋಕದಲ್ಲಿ ಋಷಿಮುನಿಗಳೇ ಮುಂತಾದ ಸಂಯಮಿಗಳ ಮನಸ್ಸು ಪಲ್ಲಟವಾಯಿತಂತೆ. ಬಾಲ್ಯಾವಸ್ಥೆ ದಾಟಿ ಯೌವ್ವನಕ್ಕೆಕಾಲಿರಿಸಿದ ಮಗಳಾಗಿದ್ದ ಮಾಯೆಗೆ ಅನುರೂಪ ವರನನ್ನು ತಂದೆ ಯೋಚಿಸುತ್ತಿರುವಾಗಲೇ ಕುಲ ಗುರುವಾದ ಅಹಂಕಾರಾರ್ಯನ ಆಗಮನವಾಯಿತು. ಹುಡುಗಿಯನ್ನು ನೋಡಿದೊಡನೆಯೇ ಈಕೆ 'ಕಾರಣ ಕನ್ಯೆ'ಯೆಂದು ಗುರು ನಿಶ್ಚಯಿಸಿದರು. 'ಸದಾ ಶಿವಂಗೀಲಲನೆಯಲ್ಲದೆ ನರರಿಗುಚಿತವೆ ಭೂಪ' ಎಂದು ಪ್ರಶ್ನಿಸಿದರು. ಆದರೆ ಶಿವನು ಭೂಲೋಕದ ಹೆಣ್ಣುಗಳಿಗೆ ಪತಿಯಾಗುವುದುಂಟೆ ?. ಆದರೆ ಭಕ್ತಿಗೆ ಶಿವನು ಒಲಿಯುತ್ತಾನೆ, ಎಂದು ಹೇಳಿದ ಅಹಂಕಾರಾರ್ಯನು ಅವಳಿಗೆ ಮಂತ್ರೋಪದೇಶಮಾಡಿ ಶಿಷ್ಯನನ್ನು ಬೀಳ್ಕೊಟ್ಟು ಹೋಗುತ್ತಾನೆ. ಮಾಯಾದೇವಿಯೂ ಮಧುಕೇಶ್ವರನನ್ನು ಬೇಡಿ ಭಕ್ತಿಯಿಂದ ಅರ್ಚಿಸುತ್ತಾಳೆ. ಕಾಮ ಪ್ರೇಮ ಭಕ್ತಿಯನ್ನು ಮಾಡಿದ ಕಾರಣ, ಅವಳ ಇಷ್ಟವನ್ನು ಈಡೇರಿಸುವ ಸಲುವಾಗಿ ಅಲ್ಲಮಪ್ರಭು ಅಭಿನವ ಕಾಮ ರೂಪವನ್ನು ಧರಿಸಿ ಬರುತ್ತಾನೆ.

ಕಂಗಳಲಿ ನೆರೆ ನೋಡಿದಡೆ ಹೆರ
ಹಿಂಗಬಾರದ ಚೆಲುವ ಮುಖದ ಸು
ರಂಗು ಸೂಸುವ ದಂತ ಪಂಕ್ತಿಯ ತೊಳಪ ಕಣ್ಣುಗಳ
ಅಂಗವಟ್ಟದ ಸರಳಿಕೆಯ ಹ
ಸ್ತಂಗಳಂಘ್ರಿಯ ಕೋಮಳದ ಸ
ರ್ವಾಂಗ ಭಂಗಿಯ ಸೌಮ್ಯತೆಯ ಧರಿಸಿದನು ಪ್ರಭುರಾಯ
ತುರುಬು ಚಿಮ್ಮುರಿ ಚೆಂದಿಕಾಸೆಯ
ಸೆರಗು ನಸುಹೊದೆದೊಲ್ಲಿ ಮಿಂಚುವ
ಮಿರುಪ ಸುಲಿಪಲ್ಲಸಿಯ ಸೆಳ್ಳುಗುರುವಿನ ಹೊಂದೊಡರು

ಉರುವ ಗಂಧದ ಲೇಪ ಬೆನ್ನೊಳು
ಮೆರೆವ ಮದ್ದಳೆ ಸಹಿತ ಬಂದೀ
ತೆರೆನನಲ್ಲಮ ನಟಿಸ್ಸಿನಿಂದನು ವಿಕೃತ ವೇಷದಲಿ

ಯಾವುದು ಲೌಕಿಕವ್ಯಕ್ತಿಗೆ ಸಹಜವಾದ ಶೃಂಗಾರಪರ ವೇಷವಾಗಬಹುದಿತ್ತೋ ಅದು ಅಲ್ಲಮನಿಗೆ ವಿಕೃತವೇಷವಾಗಿದೆ. ಆತ ಮಧುಕೇಶ್ವರನ ಬಾಗಿಲ ಮುಂದೆ ನಿಂತು ಮದ್ದಳೆಯನ್ನು ಬಾರಿಸತೊಡಗಿದರೆ, ಕೇಳಿದವರೆಲ್ಲ ಬೆರಗಾದ ರಂತೆ. ಒಳಗಡೆ ಇದ್ದ ಮಾಯಾದೇವಿ ಇದನ್ನು ಕೇಳಿ ಮನಸೋತಳು :

ಕಾರ ಮುಗಿಲಿನ ಗರ್ಜನೆಯ ಕಿವಿ
ಯೊರೆ ಕೇಳಿದ ಸೋಗೆಯಂತಿರೆ
ಹಾರವಿಸುತಲಿ ಅಲ್ಲಮನ ಮದ್ದಳೆಯ ಧ್ವನಿಗೇಳ್ದು
ನಾರಿ ಮಾಯಾದೇವಿ ನಲುವಿಂತಿ
ದಾರು ಹೊರ ಕಡೆಯಲ್ಲಿ ತೂರ್ಯೋ
ದ್ಭಾರವನು ಮಾಡುವರೆನುತ ಕೇಳಿದಳು ಕೆಳದಿಯರ

ಮುಂಗಾರಿನ ಮುಗಿಲ ಗರ್ಜನೆಯಾದ ಗುಡುಗನ್ನು ಕೇಳಿದೊಡನೆಯೇ ಹೆಣ್ಣು ನವಿಲುಗಳು ಗರಿಬಿಚ್ಚಿ ನರ್ತಿಸಿ ಗಂಡನ್ನು ಪ್ರಣಯಕ್ಕೆ ಆಹ್ವಾನಿಸುತ್ತವೆ: ಮುಂಗಾರು, ನವಿಲುಗಳ ಬೆದೆಕಾಲ. ಮಾಯಾದೇವಿಯೂ ತುಂಬು ಯೌವನ ದಲ್ಲಿದ್ದಾಳೆ. ಅಲ್ಲಮನ ಮದ್ದಳೆಯ ದನಿ ಅವಳ ಸುಪ್ತ ಕಾಮವನ್ನು ಬಡಿದೆಬ್ಬಿಸಿತು. ಅಲ್ಲದೆ, ಆಕೆ ಕಾರಣ ಕನ್ಯೆ ತಾನೇ ? ತನ್ನ ಕೆಳದಿಯರನ್ನು ಕಳಿಸಿ ಅಲ್ಲಮನನ್ನು ಬರಮಾಡಿಕೊಂಡಳು. ಮದ್ದಳೆಯ ದನಿ ಕೇಳಿಯೇ ಮಾರು ಹೋಗಿದ್ದವಳು ಸುಂದರಾಕಾರನಾದ ಮದ್ದಳಿಗನನ್ನು ಕಂಡಮೇಲೆ ಕೇಳಬೇಕೆ ? ಪೂರ್ತಿ ಕರಗಿ ಹೋದಳು. ವಶಪಡಿಸಿಕೊಳ್ಳಲು ಅವತಾರವೆತ್ತಿದ ಹೆಣ್ಣು ತಾನೇ ವಶವಾದಳು. ಆತನ ಪರಿಚಯಕ್ಕೆ ತವಕಿಸಿದಳು. ಭರತ ವಿದ್ಯೆಯನ್ನು ಕಲಿಯುವ ನೆಪ ಹೇಳಿ ಅಲ್ಲಮನನ್ನು ಅರಮನೆಗೆ ಕರೆತಂದು ತಂದೆಗೆ ಪರಿಚಯಮಾಡಿಸಿದಳು. ಅಲ್ಲಮನಂತಹ ಮಹಾತ್ಮ ತಾನಾಗಿಯೇ ಹತ್ತಿರ ಬಂದಿರುವಾಗ ಅವನಿಂದ ನಿತ್ಯಜ್ಞಾನವನ್ನು ಹೊಂದದೆ ಕಾಮದಲ್ಲಿ ಕೋಟಲೆಗೊಳ್ಳುತ್ತಿರುವ ಮಾಯೆಯನ್ನು ಕವಿ ಕನಿಕರಿಸಿದ್ದಾನೆ. ಅವಳ ತವಕ ಸಖಿಯರಿಗೆ ತಿಳಿಯಿತು. ಮದಮಾನಿಯೆಂಬ ಪ್ರೌಢೆಯೊಬ್ಬಳನ್ನು ಅಲ್ಲಮನಲ್ಲಿಗೆ ಒಡತಿಯ ಪರವಾಗಿ ಕಳುಹಿಸಿದರು. ಆಕೆಯಿಂದ ಸಂಗತಿ ಯೆಲ್ಲವನ್ನೂ ತಿಳಿದ ಅಲ್ಲಮನು ತಮ್ಮಿಬ್ಬರ ನಡುವೆ ಇರುವ ಅಂತರವನ್ನು

ಸೂಚಿಸಿ ದೂರದ ಸೇವೆಯೇ ಉಚಿತವೆನ್ನುತ್ತಾನೆ. ಅವನು ಆಡಿದ ಮಾತಿಗೆ ವಿಶೇಷಾರ್ಥವನ್ನು ಕಲ್ಪಿಸಿಕೊಂಡ ಅವಳು ಅಂದಿನ ರಾತ್ರಿ ಯಾರಿಗೂ ತಿಳಿಯದಂತೆ ಅವನನ್ನು ಸೆಜ್ಜೆ ಮನೆಯಲ್ಲಿ ಮಾಯಾದೇವಿಯೊಡನೆ ಕೂಡಿಸುವ ಹಂಚಿಕೆ ಹಾಕಿದಳು; 'ತಮವ ತರಣಿಯ ನೊಂದುಗೂಡುವೆಂಬ ಭಾವ ಭ್ರಮಿತ ಬುದ್ಧಿಯಲಿ'. ವಿದೇಹಿಯಾದ ಆತನನ್ನು ಕೂಡಲು ಬಯಸಿದ ಮಾಯೆಯ ಭ್ರಮೆಗೆ ಕವಿ ಆಶ್ಚರ್ಯಗೊಂಡಿದ್ದಾನೆ:

ಮಳೆಗೆ ನನೆವುದೆ ಗಾಳಿ ಬೀಸಿದ
ಡೊಲೆವುದೇ ಬಲು ನಿಚ್ಚಿನುರಿಯಿಂ
ದಳಿವುದೇ ನಭವಾಪರಿಯ ಬಯಲಿಗನು ತಾನಾಗಿ
ಕಳವಳದ ವಿಷಯಗಳ ವೆಸನಗ
ಳೊಳಗೆ ಸಿಕ್ಕುವನಲ್ಲಪಾತನ
ಹೊಲಬು ತಾ ಬೇರೊಂದು ಪರಿ ಏನೆಂಬೆನಲ್ಲಮನ

ಮಗಳ ದುಗುಡ ತಾಯಿಗೆ ಮುಟ್ಟುತ್ತದೆ. ಮೇಪ ಮೊದಲು ತಮ್ಮ ಕುಲ ಅಂತಸ್ತಿಗೆ ಸಲ್ಲದ ಕಾರ್ಯಕ್ಕೆಳಸಿದ ಮಾಯೆಯನ್ನು ಅರಸಿ ದೂಷಿಸಿದಳು. ಆದರೆ ಮುದ್ದಿನ ಕುವರಿಗಾಗಿರುವ ಅವಸ್ಥೆಯನ್ನು ಕಂಡಮೇಲೆ ಕನಿಕರಿಸಿದಳು. ರಹಸ್ಯವಾಗಿ ಇದೆಲ್ಲಾ ನಡೆಯಲಿ ಎಂದು ಎಚ್ಚರಿಸಿದಳು. ಇದರಿಂದ ಪ್ರೋತ್ಸಾಹಗೊಂಡ ಮಾಯೆಯ ಸಖಿಯರು ಅಲ್ಲಮನ ಉಪಚಾರವನ್ನು ಇನ್ನೂ ಗಡಾದ್ದಾಗಿ ಮಾಡತೊಡಗಿದರು. 'ಶಿವಕಾಮ ತತ್ವ'ದ ದೃಷ್ಟಿ ದಿಂದ ಅವನಾಡುವ ಮಾತುಗಳು ಅವರಿಗೆ ಪ್ರಣಯದ ಮಾತುಗಳಂತೆ ಹೊಳೆದವು.

ಕೈಲಾಸದಲ್ಲಿ ಮಾಯೆಯ ಸಮಾಚಾರ ತಿಳಿಯದ ಗಿರಿಜೆ ವಿಮಳೆಯನ್ನು ಭೂಮಿಗೆ ಕಳುಹಿಸಿದಳು. ಆಕೆ ಬಂದು ಮಾಯೆಯನ್ನು ಎಚ್ಚರಿಸಿದಾಗಲೇ ಅವಳಿಗೆ ಪೂರ್ವದ ಕಥನ ಕಾರಣದ ಬೆಳವಿಗೆಗೆ ಬೆದೆಯಾದದ್ದು. ಜಾತಿ ಸ್ಮರೆಯಾದಮೇಲೆ ತಾನು ಬಂದ ಉದ್ದೇಶ ಅವಳಿಗೆ ಗೋಚರಿಸಿತು. ಈ ಅಲ್ಲಮನೆಂದರೆ ಯಾರು ? ಎಂದು ವಿಮಳೆಯನ್ನು ಕೇಳಿದಳು. ವಿಮಳೆ ಅಲ್ಲಮನೆಂಬ ಮಹಾಪುರುಷನ ಜನನ, ಜೀವನ ಕಾರಣಿಕತನಗಳನ್ನು ಸಂಕ್ಷೇಪ ವಾಗಿ ವಿವರಿಸಿದಳು. ಮಾಯೆಯಾದರೋ ಈ ಮದ್ದಳೆಯ ಅಲ್ಲಮನಿಗೂ ತನ್ನ ಗೆಳತಿ ಹೇಳುತ್ತಿರುವ ಮಹಾಜ್ಞಾನಿ ಅಲ್ಲಮನಿಗೂ ಸಂಬಂಧವಿಲ್ಲವೆಂದು ಭಾವಿಸಿದಳು. ವಿಮಳೆ ಅನುಮಾನ ವ್ಯಕ್ತಪಡಿಸಿದಾಗ ಅವನ ಬಗ್ಗೆ ಸುಲಭ

ವಾಗಿ ಮಾತಾಡಿದಳು. ಮಧುಕೇಶ್ವರನ ಗುಡಿಯಲ್ಲಿ ನೃತ್ಯ ರಂಗದಲ್ಲಿ ವಿರಾಜಿಸಿ ನಿಂತು ಮುದ್ದ ಳೆಯು ಅಲ್ಲಮನನ್ನು ಕೆಣಕಿದ ಮಾಯೆಯು ಪದಗತಿಗೆ ತಕ್ಕಂತೆ ಆತ ಬಾರಿಸುತ್ತಾನಾದರೂ ಅವಳನ್ನು ಕುಣಿಸುತ್ತಿದ್ದವನು ಅಲ್ಲಮ ; ಕುಣಿಯುತ್ತಿದ್ದವಳು ಮಾಯೆ.

ಹೂಡಿ ಹಣ್ಣಿದ ಜಗದ ಜಂತ್ರವ
ನಾಡಿಸುವ ಮಾಯಾಂಗನೆಯ ತಾ
ನಾಡಿಸುವೆನೆಂಬುದನು ಪ್ರತ್ಯಕ್ಷದಲಿ ತೋರ್ಪಂತೆ

ಅಲ್ಲಮನು ಮಾಯೆಯನ್ನು ಕುಣಿಸುತ್ತಿದ್ದನು ಎಂದು ಕವಿ ವ್ಯಾಖ್ಯಾನಿಸಿದ್ದಾನೆ. ಆದರೆ ನೋಡುವ ಜನರಿಗೆ ಮಾತ್ರ ಅಲ್ಲಮನ ವರ್ತನೆ ವಿಪರೀತಾರ್ಥವನ್ನು ಉಂಟುಮಾಡಿತಂತೆ. ಈತನು ಮಾಯೆಯಲ್ಲಿ ಅನುರಕ್ತನಾಗಿರುವನೆಂದು ಅವರು ಭಾವಿಸಿದರು :

ಲಲಿತ ನಿರ್ಮಳ ಚಂದ್ರಕಾಂತದ
ಶಿಲೆಯ ಹತ್ತಿರೆ ಲತೆಯ ದಾವಾ
ನಳನು ಕೊಳಲಾ ಜ್ವಾಲೆಯಾ ಶಿಲೆಯೊಳಗೆ ತೋರ್ಪಂತೆ
ತಿಳಿಯಬರಿಯದ ಜನಕೆ ಮಾಯೆಯ
ತಳಿತ ಕಾಮಜ್ವಾಲೆಯಲ್ಲಮ
ನೊಳಗೆ ಪ್ರತಿಬಿಂಬಿಸಿದುದಾತನೆ ಕಾಮಿಯೆಂಬಂತೆ

ಈ ಮಾತುಗಳು ಕಾಮಲತೆಯೆಂಬ ಹೆಣ್ಣಿಗೆ ಮನಸೋತ ಅಲ್ಲಮನನ್ನು ಸೃಷ್ಟಿಸಿದ ಹಿಂದಿನ ಕವಿಗಳಿಗೆ ಚಾಮರಸನು ಕೊಡುವ ಉತ್ತರದಂತಿವೆ. ಇತ್ತ ವಿಮಳೆಯ ಸನ್ನೆಯಿಂದ ಅಲ್ಲಮನ ನಿಜ ಕುರುಹನ್ನು ತಿಳಿದ ಮಾಯಾದೇವಿಯ ನರ್ತನದ ಲಾಸ್ಯ ತೀವ್ರವಾಯಿತು. ಆತನ ಸಂಯಮದ ಶಕ್ತಿಯನ್ನು ಅಳೆಯುವ ಆಸೆ ಹುಟ್ಟಿತಂತೆ. ಇಲ್ಲಿಯವರೆಗೆ ಅಲ್ಲಮನಲ್ಲಿ ಕಾಮ ಪ್ರೇಮ ಭಕ್ತಿಯನ್ನಿಟ್ಟದ್ದವಳು ಈಗ ಅವನನ್ನು ಗೆಲ್ಲುವ ಹೆಮ್ಮೆಗೆ ತೊಡಗಿದಳು. ಮುಗ್ಧಳಾಗಿದ್ದ ಹೆಣ್ಣಿನ ಕಾಮದ ಕಾಳಿಕೆಯನ್ನು ಕ್ರಮೇಣ ಕಳೆದು ಶುದ್ಧ ಸ್ವರೂಪಕ್ಕೆ ತಿರುಗಿಸುವ ಆಲೋಚನೆ ಅಲ್ಲಮನಿಗಿದ್ದಿರಬೇಕು. ಆದರೆ ಯಾವ ಕ್ಷಣದಲ್ಲಿ ಅವಳಲ್ಲಿ ಅಹಂಕಾರವುದಿಸಿತೋ ಆ ಕ್ಷಣಕ್ಕೇ ಅಲ್ಲಮನು ಮುದ್ದಳೆಯನ್ನು ಒಡೆದುಹಾಕಿ ನಗುತ್ತಾ ಹೊರಟುಹೋದನಂತೆ. ಇಲ್ಲಿ ಆತ ನಗುತ್ತಾ ಹೋದನೆಂಬುದನ್ನು ಎಚ್ಚರಿಕೆಯಿಂದ ಗಮನಿಸದಿದ್ದರೆ ಅನರ್ಥವಾಗುತ್ತದೆ. ತಾವು ಪ್ರತಿಸ್ಪರ್ಧಿಗಳೆಂದು ಭಾವಿಸುವ ಎಲ್ಲರೊಡನೆಯೂ ಅಲ್ಲಮ ನಗುತ್ತಾ

ವರ್ಣಿಸುತ್ತಾನೆ. ಸಿದ್ಧರಾಮ, ಗೋರಕ್ಷ, ಮಾಯಾದೇವಿಯರನ್ನು ಉದಾಹರಿಸಬಹುದು. ಏಕೆಂದರೆ ಅಲ್ಲಮನಂತಹ ಮಹಾತ್ಮ ಲೋಕದ ಜನರೊಂದಿಗೆ ಪ್ರೀತಿ, ಕನಿಕರ, ನಗೆಯಿಂದ ವರ್ತಿಸುವುದು ಸಹಜವೇ ಹೊರತು ದರ್ಪ, ಬಿಗುಮಾನದಿಂದಲ್ಲವೆಂದು ಕವಿ ಇದರಿಂದ ಸೂಚಿಸುತ್ತಾನೆ.

ಅಲ್ಲಮ ಮಾಯೆಯನ್ನು ತಿರಸ್ಕರಿಸಿ ಹೋದರೂ ಆಕೆ ಅವನ ಬೆನ್ನು ಬಿಡಲಿಲ್ಲ. ಅವನನ್ನು ಗೆಲ್ಲಲೇಬೇಕೆಂಬ ತವಕದಿಂದ ಮಾಯೆ, ಅವಳನ್ನು ಹಿಂಬಾಲಿಸಿ ವಿಮಳೆ ಮುಂತಾದ ಗೆಳತಿಯರು ಅಲ್ಲಮನನ್ನು ಹಿಂಬಾಲಿಸಿದರು. ಕಾಡುಮೇಡುಗಳಲ್ಲಿ ಹಸಿವು ತೃಷೆಯೆನ್ನದೆ ಮುನ್ನುಗ್ಗುತ್ತಾರೆ. ಅಡವಿಯಲ್ಲಿ ಜಪತಪ ನಿರತರಾಗಿದ್ದ ಮುನಿಗಳು ಮಾಯೆಯನ್ನು ಕಂಡೊಡನೆ 'ಹುಲಿಗಂಡ ಹುಲ್ಲೆಗಳಂತೆ' ದಿಕ್ಕುದಿಕ್ಕಿಗೆ ಚೆದುರಿದರಂತೆ ನಿಷ್ಪಾಪಿಗಳಾದ ತಪಸ್ವಿಗಳಿಗಾಗುತ್ತಿರುವ ಭಂಗವನ್ನು ಕಂಡ ಅಲ್ಲಮ ತಡೆದು ನಿಲ್ಲುತ್ತಾನೆ. ನಿಂತು, ಮಾಯೆಗೆ ಹಿಂದಿರುಗಲು ಹೇಳಿದ. ಒಪ್ಪದ ಮಾಯೆ ವಾದಕ್ಕೆ ತೊಡಗಿದಳು. ತರ್ಕದಲ್ಲಿ ಒಲಿಸಲಾಗದೆಂದು ತಿಳಿದ ಅವಳ ಗೆಳತಿಯಾದ ವಿಮಳೆ 'ನಿನ್ನಯ ಕರುಣ ವಾಕೆಯ ಹರಣ'ವೆಂದು ಬೇಡಿದಳು.

ಚಾಮರಸನ ನಾಟಕೀಯ ಪ್ರತಿಭೆಗೆ ವಿಮಳೆ–ಅಲ್ಲಮರ ಸಂವಾದ ಒಂದು ಸೊಗಸಾದ ನಿದರ್ಶನ. ಅದರ ಜೊತೆಗೆ ಸಿದ್ಧರಾಮ–ಅಲ್ಲಮ, ಗೋರಕ್ಷ–ಅಲ್ಲಮರ ಸಂದರ್ಭಗಳನ್ನು ಸೇರಿಸಬಹುದು. ಇಲ್ಲೆಲ್ಲಾ ಚಾಮರಸನು ರಾಘವಾಂಕನನ್ನು ನೆನಪಿಗೆ ತರುತ್ತಾನೆ. ವಿಮಳೆಯ ಮಾತುಗಳು ಅಲ್ಲಮನನ್ನು ಸಂತಸಗೊಳಿಸುತ್ತವೆ. ಅವಳ ಸದ್ಗುಣ ವಿನಯಗಳನ್ನು ಮೆಚ್ಚಿ ಹೊಗಳುತ್ತಾನೆ. ಆದರೆ ಮಾಯೆಯ ಅಹಂಕಾರದಿಂದ ಬೇಸರಿಸುತ್ತಾನೆ. ಖಂಡ ತುಂಡವಾಗಿ ಅವಳನ್ನು ಅನುಗ್ರಹಿಸಲು ಸಾಧ್ಯವಿಲ್ಲವೆಂದು ಹೇಳಿದ :

ಕಾಮವೆತ್ತಲು ಪರಮತತ್ವದ
ಸೀಮೆಯೆತ್ತಲು ತಿಮಿರವೆತ್ತಲು
ತಾಮರಸ ಸಖನೆತ್ತ ಮೇಣರಿವೆತ್ತ ಮರವೆತ್ತ
ಭ್ರಾಮಕದ ನುಡಿ ಸಾಕು ನೀನೆ
ತ್ತಾಮಹಾಘನವೆತ್ತ ಮರುಳೇ
ಕ್ಷೇಮದಲಿ ನೀ ಬಂದ ಬಟ್ಟೆಯಲಬಳೆ ಹೋಗೆಂದ

ಕಡಲ ನೀರುಗಳೆಲ್ಲವಮೃತದ
ಮಡುಗಳಾದಡೆಯುಹವು ಸುರಗಿರಿ
ಕುಡಿವರಿದು ಹಬ್ಬಿದಡೆ ಹಬ್ಬುವುದವನಿ ಮಂಡಲವ
ಗಿಡುಗಳೆಲ್ಲವು ಕಲ್ಪತರುವಾ
ದಡೆಯುಹವು ಎತ್ತಾನು ಕಾಲಕೆ
ಮಡದಿ ಮಾಯೆಗೆ ಪರಮ ತತ್ವಜ್ಞಾನವಿಲ್ಲೆಂದ

ಇಲ್ಲಿಗೆ ಪ್ರಭುಲಿಂಗಲೀಲೆಯ ಕಥಾ ರಚನೆಯ ಪ್ರಥಮ ಘಟ್ಟ ಮುಗಿಯು ತ್ತದೆ. ಮಾಯೆಯು ಖಿನ್ನಳಾಗಿ ತಂದೆ ತಾಯಿಗಳಿಗೆ ತಾನು 'ಕಾರಣ ಕನ್ಯೆ' ಯೆಂಬುದನ್ನು ತಿಳಿಸಿ ಕೈಲಾಸಕ್ಕೆ ಹಿಂದಿರುಗಿದಳು.

ಮುಂದಿನ ಘಟ್ಟ ಬಸವಾದಿ ಶರಣರ ಅವತಾರಕ್ಕೆ ಹಿನ್ನೆಲೆಯನ್ನು ಕಲ್ಪಿಸುವುದು. ಕೈಲಾಸಕ್ಕೆ ಹಿಂದಿರುಗಿದ ಮಾಯೆಯ ಸ್ಥಿತಿಯನ್ನು ಕಂಡ ಗಿರಿಜೆಗೆ ಅಲ್ಲಮನ ನಿಜ ಸ್ವರೂಪದ ಅರಿವಾಗುತ್ತದೆ. ಶಿವನ ಅಪ್ಪಣೆಯಂತೆ ತನ್ನ ಸಾತ್ವಿಕ ಕಳೆಯನ್ನು ಭೂಮಿಗೆ ಕಳುಹಿಸುತ್ತಾಳೆ. ಈ ಸಾತ್ವಿಕ ಕಳೆಯೇ ಅಕ್ಕಮಹಾದೇವಿಯಾಗಿ ಉಡುತಡಿಯೆಂಬ ಊರಿನ ನಿರ್ಮಳೆ–ಸುಮತಿಯರ ಮಗಳಾಗಿ ಹುಟ್ಟುತ್ತಾಳೆ. ಅಲ್ಲಮನಿಂದ ಪರಮಶಿವ ತತ್ವವನ್ನು ಅರಿತು ಕೊಳ್ಳಲು ಶಿವನ ಅಪ್ಪಣೆಯಂತೆ ವೃಷಭನು ಬಸವಣ್ಣನಾಗಿ ಅವತರಿಸುವನು. ಸಿದ್ಧರಾಮ ಮುಂತಾದ ಶರಣರೂ ಭೂಮಿಯಲ್ಲಿ ಹುಟ್ಟುವರು. ಈಶ್ವರನು ಕಳುಹಿಸಿದ ಮಹಾಮಹಿಮರೆಲ್ಲ ಅಲ್ಲಲ್ಲಿ ಜನಿಸಿದರು. ಶಿವನ ಸಭೆಯಲ್ಲಿ ವೃಷಭರಾಜನ ಹೊಗಳಿಕೆಯನ್ನು ಸೈರಿಸದಿದ್ದ ಕೆಲವರು ಬಿಜ್ಜಳನೇ ಮುಂತಾಗಿ ಹುಟ್ಟುವರು. ಹೀಗೆ ಒಂದೇ ಸೂತ್ರದಲ್ಲಿ ಬಸವಾದಿ ಪ್ರಮಥರ ಮತ್ತು ಅವರ ವೈರಿಗಳ ಹುಟ್ಟಿಗೂ ಕಾರಣವನ್ನು ಕಲ್ಪಿಸಿದ್ದಾನೆ.

ಮಹಾವ್ಯಕ್ತಿಗಳ ಹುಟ್ಟಿಗೆ ಈ ಬಗೆಯ ಅಲೌಕಿಕ ಹಿನ್ನೆಲೆಯನ್ನು ಕಲ್ಪಿಸುವುದು ಸಾಮಾನ್ಯವಾಗಿ ಹಿಂದಿನವರ ವಿಧಾನ. ಹರಿಹರನು ಮಾಡಿರು ವುದೂ ಈ ಕೆಲಸವನ್ನೇ. ಪುರಾಣ ಸತ್ಯವನ್ನು ಲೌಕಿಕ ಒರೆಗಲ್ಲಿಗೆ ಹಚ್ಚದೆ ಅದರ ಸಾಂಕೇತಿಕ ಅರ್ಥವನ್ನು ಮಾತ್ರ ಅಂಗೀಕರಿಸಬೇಕು. ಇಲ್ಲದಿದ್ದರೆ ಪ್ರಭುಲಿಂಗಲೀಲೆ ಮಾತ್ರವಲ್ಲ, ರಾಮಾಯಣ ಮಹಾಭಾರತಗಳು ಮತ್ತು ಪಾಶ್ಚಾತ್ಯ ಪ್ರಾಚೀನ ಮಹಾಕಾವ್ಯಗಳು ಸಹ ಅರ್ಥಹೀನವಾಗುತ್ತವೆ.

ಪಾರ್ವತಿಯ ಸಾತ್ವಿಕ ಕಳೆಯಾದ ಮಹಾದೇವಿ ಪ್ರಾಪ್ತ ವಯಸ್ಸಿಗೆ ಬಂದಿದ್ದಾಳೆ. ಯೌವ್ವನದಲ್ಲಿ ಪುಟಕ್ಕಿಟ್ಟ ಚಿನ್ನದಂತೆ ಅವಳ ರೂಪು

ಕಂಗೊಳಿಸುತ್ತಿದೆ. ಹೀಗಿರುವಾಗ ಒಂದು ದಿನ ಆ ಪುರದರಸು ಕೌಶಿಕ ವೈಹಾಳಿಯಿಂದ ಹಿಂದಿರುಗುತ್ತಿರುತ್ತಾನೆ. ತನ್ನ ಮನೆಯ ಬಾಗಿಲಿನಲ್ಲಿ ಕುತೂಹಲದಿಂದ ನಿಂತಿದ್ದ ಈ ತರುಣಿ ಅವನ ಮನವನ್ನಪಹರಿಸುತ್ತಾಳೆ; ಮದುವೆಯಾಗ ಬಯಸುತ್ತಾನೆ. ಆದರೆ ಅಕ್ಕಮಹಾದೇವಿ ಹಾಕಿದ ಷರತ್ತಿಗೆ ಒಪ್ಪದೆ ಅವಳ ಆಸೆಯನ್ನು ಬಿಟ್ಟುಬಿಡುತ್ತಾನೆ. ಅಲ್ಲಿಂದ ಮುಂದೆ ಮಹಾದೇವಿ ಊರನ್ನು ತೊರೆದು ಗುರು ಗುಹೇಶ್ವರನನ್ನು ಅರಸುತ್ತಾ ಗಿರಿ ಗಹ್ವರಗಳಲ್ಲಿ ಊರು ಅಡವಿಗಳಲ್ಲಿ ತೊಳಲಿದಳು. ಅಕ್ಕಮಹಾದೇವಿಯ ಚಿತ್ತವು ನಿರ್ಮಲವಾಗಿ ಪರಿಪಕ್ವವಾಗಿರುವುದನ್ನರಿತ ಅಲ್ಲಮಪ್ರಭು ಸಕಾಲ ದಲ್ಲಿ ಕಾಣಿಸಿಕೊಂಡು ಅನುಗ್ರಹಿಸುವನು. ನಿರ್ವಯಲಿನ ಸಮಾಧಿಯನ್ನು ಕರುಣಿಸಿ ಮುಂದುವರಿಯುವನು.

ತನ್ನ ಕಾಲದ ಎಲ್ಲ ಶಿವಶರಣರ ಗುರುವೂ ಗುರಿಯೂ ಆಗಿದ್ದ ಪ್ರಭುವಿನ ವಿಶಿಷ್ಟತೆಯೆಂದರೆ ತಾನೇ ಭಕ್ತರಿದ್ದಲ್ಲಿಗೆ ಹೋಗುವುದು. ಭಕ್ತ ರಂತೂ ಈತನ ಬರವನ್ನು ಹಾರೈಸುತ್ತಿದ್ದವರಂತೆ ಕಂಡೊಡನೆ ಪುನೀತರಾಗು ತ್ತಾರೆ. ಒಬ್ಬೊಬ್ಬ ಭಕ್ತನ ಅರಕೆಯನ್ನು ಆತನಿಗೆ ಮನದಟ್ಟುಮಾಡಿ, ಶುದ್ಧಗೊಳಿಸಿ ಅವನ ಮನಸ್ಸು ಹಸನು ಮಾಡುವುದು ಪ್ರಭುವಿನ ಹೊಣೆ ಗಾರಿಕೆ. ಬಸವಣ್ಣನಂತಹ ಭಕ್ತರು ಆರ್ತರಾಗಿ ಪ್ರಭುವನ್ನು ಕೂಡಲೆ ಒಪ್ಪಿ ಕೊಳ್ಳುವುದುಂಟು. ಮುಕ್ತಾಯಕ್ಕ, ಗೊಗ್ಗಯ್ಯನಂತಹವರು ಪ್ರಶ್ನಿಸಿ ಸಂದೇಹ ಬಗೆಹರಿಸಿಕೊಳ್ಳುತ್ತಾರೆ. ಸಿದ್ಧರಾಮ, ಗೋರಕ್ಷನಂತಹವರು ಸೆಣಸಿ ಶರಣಾಗುತ್ತಾರೆ. ಒಬ್ಬೊಬ್ಬ ಭಕ್ತನಿಗೂ ಒಂದೊಂದು ಗುಣವೇ ಅಹಂಕಾರಕ್ಕೆ ಮೂಲವಾಗುವುದನ್ನು ಕಂಡುಕೊಂಡ ಪ್ರಭುದೇವನು ಅವರಿಗೆ ಅದರ ಅರಿವನ್ನುಂಟುಮಾಡಿಕೊಟ್ಟು ಉದ್ಧರಿಸುತ್ತಾನೆ. ಮುಕ್ತಾಯಕ್ಕನಿಗೆ ತನ್ನ ಅಣ್ಣನ ಮೇಲಿದ್ದ ಅತೀವ ಮೋಹ, ಸಿದ್ಧರಾಮನಿಗೆ ಗುಡಿ, ಕೆರೆ, ತೋಪುಗಳನ್ನು ನಿರ್ಮಿಸುವ ಮೋಹ, ಬಸವಣ್ಣನಿಗೆ ಶರಣ ದಾಸೋಹದ ಮೋಹ, ಗೋರಕ್ಷನಿಗೆ ತಾಂತ್ರಿಕ ಶಕ್ತಿ ನೈಪುಣ್ಯದ ಮೋಹ–ಇವೆಲ್ಲಾ ಒಳ್ಳೆಯ ಮೋಹ ಪಾಶಗಳೇ; ಚಿನ್ನದ ಸೂಲಿನಂತೆ. ಆದರೆ ಸಂಕೋಲೆ ಚಿನ್ನವಾದರೂ ಸಂಕೋಲೆಯೇ. ಯೋಗಿಯಾದವನು ನಿರ್ಲೇಪನಾಗಿ ಸ್ವತಂತ್ರ ನಾಗಿರಬೇಕು; ಅಲ್ಲಮನಂತೆ. ಆತನ ಸ್ಪರ್ಶಕ್ಕೆ ಸಿಕ್ಕಿದ ಕ್ಷಣವೇ ಅವರ ವೈಯಕ್ತಿಕ ಅಹಂಕಾರಗಳು ನಷ್ಟವಾಗಿ ಶೂನ್ಯದಲ್ಲಿ ಒಂದಾಗುತ್ತಾರೆ.

ಒಬ್ಬೊಬ್ಬ ಭಕ್ತನನ್ನೂ ಅಲ್ಲಮನು ಸಂಧಿಸಿ ಆತನ ಸಾಧನೆಯನ್ನು ನಿಷ್ಕಂಟಕವನ್ನಾಗಿಸುವ ಈತನು ಅವರನ್ನು ಕಾಣುವ ಸನ್ನಿವೇಶಗಳು ಅತ್ಯಂತ ನಾಟಕೀಯವಾಗಿವೆ. ಅಲ್ಲಲ್ಲಿ ಆಯಾ ವಚನಕಾರರ ವಚನಗಳನ್ನೇ ಹೋಲುವ, ಸಂವಾದ ಶೈಲಿಯಿದೆ. ನಾಟ್ಯ ಪ್ರತಿಭೆ ಮತ್ತು ಸಂವಾದ ಕುಶಲತೆಯಿಂದಾಗಿ ಮನೋಹರವಾಗಿರುವ ಕೆಲವು ಪ್ರಸಂಗಗಳ ಪರಿಚಯ ಮಾಡಿಕೊಳ್ಳಬಹುದಾಗಿದೆ.

ಸಿದ್ಧರಾಮನು ಹನ್ನೆರಡನೆ ಶತಮಾನದಲ್ಲಿದ್ದ ಬಹುದೊಡ್ಡ ಕರ್ಮಯೋಗಿ. ಜನತೆಯ ಸೇವೆಗಾಗಿ ಗುಡಿ ಗೋಪುರಗಳ ನಿರ್ಮಾಣ, ಕೆರೆ ತೋಪುಗಳ ವ್ಯವಸ್ಥೆಯಲ್ಲಿ ತನ್ಮಯತೆಯಿಂದ ನಿರತನಾದವನು. ಜನತೆಯ ಹಿತಕ್ಕಾಗಿ ತನ್ನನ್ನೇ ಮುಡುಪಿಟ್ಟಿದ್ದ ಈ ಮಹಾವ್ಯಕ್ತಿಗೆ ಸೇವೆಯೇ ಸಂಕೋಲೆಯಾಯಿತು. ಏಕಾಂತದಲ್ಲಿರಬೇಕಾದ ಯೋಗಿ ಸಾರ್ವಜನಿಕ ವ್ಯಕ್ತಿಯಾಗಿಬಿಟ್ಟ. ಇದರಿಂದ ಸಮಾಜಕ್ಕೆ ಲಾಭವಾದರೂ ವ್ಯಕ್ತಿಯ ಅಂತರಂಗ ಜೀವನ ಮಣ್ಣು ಹಿಡಿಯುವ ಅಪಾಯ ತಲೆದೋರಿತು. ಇದನ್ನು ಅಲ್ಲಮ ಯೋಚಿಸಿದ:

ನೂಲ ಸಂಕಲೆ ಗಡಿದು ಕನಕದ
ಕೋಳವನು ಕಾಲಿಂಗೆ ಕೀಲಿಪ
ಕಾಳು ಮತಿಯವನಂತೆ ಸತಿಸುತ ಕೂಟ ಭಯವೆಂದು
ಬಾಳಿಕೆಯ ನತಿಗಳೆದು ಮರಳಿಯು
ಬೋಳು ಮಂಡೆಯ ಕೀರ್ತಿ ಗೋಸುಗ
ಕೋಳು ಹೋದನೆ ರಾಮನೆನುತಲ್ಲಮನು ಬೆರಗಾದ

ಚಿಕ್ಕ ಸಂಸಾರವನು ಸಡಿಲಿಸಿ
ಹೊಕ್ಕನಲ್ಲಾ ಹಿರಿಯ ಸಂಸಾ
ರಕ್ಕಕಟ ವಿಖ್ಯಾತಿ ಪೂಜಾಲಾಭದಿಚ್ಛೆಯಲಿ
ಸಿಕ್ಕಿಬಿದ್ದನು ಸಿದ್ಧರಾಮನು
ಮಿಕ್ಕ ಭವ ಭಾರಿಗಳನಾದಡೆ
ಮುಕ್ಕದೇ ವಿಧಿಯೆನುತಲಲ್ಲಮ ನೋಡಿ ಬೆರಗಾದ

ಅಸಂಖ್ಯಾತ ಒಡ್ಡರು ಕೆರೆಯ ಕೆಲಸದಲ್ಲಿ ನಿರತರಾಗಿದ್ದಾರೆ. ಅಲ್ಲಿಗೆ ಬಂದ ಅಲ್ಲಮ ಸಿದ್ಧರಾಮನ ಕರ್ಮ ಭೂಮಿಯನ್ನು ಕಂಡು ವಿಸ್ಮಿತನಾದ. ಇನ್ನೂ ಈತನನ್ನು ಎಚ್ಚರಿಸದಿದ್ದರೆ ಕಾಲ ಮಿಂಚೀತೆಂದು ಚಿಂತಿಸಿದ. ನೇರವಾಗಿ ತನ್ನ ಗುರುತು ಪರಿಚಯ ಹೇಳದೆ ಸ್ವಲ್ಪ ಬಳಸು ಹಾದಿಯನ್ನು ಬೇಕೆಂದೇ

ಹಿಡಿದ. ಪ್ರೀತಿ ಪಾತ್ರರನ್ನು ರೇಗಿಸಿ ಸಂತೋಷಪಡುವ ಲೌಕಿಕರಂತೆ ಅಲ್ಲಮನೂ ಸಿದ್ಧರಾಮನನ್ನು ಕೆಣಕಿ ಮುದಗೊಳ್ಳಬಯಸುತ್ತಾನೆ. ಅಲ್ಲಿದ್ದ ಸಿದ್ಧರಾಮನ ಶಿಷ್ಯರೆದುರು ಅವರ ಗುರುವನ್ನು ಜರೆಯುತ್ತಾನೆ. 'ಸಕಲ ಕಲ್ಲನು ಕಡಿದು, ಕಲ್ಲಿಗೆ ಶಿಖರ ದೇಗುಲವೆಂದು ಮಾಡಿಸಿ ಮಕರಿಸುವರೊಡ್ಡರಲ್ಲದೆ ಸಿದ್ಧರಲ್ಲೆಂದು' ಹೀಯಾಳಿಸುತ್ತಾನೆ. ಇದರಿಂದ ಸಿಟ್ಟಿಗೆದ್ದ ಸಿದ್ಧರಾಮ ಶಿಷ್ಯರು ಅಲ್ಲಮನ ಮೇಲೆ ಧಾಳಿ ಮಾಡಿದರು; ಬಯಲ ದೇಹಿಯಾದ ಆತನನ್ನು ಹಿಡಿಯಹೋಗಿ ತಬ್ಬಿಬ್ಬಾದರು. ಸಾವಿರಾರು ಸಂಖ್ಯೆಯ ಸಿದ್ಧರಾಮ ಭಕ್ತರು ಅಲ್ಲಮನ ಮೇಲೆ ಕವಣೆಯ ಕಲ್ಲನ್ನು ತೂರಿದರೆ ಇದರಿಂದ ಸ್ವಲ್ಪವೂ ವಿಚಲಿತನಾಗದ ಅಲ್ಲಮ ನಗುತ್ತಾ ಅವರು ತೂರಿದ ಕಲ್ಲಿನ ರಾಶಿಯ ಮೇಲೆ ನಿಂತಿದ್ದನಂತೆ. ಶತೃಗಳನ್ನು ನೋಯಿಸುವುದಿಲ್ಲ, ತಾನೂ ಕೋಪಗೊಳ್ಳುವುದಿಲ್ಲ ಎಂಬ ಅಲ್ಲಮನ ಪರಿ ನೋಟಕರಿಗೆ ಬೆರಗು ಹುಟ್ಟಿಸಿತು. ಇದರಿಂದ ಕಂಗೆಟ್ಟ ಸಿದ್ಧರಾಮ ಶಿಷ್ಯರು ಗುರುವಿನಲ್ಲಿಗೆ ದೂರೊಯ್ದರು. ಕಾರಣವಿಲ್ಲದೆ ನಿಮ್ಮನ್ನು ನಿಂದಿಸುವ ದುಷ್ಟ ಜಂಗಮನೊಬ್ಬ ಬಂದಿದ್ದಾನೆಂದರು.

ಸಿದ್ಧರಾಮನು ಕೋಪಾಟೋಪದಿಂದ ಜಂಗಮನಿದ್ದಲ್ಲಿಗೆ ಬಂದರೆ, ಶಾಂತವಾಗಿ ನಗುತ್ತಿರುವ ಪ್ರಭುದೇವ ಇದಿರಾದನು. ಸಿದ್ಧರಾಮನ ಕೋಪವನ್ನು 'ಯೋಗಿಗೆ ಇದು ಉಚಿತವೇ' ಎಂದು ಪ್ರಶ್ನಿಸಿದನು. 'ಕೋಪ ನಿಮ್ಮಯ ಸಂಪ್ರದಾಯ'ವೆಂದು ಕೆಣಕಿದನು. ತನ್ನ ಸಂಪ್ರದಾಯದ ಹೆಸರೆತ್ತಿದರೆ ಹಣೆಗಣ್ಣಿಂದ ಸುಟ್ಟುಬಿಡುವೆನೆಂದ ಸಿದ್ಧರಾಮ :

ಜಾಗು ಜಾಗುರೆ ನೊಸಲ ಕಣ್ಣಿನ
ಬೇಗೆಯಲಿ ಮುನ್ನೆನಿತ ಕೊಂದೆಯೊ
ಯೋಗಿಯಹುದೈ ನೀನು ಹಿಂಸಾ ಧರ್ಮಕರ್ಮದಲಿ
ರಾಗದಿಂದುರಿದೇಳುತಿಹ ಭವ
ರೋಗಿ ನಿನ್ನೊಳು ಮಾತನಾಡಲಿ
ಕಾಗದೆಮಗೆನುತಿರ್ದನಲ್ಲಮ ಸಿದ್ಧರಾಮಂಗೆ

ಇದರಿಂದಲೂ ಎಚ್ಚರಾಗದ ಸಿದ್ಧರಾಮ ಯೋಗಿ ಹಣೆಗಣ್ಣನ್ನು ತೆರೆದೇ ಬಿಟ್ಟ. ಅಲ್ಲಿಂದ ಎದ್ದ ಬೇಗೆ ಸಕಲ ಜೀವರನ್ನೂ ನೋಯಿಸಿತು. ಅಲ್ಲಮನ ಹತ್ತಿರವೂ ಸುಳಿಯಲಿಲ್ಲ. ಸಿದ್ಧರಾಮನ ಹಣೆಗಣ್ಣು ಅವನು ಕಟ್ಟಿದ ಪುರವನ್ನೇ ಸುಡ ತೊಡಗಿದಾಗ ಅಲ್ಲಮನೇ ಅವರ ಉರುಬನ್ನು ತಡೆದು ಶಾಂತಗೊಳಿಸುತ್ತಾನೆ.

ಆಗ ಸಿದ್ಧರಾಮನಿಗೆ ಜ್ಞಾನೋದಯವಾಯಿತು. ಅಲ್ಲಮನ ಪಾದಗಳಿಗೆರಗಿ ಕ್ಷಮೆ ಬೇಡಿದ. ಅಲ್ಲಮನು ಅವನನ್ನು ಹಿಡಿದೆತ್ತಿ ಸಂತೈಸಿದ.

ಕರಣಗಳು ಕೈ ಗೂಡಿದಾಗಳೆ
ಮರಣವನು ಗೆಲ ಕಲಿತು ಸಂತತ
ಶರಣ ಪದವಲಿ ನಿಂದು ಪರಮಾನಂದ ಸುಖದಿಂದ
ಪರಿಣಮಿಸಿ ನಿರ್ಲೇಪನಾಗಿರು
ತಿರಲು ಬಲ್ಲಡ ಬಳಿಕ ನೀನೇ
ಪರಮನಪ್ಪುದು ತಪ್ಪದೈ ರಾಮಯ್ಯ......

ಎಂದು ಅಧ್ಯಾತ್ಮ ರಹಸ್ಯವನ್ನು ಉಸುರಿದಾಗ ಸಿದ್ಧರಾಮನ ಅಂತಶ್ಚಕ್ಷು ತೆರೆಯಿತು. ಸಿದ್ಧರಾಮ ಅಲ್ಲಮನನ್ನು ಹಿಂಬಾಲಿಸಿದ. ಮತ್ತೊಬ್ಬ ಮಹಾ ಭಕ್ತ ಬಸವಣ್ಣನೆಡೆಗೆ ಇಬ್ಬರೂ ಜೊತೆಯಾಗಿ ಹೋದರು.

ಗೋರಕ್ಷ ಕಾಪಾಲ ಮಾರ್ಗದ ಸಾಧಕ. ಶ್ರೀಗಿರಿಯಲ್ಲಿ ನೆಲಸಿ ತಾಂತ್ರಿಕ ಸಾಧನೆಗಳಿಂದ ದೇಹವನ್ನು ವಜ್ರದಂತೆ ಕಠಿನವಾಗಿಸಿಕೊಂಡವನು. ಅಲ್ಲಮ ಇವನ ಸಾಧನೆಯ ಪೊಳ್ಳನ್ನು ತೋರಿಸಿಕೊಡುತ್ತಾನೆ. ಬಾಹ್ಯ ಸಾಧನೆಗಳಲ್ಲಿ ಹುರುಳಿಲ್ಲವೆನ್ನುವುದನ್ನು ತೋರಿಸಲು ಈ ಬಗೆಯ ಪ್ರಸಂಗವೊಂದನ್ನು ಕವಿ ಸೇರಿಸಿರುವಂತಿದೆ. ತಾನೆ ಗೋರಕ್ಷನಲ್ಲಿಗೆ ಹೋದ ಅಲ್ಲಮನ ಪರಿ, ರೋಗಿ ಯಲ್ಲಿಗೆ ಅಮೃತವೇ ಹೋದಂತಿತ್ತು. ಸ್ವತಃ ಮಹಾ ಸಾಧಕನಾಗಿದ್ದ ಗೋರಕ್ಷ ಅಲ್ಲಮನನ್ನು ಗೌರವದಿಂದಲೇ ಬರಮಾಡಿಕೊಂಡ. ಆದರೆ ಬಿಂಕದಿಂದ ಕೈ ಮುಗಿದ ; ಪಾದಕ್ಕೆರಗಲಿಲ್ಲ. ಅಲ್ಲಮನೂ ತಾಂತ್ರಿಕ ಯೋಗ ಸಾಧನೆ ಗಳಲ್ಲಿ ಪ್ರವೇಶವಿದ್ದವನು. ಆತನ ವಚನಗಳು ಇದನ್ನು ಸೂಚಿಸುತ್ತವೆ. ಆದರೆ ಸಾಧಕನಾದವನು ದಾಟಬೇಕಾದ ಒಂದು ಘಟ್ಟವೆಂದು ಅದನ್ನು ಆತ ಪರಿಗಣಿಸಿದ್ದಿರಬೇಕು. ಗೋರಕ್ಷನಂತೆ ಅಲ್ಲಿಯೇ ನೆಲೆ ನಿಲ್ಲಲಿಲ್ಲ. ಆದುದ ರಿಂದಲೇ ಶರೀರವನ್ನು ತಾನೆಂಬ ನಂಬಿಕೆಯ ನಿರರ್ಥಕತೆಯನ್ನು ಗೋರಕ್ಷನ ಮನಸ್ಸಿನಲ್ಲಿ ಮೂಡಿಸಲು ಪ್ರಯತ್ನಿಸುತ್ತಾನೆ. ಶರೀರವನ್ನು ಸರಿಯಾಗಿಟ್ಟು ಕೊಳ್ಳುವವನು ಅದರ ಮೂಲಕವೇ ಪವಾಡ ನಡೆಸಬಹುದೆನ್ನುವುದು ಗೋರಕ್ಷನ ಸಿದ್ಧಾಂತ. ಅದಕ್ಕೆ ದೃಷ್ಟಾಂತವಾಗಿ ತನ್ನನ್ನೇ ಒಪ್ಪಿಸಿಕೊಳ್ಳು ತ್ತಾನೆ. ಅಲ್ಲಮನ ಕೈಗೆ ಖಡ್ಗವೊಂದನ್ನಿತ್ತು ತನ್ನ ದೇಹವನ್ನು ತುಂಡರಿಸಲು ಕೇಳುತ್ತಾನೆ. ಇವನ ಸತ್ವವನ್ನು ಪರೀಕ್ಷಿಸಬೇಕೆಂಬ ಹಂಬಲ ಅಲ್ಲಮನಿಗೂ ತಲೆದೋರಿತು. ತನ್ನೆಲ್ಲ ಶಕ್ತಿಯನ್ನೂ ಒಗ್ಗೂಡಿಸಿ ಗಿರಿಯೇ ನಡುಗುವಂತೆ

ಗೋರಕ್ಷನ ಮೇಲೆ ಖಡ್ಗ ಪ್ರಹಾರ ಮಾಡುತ್ತಾನೆ. ಶ್ರೀಗಿರಿಯೇ ಅಲ್ಲಮನ ಅಬ್ಬರ ಮತ್ತು ಖಡ್ಗ ಪ್ರಹಾರಕ್ಕೆ ನಡುಗಿತೇ ಹೊರತು ಗೋರಕ್ಷನ ಕೂದಲೂ ಕೊಂಕಲಿಲ್ಲ :

ಬರ ಸಿಡಿಲು ಶೀತೋಷ್ಣ ಖಡುಗದ
ಬಿರುಬು ಹೊಯಿಲಿಗೆ ಕೆಡದ ವಜ್ರದ
ಬಿರುಸಿನಂತೆನಿಸಿದ ಶರೀರವು ಸಿದ್ಧಿಯಲ್ಲವಡೆ
ಪೆರತಾವುದು ಸಿದ್ಧನಾದಡೆ
ಕುರುಹದಾವುದು ನೀನು ಬಲ್ಲಡೆ
ಬರಿಯ ಮಾತನು ಬಿಟ್ಟು ದಿಟವನು ಪ್ರಭುವೆ ತೋರೆಂದ

ಗೋರಕ್ಷನ ಸವಾಲು ತಿರಸ್ಕರಿಸುವಂತಿಲ್ಲ. ಒಪ್ಪಿ, ಅದೇ ಖಡ್ಗವನ್ನು ಅವನ ಕೈಗಿತ್ತು ತನ್ನ ಶರೀರವನ್ನು ಒಡ್ಡುತ್ತಾನೆ. ಗೋರಕ್ಷನಿಗಂತೂ ಇದರಿಂದ ಪರಮಾನಂದವೇ ಆಗುತ್ತದೆ ; ತಕ್ಕ ಎದುರಾಳಿ ದೊರೆತನೆಂದು. 'ಸಾಧಕಗಿದೆ ಮಹಾನವಮಿ' ಎಂದು ಖಡ್ಗವನ್ನು ಬೀಸುತ್ತಾನೆ. ಬಯಲಿನಲ್ಲಿ ಖಡ್ಗವನ್ನು ಬೀಸಿದಂತೆ ಅದು ಪ್ರಭುವಿನ ದೇಹವನ್ನು ತೂರಿ ಮುಟ್ಟದೆ ಹೊರಬರುತ್ತದೆ. 'ನಿನ್ನ ಹೊಯ್ದಡೆ ಬಯಲ ಹೊಯ್ದಂತೆ' ಎಂದು ಅಚ್ಚರಿಯಿಂದ ಮೂಕನಾಗುತ್ತಾನೆ ಗೋರಕ್ಷ. ಇದರ ಮಹಿಮೆಯ ರಹಸ್ಯವನ್ನು ಬೇಡುತ್ತಾನೆ. ಆಗ ಅಲ್ಲಮನು ದೇಹವನ್ನು ವಜ್ರವಾಗಿಸುವುದಕ್ಕಿಂತ ಅದನ್ನು ಇಲ್ಲವಾಗಿಸಿ ಶೂನ್ಯವಾಗಿಸುವುದೇ ಸಾಧಕನ ಗುರಿಯಾಗಬೇಕೆನ್ನುತ್ತಾನೆ :

ಕಾಯ ಬಲಿದಡೆ ಮಾಯೆ ಬಲಿವುದು
ಮಾಯೆ ಬಲಿದಡೆ ಛಾಯೆ ಬಲಿವುದು
ಕಾಯ ಮಾಯಾ ಛಾಯೆ ಬಲಿದಡೆ ಸಿದ್ಧನವನಲ್ಲ
ಕಾಯ ಮಾಯಾ ಛಾಯೆದಾಗಿನ
ದಾಯವನು ನೆರೆ ಕಳೆದನಾದಡೆ
ದಾಯ ನಾತನು ಸಿದ್ಧರಲಿ ಗೋರಕ್ಷ ಕೇಳೆಂದ

ಅಲ್ಲಮನ ಮಹಿಮೆಯ ನಿಜ ಸ್ವರೂಪವನ್ನು ತಿಳಿದಮೇಲೆ ಗೋರಕ್ಷ ಶರಣಾದ. ಹದಕ್ಕೆ ಬಂದ ಮನಸ್ಸನ್ನು ಕೂಡಲೆ ಪಾಕಗೊಳಿಸಬೇಕೆಂದು ಅಲ್ಲಮನೂ ಅವನಿಗೆ ಅನುಗ್ರಹಿಸಿ ಉಪದೇಶಿಸಿದ.

ಮುಕ್ತಾಯಕ್ಕ ಸೋದರ ಪ್ರೇಮದಿಂದ ಕಂಗೆಟ್ಟವಳು. ತನ್ನ ಅಣ್ಣನಾದ ಅಜಗಣ್ಣನ ಸಾವಿನಿಂದ ದಿಗ್ಭ್ರಮೆಹೊಂದಿದ್ದ ಅವಳನ್ನು ಪ್ರಭುದೇವರು

ಸಂತೈಸಿ ದೇಹಮೋಹದ ಭ್ರಮೆಯಿಂದ ಅವಳನ್ನು ಬಿಡಿಸುತ್ತಾರೆ. ಲೌಕಿಕ ರೊಡನೆ ಇರುವುದು ಯುಕ್ತವಲ್ಲವೆಂದು ನಿನ್ನ ಅಣ್ಣ ಬಯಲಿಗನಾದರೆ ನೀನು ಅವಿವೇಕದಿಂದ ದುಃಖಿಸುವುದು ತರವಲ್ಲವೆಂದು ಬುದ್ಧಿ ಹೇಳಿದನು. 'ಹಾವಿನಡಿಯನು ಹಾವುಗಳು ನೆರೆಬಲ್ಲುವಲ್ಲದೆ ನಮಗೆ ಗೋಚರವೆ'ಎಂದು ಆಕೆ ಶಾಂತಳಾದಳು.

'ಕಬ್ಬಿನಿಚ್ಚೆಗೆ ಬದಿರ ಮೆಲುವಂತೆ' ತನ್ನ ಬದುಕನ್ನು ಪರಿಮಿತ ಗೊಳಿಸಿ ಕೊಂಡಿದ್ದ ತೋಟಿಗ ಗೊಗ್ಗಯ್ಯ. ಮಣ್ಣಿನ ಮೋಹ ಅವನನ್ನು ಆವರಿಸಿತ್ತು. ಎಷ್ಟೋ ವರ್ಷದಿಂದ ಉತ್ತರೂ ತನ್ನ ನೇಗಿಲ ಮೊನೆಯ ಕೆಳಗೇ ಇದ್ದ ವೈರಾಗ್ಯದ ನಿಧಿ ಅವನಿಗೆ ಗೋಚರಿಸಿರಲಿಲ್ಲ. ಅಲ್ಲಮನು ಅವನ ತೋಟದ ಹೆಂಟೆಯೊಂದನ್ನು ಓಸರಿಸಿ ಅಲ್ಲಿರುವ ಶಿಖರವನ್ನು ತೋರಿಸಿದ. ಇಬ್ಬರೂ ಸೇರಿ ಅಲ್ಲಿ ಅಗೆದಾಗ ಸಮಾಧಿ ಸ್ಥಾನವೊಂದು ಗೋಚರಿಸಿತು. ದೇಗುಲದ ಒಳಗೆ ಹೋದಾಗ ಅನಿಮಿಷಯ್ಯನೆಂಬ ಶಿವಯೋಗಿ ಧ್ಯಾನ ತಲ್ಲೀನನಾಗಿರುವುದು ಕಂಡಿತು. ಅನಿಮಿಷಯ್ಯನ ಜೀವಕಳೆ ಅಲ್ಲಮನಲ್ಲಿ ಲೀನವಾಯಿತು. ಇದೆಲ್ಲವನ್ನೂ ಕಂಡ ಗೊಗ್ಗಯ್ಯ ನಿಬ್ಬೆರಗಾದ. ಅಲ್ಲಮನನ್ನು ಪರಿಪರಿಯಾಗಿ ಹೊಗಳಿದ:

ದೀನ ಮನದವನಂತೆ ಕಂಡನಿ
ಧಾನವನು ತಾನೊಬ್ಬ ನುಂಬನೆ
ದಾನಿ ಲೇಸೈ ನಿನ್ನಪರಿ ನೀಕಂಡಶಿವ ಪಥವ
ಮಾನವರಿಗರುಹೆಂಬ ಮಹದಭಿ
ಮಾನಿ ನೀನೇ ಜಗದ ಗುರುವೆಂ
ದಾ ನಿರುಪಮಾನನಲ್ಲಮನ ಹೊಗಳಿದನು ಗೊಗ್ಗಯ್ಯ

ಮಣ್ಣು ಮುಚ್ಚಿದ ಅನಿಮಿಷಯ್ಯನ ದೇಗುಲದಂತೆ ಮರವೆ ಕವಿದ ಮಾನವನ ಬದುಕು ಎಂಬುದನ್ನು ಇಡೀ ಪ್ರಸಂಗ ತೋಟಿಗ ಗೊಗ್ಗಯ್ಯನ ನೆಪದಲ್ಲಿ ಹೇಳುತ್ತದೆ. ಗೊಗ್ಗಯ್ಯನು ಅಲ್ಲಮನಿಗೆ ಹೇಳುವ ಮಾತುಗಳು ಅವನ ವ್ಯಕ್ತಿತ್ವದ ಕಾರಣಿಕತನವನ್ನು ಬಹು ಸೊಗಸಾಗಿ ವಿವರಿಸುತ್ತವೆ.

ಪ್ರಭುದೇವರನ್ನು ಬಿಟ್ಟರೆ ಆ ಕಾಲದ ಶಿವಶರಣರಲ್ಲಿ ದೊಡ್ಡ ವ್ಯಕ್ತಿ ಯಾದವನು ಬಸವಣ್ಣ. ಆತನ ದಾಸೋಹ ಮತ್ತು ಜಂಗಮ ಪ್ರೀತಿ ದಿಕ್ಕು ದಿಕ್ಕಿಗೆ ಹಬ್ಬಿತ್ತು. ಲಕ್ಷಾಂತರ ಜಂಗಮರಿಗೆ ಉಣಬಡಿಸಿ ತೃಪ್ತಿ

ಪಡಿಸುವ ಛಲ ಆತನದು. ಇದೂ ಒಂದು ಅಹಂಕಾರವಾದೀತೆಂದು ಯೋಚಿಸಿದ ಅಲ್ಲಮ ವೇಷಾಂತರದಿಂದ ಕಲ್ಯಾಣಕ್ಕೆ ಬರುತ್ತಾನೆ; ಹುಚ್ಚನಂತೆ ಪ್ರಕಟವಾಗುತ್ತಾನೆ. ಶೂನ್ಯ ಸಿಂಹಾಸನವನ್ನು ವಿರಚಿಸಿ ಅದನ್ನು ಆರೋಹಿಸಲು ತಕ್ಕ ಗುರುವಿಗಾಗಿ ನಿರೀಕ್ಷಿಸುತ್ತಿದ್ದ ಬಸವಣ್ಣನಿಗೆ ಈ ಮಹಾವ್ಯಕ್ತಿಯ ಗುರುತು ಹತ್ತುತ್ತದೆ. 'ನೆಲನ ಮರೆಯೊಳಿಹ ನಿಧಾನದ ಹೊಲಬ ನಂಜನವಿಡಿದು ಕಣ್ಣೆನಬಲುಹ ನುಳ್ಳವ' ಕಾಣುವಂತೆ, ಆತನನ್ನು ಭಕ್ತಿಯಿಂದ ಬರಮಾಡಿಕೊಂಡು ಶೂನ್ಯಪೀಠವನ್ನು ಒಪ್ಪಿಸಿದ. ಯಾವನೋ ದೇಸಿಗ ಜಂಗಮನಿಗೆ ಮರುಳಾಗಿ ತಮ್ಮೆಲ್ಲರನ್ನೂ ನಿರ್ಲಕ್ಷಿಸಿದನೆಂಬ ಊಟ ಬಿಟ್ಟು ಕೆಲ ಜಂಗಮರು ದೂರ ಹೋದರು. ಆರೋಗಣೆಗೆ ಆರಂಭವಾಯಿತು. ಬಸವಣ್ಣನಿಗೆ ಕವಿದಿದ್ದ ದಾಸೋಹ ಭ್ರಮೆ, ಅವನ ಮೇಲೆ ಮುನಿಸಿಕೊಂಡಿದ್ದ ಜಂಗಮರಿಬ್ಬರಿಗೂ ಒಂದೇ ಪವಾಡದಿಂದ ಅಲ್ಲಮ ಬುದ್ಧಿ ಕಲಿಸುತ್ತಾನೆ. ಲಕ್ಷಾಂತರ ಮಂದಿಗೆ ತಯಾರಿಸಿದ ಭಕ್ಷ್ಯ ಭೋಜ್ಯಗಳನ್ನು ಕೊಪ್ಪರಿಗೆ ಕೊಪ್ಪರಿಗಳಲ್ಲಿ ತಂದು ಉಣಬಡಿಸಿದರೂ ಅಲ್ಲಮನ ಹಸಿವೆ ಹಿಂಗಲಿಲ್ಲ. ಆಕಾಶವೇ ಬಾಯ್ದೆರೆದು ಜೀರ್ಣಿಸಿ ಕೊಳ್ಳತೊಡಗಿದರೆ ಯಾರು ಬಡಿಸಲು ಸಾಧ್ಯ ? ಆಗ ಬಸವಣ್ಣನಿಗೆ ಅರಿವು ಮೂಡಿತು. ಭಕ್ತಿಯಿಂದ ತೃಪ್ತಿಪಡಿಸಬಹುದೇ ಹೊರತು ಭುಕ್ತಿಯಿಂದಲ್ಲವೆಂಬುದು ಸ್ಪಷ್ಟವಾಗಿ ಗೊತ್ತಾಯಿತು. ಅಲ್ಲಮನಿಗೆ ಸಿಕ್ಕ ಸತ್ಕಾರದಿಂದ ಕೋಪಗೊಂಡ ಕೆಲ ಜಂಗಮರು ಮುನಿಸುಕೊಂಡಿದ್ದರು ತಾನೆ ? ಅವರಿಗೆ ಅಲ್ಲಮನ ಊಟ ಮುಗಿದ ತಕ್ಷಣ ಹೊಟ್ಟೆ ತುಂಬಿ ತೇಗು ಬರಲಾರಂಬಿಸಿದುವಂತೆ. ತಾವು ಊಟ ಮಾಡದಿದ್ದರೂ ಅವರು ತೃಪ್ತಿಯಾದರು. ತಾಯಿ ಮಾಡಿದ ಊಟ ಬಸಿರಲ್ಲಿದ್ದ ಶಿಶುವಿಗೆ ಸೇರುವಂತೆ ಇದರ ಪರಿ ಎಂದು ಅವರು ಹೇಳಿದರು.

ಚಾಮರಸನು ಅಲ್ಲಮನ ವ್ಯಕ್ತಿಮಹಿಮೆಯನ್ನು ಪರಿಚಯಿಸಲು ಸೃಷ್ಟಿಸಿಕೊಂಡಿರುವ ಈ ಬಗೆಯ ಪ್ರಸಂಗಗಳಿಗೆ ಪ್ರೇರಣೆ ಅವನಿಗಿಂತ ಹಿಂದೆ ಇದ್ದ ಕವಿಗಳಿಂದ ಶೂನ್ಯ ಸಂಪಾದನಕಾರರಿಂದ ದೊರೆಯಿತು, ನಿಜ. ಆದರೆ ಅದನ್ನೆಲ್ಲಾ ತನ್ನ ಎರಕಕ್ಕೆ ಹೊಯ್ದು ಹೊಸ ಪರಿಯ ಸೊಬಗನ್ನು ಆತ ಇಂಥ ಕಡೆ ನಿರ್ಮಾಣಮಾಡಿದ್ದಾನೆ. ಹಾಗೆ ನೋಡಿದರೆ ಪಂಪ, ಕುಮಾರ ವ್ಯಾಸ, ಹರಿಹರ, ರಾಘವಾಂಕರೂ ಈಗಾಗಲೇ ಇದ್ದ ವಸ್ತುವನ್ನೆ ಬಳಸಿಕೊಂಡಿರುವುದು. ಸಂಸ್ಕೃತ ಮಹಾಭಾರತವೂ ಅನೇಕ ಮೂಲಗಳಿಂದ

ಒಗ್ಗೂಡಿ ಮಹಾ ಪ್ರವಾಹವಾಯಿತು. ತಾವು ಪಡೆದ ಪರಂಪರಾಗತ ವಸ್ತುವಿಗೇ ಒಬ್ಬೊಬ್ಬ ಕವಿಯೂ ಒಂದು ಹೊಸ ಮೆರುಗು ಕೊಡುತ್ತಾನೆ. ಹೊಸ ಬಗೆಯಲ್ಲಿ ವ್ಯಾಖ್ಯಾನಿಸುತ್ತಾನೆ. ಹೊಸ ರೀತಿಯಲ್ಲಿ ಸೃಷ್ಟಿಸುತ್ತಾನೆ. ಅವರು ಸಾಧಿಸಿದ ಸಿದ್ಧಿಯ ಮಟ್ಟಗಳು ಮುಟ್ಟಿದ ನೆಲೆಗಳು ಬೇರೆ ಬೇರೆ ಇರಬಹುದು.

3

ಪ್ರಭುಲಿಂಗಲೀಲೆಯ ಸಾಂಕೇತಿಕತೆ ಸಂಪೂರ್ಣವಾಗಿ ಚಾಮರಸನ ಕಲ್ಪನೆ. ಬಿಡಿಯಾದ ಘಟನೆಗಳಿರಲಿ, ಇಡೀ ಕಾವ್ಯವೇ ಒಂದು ಸಂಕೇತ ದಂತಿದೆ. ಇದೇನೂ ಅಪ್ರಜ್ಞಾಪೂರ್ವಕವಾದುದಲ್ಲ. ಪ್ರಜ್ಞಾಪೂರ್ವಕ ವಾಗಿಯೇ ಕವಿ ಕಾವ್ಯಶಿಲ್ಪವನ್ನು ಹೀಗೆ ಕಡೆದಿದ್ದಾನೆಂಬುದೇ ಇಲ್ಲಿನ ವಿಶೇಷ ವಿಚಾರ. ಅಲ್ಲಮಪ್ರಭುವಿನ ಬೆಡಗಿನ ವಚನಗಳಂತೆ ಚಾಮರಸನ ಅಲ್ಲಮ ಪಾತ್ರರಚನೆಯೂ ಸಂಕೇತರಮ್ಯವಾಗಿದೆ.

ಪ್ರಭುಲಿಂಗಲೀಲೆ ಆರಂಭವಾಗುವುದು ಕೈಲಾಸದಲ್ಲಿ ; ಮುಕ್ತಾಯ ಗೊಳ್ಳುವುದೂ ಕೈಲಾಸದಲ್ಲಿಯೇ. ಆರಂಭದಲ್ಲಿ ಪ್ರಭುವಿನ ಮಹಿಮೆಯನ್ನು ಸಂದೇಹಿಸಿದ ಪಾರ್ವತಿ ಕೊನೆಗೆ ಒಪ್ಪಿಕೊಳ್ಳುತ್ತಾಳೆ. ಇದರ ಮಧ್ಯೆ ಬರುವ ಘಟನೆಗಳೂ ಪಾತ್ರಗಳೂ ಎಲ್ಲವೂ ಒಂದೊಂದು ಸಂಕೇತಗಳು. ತನ್ನ ಕಲ್ಪಿತ ಪಾತ್ರಗಳಿಗೆ ಹೆಸರು ಕೊಡುವಾಗಲೂ ಚಾಮರಸ ಪ್ರಜ್ಞಾ ಪೂರ್ವಕವಾಗಿಯೇ ಯೋಚಿಸಿದ್ದಾನೆ. ಸುಜ್ಞಾನಿ ನಿರಹಂಕಾರರ ಮಗ ಅಲ್ಲಮ. ಮಮಕಾರ ಮೋಹಿನಿಯರ ಮಗಳು ಮಾಯೆ ; ಇವರಿಗೆ ಗುರು ಅಹಂಕಾರಾರ್ಯ. ಮಾಯಾದೇವಿಯ ಒಬ್ಬ ಗೆಳತಿಯ ಹೆಸರು ಮದಮಾನಿ, ಮತ್ತೊಬ್ಬಳು ನಿರ್ಮಳೆ. ಅಕ್ಕಮಹಾದೇವಿಯ ತಂದೆ ತಾಯಿಗಳ ಹೆಸರು ನಿರ್ಮಳ ಮತ್ತು ಸುಮತಿ.

ಪಾರ್ವತಿಯ ತಾಮಸ ಕಳೆಯಾದ ಮಾಯೆ ಅಲ್ಲಮನಿಗೆ ಸೋಲುವುದು, ಸಾತ್ವಿಕ ಕಳೆಯಾದ ಅಕ್ಕಮಹಾದೇವಿ ಅನುಗ್ರಹ ಹೊಂದುವುದು ಇಡೀ ಕಾವ್ಯದ ಪ್ರಮುಖ ಸಂಕೇತ. ಸಾತ್ವಿಕ ಶಕ್ತಿಯ ಮುಂದೆ ತಾಮಸ ಶಕ್ತಿ ಸೋಲುವುದಕ್ಕೆ ದೃಷ್ಟಾಂತವಾಗಿ ಪ್ರಭುಲಿಂಗಲೀಲೆಯಲ್ಲಿ ಮತ್ತೆ ಕೆಲವು ಪ್ರಸಂಗಗಳಿವೆ. ಸಿದ್ಧರಾಮ, ಗೋರಕ್ಷರ ಪ್ರಸಂಗಗಳನ್ನು ಹೇಳಬಹುದು. ಅಲ್ಲಮನ

ಹೊರತು ಪ್ರಭುಲಿಂಗಲೀಲೆಯಲ್ಲಿ ನಾವು ಕಾಣುವ ಎಲ್ಲ ಶರಣರೂ ಮಾಯೆಯ ಆವರಣದಲ್ಲಿಯೇ ಇದ್ದವರು. ಈ ಮಾಯೆ ಅಥವಾ ಮೋಹ, ದೇಗುಲವನ್ನು ಕಟ್ಟುವ ಚಪಲವಾಗಿ ಒಬ್ಬನನ್ನು ಕಾಡಿರಬಹುದು ; ಸೋದರ ಪ್ರೇಮವಾಗಿ ಮತ್ತೊಬ್ಬಳಿಗೆ ಮತಿಗೆಡಿಸಿರಬಹುದು ; ಮಣ್ಣ ಮೋಹವಾಗಬಹುದು ; ದಾಸೋಹ ಭ್ರಮೆಯಾಗಿರಬಹುದು ಅಥವಾ ಶರೀರವನ್ನು ವಜ್ರಮಾಡಿಕೊಂಡ ಹಠವಾಗಿರಬಹುದು. ಈ ಆವರಣದ ಹೊರಗಿದ್ದವರು ಮರುಳುಶಂಕರದೇವನಂತಹ ಗುಪ್ತ ಭಕ್ತರು. ಲೋಕಕ್ಕೆ ಹುಚ್ಚರಂತೆ ತೋರಿ ಅಂತರಂಗವನ್ನು ಹಸನು ಮಾಡಿಕೊಂಡವರು. ಪ್ರಭುದೇವರು ಮಾತ್ರ ಈ ಎಲ್ಲ ಶರಣರಿಗೂ ಕವಿದಿದ್ದ ಮಾಯೆಯನ್ನು ಹೋಗಲಾಡಿಸಿದರು ; ಆವರಣವನ್ನು ಸರಿಸಿ ಬಯಲಿಗರನ್ನಾಗಿಸಿದರು. ಈ ಅರ್ಥದಲ್ಲಿಯೇ ಆತ ಮಾಯಾ ಕೋಲಾಹಲ. ಕೇವಲ ಮಾಯೆಯನ್ನು ಗೆದ್ದವನು ಎಂಬ ಸಂಕುಚಿತ ಅರ್ಥದಲ್ಲಿ ಮಾತ್ರ ಅಲ್ಲ.

ಆದುದರಿಂದ ಚಾಮರಸನ ಪ್ರಭುಲಿಂಗಲೀಲೆ ಒಂದು ಸಾಂಕೇತಿಕ ಮಹಾಕಾವ್ಯವಾಗಿದ್ದು ರಚನೆಯ ದೃಷ್ಟಿಯಿಂದ ಅಲ್ಲಿ ಕಂಡುಬರುವ ಪ್ರಜ್ಞಾಪೂರ್ವಕವಾದ ಕಲೆಗಾರಿಕೆ ಅಸದೃಶ್ಯವಾದುದು.

ಅಲ್ಲಮಪ್ರಭುವಿನ ತಾತ್ವಿಕ ನಿಲುವು ಪ್ರಶ್ನಾತೀತವೇನಲ್ಲ. ಲೌಕಿಕವಾಗಿ ಯೋಚಿಸಿದಾಗ ತೋಟಿಗ ಗೊಗ್ಗಯ್ಯನಿಗೆ ಆತ ಮಾಡಿದ ಉಪದೇಶ, ಸಿದ್ಧರಾಮನನ್ನು ಕೆರೆಕಟ್ಟುವ ಒಡ್ಡನೆಂದು ಜರೆದದ್ದು ಪ್ರತಿಕ್ರಿಯಾತ್ಮಕವಾಗಿವೆ. ಆರ್ಥಿಕ ಸಾಮಾಜಿಕ ದೃಷ್ಟಿಗೆ ಅಲ್ಲಮಪ್ರಭುವಿನ ಅಂತರಂಗ ಸಾಧನೆಗಿಂತ ಸಿದ್ಧರಾಮನ ಮತ್ತು ತೋಟಿಗ ಗೊಗ್ಗಯ್ಯನ ಬಾಹ್ಯ ಸಾಧನೆಗಳು ದೊಡ್ಡವಾಗುತ್ತವೆ, ಪ್ರಯೋಜನಕಾರಿಯಾಗಿವೆ. ಆದರೆ ಆ ಕಾಲದ ಶರಣರೆಲ್ಲ ಅಲ್ಲಮನನ್ನು ತಮ್ಮ ಆಧ್ಯಾತ್ಮಿಕ ಗುರುವೆಂದೇ ಗ್ರಹಿಸಿದ್ದರು. ಕಾಯಕ ತತ್ತ್ವವನ್ನು ಒಪ್ಪಿಕೊಂಡೇ, ಅಂತರಂಗ ಸಾಧನೆಯಲ್ಲಿ ಮುಂದುವರಿದ ಅವರು ಆಧ್ಯಾತ್ಮ ಸಾಧನೆ ಲೌಕಿಕ ಸಾಧನೆಗಿಂತ ದೊಡ್ಡದೆಂದು ತಿಳಿದವರು. ಶ್ರಮಜೀವನ ಮತ್ತು ದುಡಿಮೆಗಳಿಗೆ ಗೌರವವಿದ್ದರೂ ಅದರಾಚೆ ಇರುವ ಪರತತ್ತ್ವವನ್ನು ಅರಿಯಲು ತವಕಿಸಿದವರು. ಅಂತಹ ಶುದ್ಧ ಭಕ್ತರಿಗೆ ಸರಿಯಾದ ಗುರುವಿನ ಮಾರ್ಗದರ್ಶನ ದೊರೆತದ್ದು ಅಲ್ಲಮನ ನಿಮಿತ್ತದಿಂದ. ಆದರೆ ಅಲ್ಲಮನಲ್ಲಿ ಮಾತ್ರ ತಾನೊಬ್ಬ ಗುರು, ಮಹಾತ್ಮ ಎಂಬ ಅರಿವಿನ ಲವಲೇಶವೂ

ಇದ್ದಂತಿಲ್ಲ. 'ಹಿರಿಯರಸು ಸತ್ಕರಿಸಿ ಮಿಕ್ಕಾದವರನು ಧಿಕ್ಕರಿಸುವುದು ಯೋಗೀಶ್ವರರಿಗನುಚಿತವೆಂಬರೈ ರಾಮಯ್ಯ' ಎಂದು ಸಿದ್ಧರಾಮನಿಗೆ ಆತ ಹೇಳುತ್ತಾನೆ. ಆಕಾಶದೆತ್ತರದ ವ್ಯಕ್ತಿಯಾದರೂ ಮಾನವ ಸಹಜವಾಗಿ ನಡೆದದ್ದೇ ಆತನ ವೈಶಿಷ್ಟ್ಯ.

4

ಚಾಮರಸನ ಭಾಷಾ ಶೈಲಿ ಹಲವು ವಿಧದಲ್ಲಿ ಕುಮಾರವ್ಯಾಸನಿಗೆ ಹತ್ತಿರವಾದುದು. "ಭಾಮಿನಿ ಷಟ್ಪದಿಯ ನಿರರ್ಗಳವಾದ ಬಳಸುವಿಕೆಯಲ್ಲಿಯೂ ರೂಪಕ ಸಂಪತ್ತಿಯಲ್ಲಿಯೂ ಕುಮಾರವ್ಯಾಸನೂ ಚಾಮರಸನೂ ಒಂದೇ ಒಕ್ಕಲಿನವರು. ಅಷ್ಟಾದಶ ವರ್ಣನೆಗಳ ವಿಷಯದಲ್ಲಿ ಇಬ್ಬರೂ ಸಂಪ್ರದಾಯ ವಿಮುಖಿರು. ಸಂದರ್ಭವಶವಾಗಿ ಬಂದ ವರ್ಣನೆಯನ್ನು ಔಚಿತ್ಯವರಿತು ಮಾಡುತ್ತಾರೆ. ವರ್ಣನೆ ಬರಲೇಬೇಕೆಂದು ಸಂದರ್ಭವನ್ನು ಹಿಡಿದು ತರುವುದಿಲ್ಲ."[4]

ಮಾಯಾದೇವಿಯ ಬಾಲ್ಯವರ್ಣನೆ ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಸಹಜ ಸುಂದರವಾದ ಒಂದು ಭಾಗ.

ಶಿಶುವ ನೋಡಿದ ಕಣ್ಗೆ ಮಾಯವೆ
ಮುಸುಕುವುದು ಮನ ಮೆಚ್ಚುವುದು ಮೋ
ಹಿಸುವುದೀ ಪರಿ ಜನನಿಜನಕಾದ್ಯರುಗಳೆಲ್ಲರಿಗೆ
ವಸುಮತೀಪತಿ ಬಳಿಕಲತಿ ಸಂ
ತಸದೊಳಾತ್ಮಜೆಗಖಿಳ ವಿಭವದಿ
ಹೆಸರನಿಟ್ಟನು ಮಾಯೆಯೆಂಬ ನವೀನ ನಾಮವನು

ಹಲಗೆ ಮಾಣಿಕದೊಟ್ಟಲಲಿ ಮ
ಗ್ಗುಲಿಸಿ ಮಲಗಿ ನಿರೀಕ್ಷಿಸುತ ಮಾ
ರ್ಪೊಳೆವ ತನ್ನನೆ ಕಂಡು ನಲಿವುತ ನಗುತ ಕೈದುಡುಕಿ
ಸೆಳೆದು ತೆಗೆದೊಡೆ ಬಾರದಿರಲಾ
ನೆಳಲನೊದೆವುತ ಕಾಲಗೆಜ್ಜೆಗ
ಳುಲುಹನಾಲಿಪ ಮಾಯೆ ಮೆರೆದಳು ಬಾಲಲೀಲೆಯಲಿ

ಮಗುವಿನ ಸಹಜ ಚೇಷ್ಟೆಗಳನ್ನು ಯಾವುದೇ ಅಲಂಕಾರಗಳನ್ನು ಬಳಸದೆ ಸುಂದರವಾಗಿ ವರ್ಣಿಸುವ ಮೇಲಿನ ಪದ್ಯದಂತಹ ಉದಾಹರಣೆಗಳು ಇತರ

ಕವಿಗಳಲ್ಲಿ ಸಿಗುವುದು ವಿರಳ. ಪ್ರಕೃತಿ ವರ್ಣನೆಯಲ್ಲಿ ಚಾಮರಸ ಸಾಮಾನ್ಯ ವಾಗಿ ಆಸಕ್ತಿತೋರುವುದಿಲ್ಲ. ಆದರೆ ಆಕಸ್ಮಾತ್ತಾಗಿ ಅತ್ತ ಕಡೆ ಅವನು ಕಣ್ಣು ಹೊರಳಿಸಿದರೆ ಹೇಗೆ ಜೀವ ತುಂಬಿದ ಚಿತ್ರವನ್ನು ಕೊಡುತ್ತಾನೆನ್ನಲು ಒಂದು ಉದಾಹರಣೆಯನ್ನು ನೋಡಬಹುದು. ಶ್ರೀಗಿರಿಯನ್ನು ಕುರಿತು ಪಯಣಿಸು ತ್ತಿದ್ದ ಅಲ್ಲಮನು ಪ್ರವೇಶಿಸಿದ ಕಾಡಿನ ಗಿಡ ಮರಗಳ ಮತ್ತು ಗಿರಿ ಶಿಖರಗಳ ವರ್ಣನೆ :

ನಡೆವ ಲತೆಗಳು ನಗುವ ಗಿಡುಗಳು
ನುಡಿವ ಶಿಲೆಗಳು ತೇಜದಿಂದುರಿ
ಯಿಡುವ ತರುಗಳು ದಿವ್ಯರುಚಿಗಳನೀವ ಗುಲ್ಮಗಳು
ಕುಡಿದಡಂತಃಕರಣ ಶುದ್ಧಿಯ
ಕೊಡುವ ಮಡುಗಳು ಜಾತಿ ವೈರವ
ತೊಡದ ಖಗ ಮೃಗ ಮೆರೆದವಾಸಿರಿಗಿರಿಯಶಿಖರದಲಿ

ಏರಿ ನೋಡಲು ಸತ್ಯಲೋಕಕೆ
ಹಾರಿಸುವ ಗಿರಿ ಶಿಖರಗಳು ಮಿಗೆ
ಮೀರಿ ಹೊಕ್ಕಡೆ ಸಪ್ತ ಪಾತಾಳದ ಸಘಾಡಿಕೆಯ
ತೋರಿಸುವ ಬಿಂಕದ ಬಿಲಂಗಳು
ಸಾರಿ ಸಾಧಕರೇನ ಬಗೆದುದ
ಹೇರಿ ಕೊಡುವ ಸುವಸ್ತುವಿರ್ದವು ಪರ್ವತಾಗ್ರದಲಿ

ಪವಿತ್ರವಾದ ಪರಿಸರ, ದಿವ್ಯೌಷಧಿಗಳನ್ನು ಗರ್ಭೀಕರಿಸಿಕೊಂಡ ಅಡವಿ, ಭವ್ಯ ವಾದ ಗಿರಿ ಶಿಖರ ಕೊಳ್ಳಗಳು—ಇದನ್ನೆಲ್ಲಾ ಸರಳವಾಗಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ಈ ಪದ್ಯಗಳಲ್ಲಿ ಚಾಮರಸನು 'ನಡೆವ ಲತೆಗಳು', 'ನಗುವ ಗಿಡು ಗಳ'ನ್ನು ಉಲ್ಲೇಖಿಸಿ ತನ್ನ ಪ್ರಕೃತಿ ಪ್ರೇಮದ ತನ್ಮಯತೆಯನ್ನು ಪರಿಚಯ ಮಾಡಿಕೊಟ್ಟಿದ್ದಾನೆ.

ಷಟ್ಪದಿಕಾರರಲ್ಲಿ ಕುಮಾರವ್ಯಾಸನನ್ನು ಬಿಟ್ಟರೆ ರೂಪಕ ನಿರ್ಮಾಣ ಕುಶಲತೆಯಲ್ಲಿ ಚಾಮರಸನೇ ಮೇಲುಗೈ. 'ದೇವ ದಾನವ ಮಾನವರುಗಳ ಗಾವಣೆಯ ದನಮಾಡಿ ಕಟ್ಟುವ ಭಾವೆ', 'ತಮುವ ತರಣಿಯನೊಂದುಗೂಡು ವೆವೆಂಬ ಭಾವ ಭ್ರಮಿತ ಬುದ್ಧಿಯಲಿ', 'ಭಾಸ್ಕರನ ಬಟ್ಟೆಗೆ ದೀವಿಗೆಯ ಹಂಗೇಕೆ', 'ದ್ಯುಮಣಿಯಲ್ಲಮ ಸಿಕ್ಕದಾದನು ತಮದಮಾಯೆಗೆ' ಎಂಬಂತಹ ಕೆಲವು ಉದಾಹರಣೆಗಳು ಈ ಮಾತನ್ನುಸ್ಪಷ್ಟಪಡಿಸುತ್ತವೆ. ಸಾದೃಶ್ಯಗಳ ಕಲ್ಪನೆ

ಮತ್ತು ಉಪಮೆಗಳಲ್ಲಿಯೂ ಚಾಮರಸನದು ಸಹಜ ಕುಶಲತೆಯೆಂಬುದನ್ನು ಮನಗಾಣಬಹುದು. 'ಹಾಯೆ ಬರಲೆದ್ದೋಡಿದರು ಹುಲಿಗಂಡ ಹುಲ್ಲೆಗಳಂತೆ' 'ಬೆಂದ ಹುಣ್ಣನು ಕೀಸುವರೆ ಕಂಬಿಯಲಿ', 'ಹೂಳಿದರ್ಥವನರಸಿ ಹಡೆವನ ಕಾಲು ಕೊಂಡೊಯ್ವಂತೆ', 'ತಾಯುಮಾರಿಯೆ ತೊತ್ತಕೊಂಬ ವಿಡಾಯವನು ಸುಡು', 'ಕಬ್ಬ ನಿಚ್ಚಿಗೆ ಬಿದಿರ ಮೆಲುವಂತೆ', 'ಬಿಡದೆ ಅರಸುವ ಬಳ್ಳಿ ಕಾಲನು ತೊಡರಿತೆಂಬಂತೆ', 'ಹಾವಿನಡಿಯನು ಹಾವುಬಲ್ಲುವಲ್ಲದೆ', ನಮಗೆ ಗೋಚರವೆ', 'ಹರಿಗಲನು ಚೋಕೈಸಿ ಕೊಳುತಲಿ ತೊರೆಯ ದಾಂಟುವವರಂತೆ'-ಇಂತಹ ನೂರಾರು ಉದಾಹರಣೆಗಳನ್ನು ಕೊಡಬಹುದು. ಗಾದೆ ನುಡಿಗಳು ಆತನ ಕಾವ್ಯದಲ್ಲಿ ಸೂರೆಯಾಗಿಹೋಗಿವೆ. 'ತರಳೆ ತನ್ನಯ ಹೊನ್ನು ಸಲ್ಲದೆ ತಿರುಗಿ ಬಂದಡೆ ಅಕ್ಕಸಾಲೆಯ ದುರುಳತನದಲಿ ಬಯ್ಯಲಹುದೇ', 'ಬಡವನ ಕೋಪ ದವಡೆಗೆ ಕೇಡ ತಹವೊಲು', 'ಬಿತ್ತಿ ಬೆಳೆಯದ ಮುನ್ನ ಮೊಳಕೆಯ ಕಿತ್ತು ನೋಡುವರೇ, 'ಹಾಲು ಹಯನುಳ್ಳಲ್ಲಿ ಹೇಳದೆ ಕೇಳದೆ ಹಬ್ಬವನು ಸವಿವುದು' 'ಗಾಳಿ ಬೀಸುವ ದಿನದಲೇ ತೂರುವುದು ಹೊಟ್ಟುಗಳ'. ಆಡು ಮಾತನ್ನು ಪದ್ಯದ ಲಯದಲ್ಲಿ ಇಷ್ಟೊಂದು ಸಹಜವಾಗಿ ತೂರಿಬಿಡುತ್ತಾನೆಂಬುದು ಇಲ್ಲಿ ಗಮನಿಸಬೇಕಾದ ವಿಚಾರ. ಕುಮಾರವ್ಯಾಸನಂತೆ ಚಾಮರಸನಲ್ಲಿಯೂ 'ಗಾರು ದೂರಿನ ಮಾಯೆ ಗೀಯಗೆ,' 'ಮಗಳು ಮದ್ದಳೆಯವನ ಬೆನ್ನಲಿ ಜಗುಳಿ ಹೋದುದ ಕೇಳಿ', 'ನೆಲದೊಡೆಯ ನಾನೆಂಬ ಗರ್ವದ ಬಲುಹು ಗಿಲಹನು ಮಾಡಿದಡೆ ಕೇಳೆಲಗೆ', 'ಎಮ್ಮರಿವುಗಿರಿವಿನ ಸಲುಗೆ ಸಲ್ಲದು'-ಎಂಬಂತಹ ಗ್ರಾಮ್ಯ ಪ್ರಯೋಗಗಳು ಹೇರಳವಾಗಿ ಸಿಗುತ್ತವೆ. ದೇಸಿಯ ಚೆಲುವು, ಪ್ರಾಸಾನುಪ್ರಾಸಗಳ ಸುಂದರ ನಿರ್ಮಿತಿಗೆ ಸಾಕ್ಷಿಯಾಗಿ ಒಂದು ಪದ್ಯವನ್ನು ಉದಾಹರಿಸಬಹುದಾಗಿದೆ. ಮಾಯಾದೇವಿಗೆ ಅಲ್ಲಮನ ಗುರುತು ಹತ್ತಿದ ಸಂದರ್ಭ, ವಿಮಳೆಯ ಕಣ್ಸನ್ನೆಯಿಂದ ಗೊತ್ತಾಗಿ ಕ್ರಮೇಣ ಅವಳ ಮನಸ್ಸಿನಲ್ಲಿ ನಿಚ್ಚಳವಾಗುವ ಕ್ರಮವನ್ನು ಕವಿ ಇಲ್ಲಿ ಹೇಳುತ್ತಾನೆ :

ಬಳಿಕ ಮಾಯಾಂಗನೆಯ ಮನಸಿಗೆ
ತಿಳಿವು ತಿಣ್ಣನೆ ತಿಟ್ಟವಿಟ್ಟಿತು
ಹೊಳಹು ಹೊಮ್ಮಿತು ತನ್ನ ಪೂರ್ವದ ಕಥನ ಕಾರಣದ
ಬೆಳವಿಗೆಗೆ ಬೆದೆಯಾಯ್ತು ನೆನಹಿನ
ನೆಳಲು ಮಿಂಚಿದುದೊಳಗೊಳಗೆ ನಿ
ರ್ಮಳರ ಸಂಗವು ಕಳೆಯದಿಹುದೇ ಮನದ ಮೈಲಿಗೆಯ

ಶ್ಲೇಷೆಯು ಕಾವ್ಯಕ್ಕೆ ತಂದುಕೊಡುವ ಸೊಗಸನ್ನು ಚಾಮರಸನು ಬಹು ಸೊಗಸಾಗಿ ಬಳಸಿಕೊಂಡಿದ್ದಾನೆ. ಬೆಡಗಿನ ವಚನಕಾರ ಅಲ್ಲಮನ ಮಾತುಗಳು ಹೇಗಿದ್ದಿರಬೇಕೆಂಬುದನ್ನು ಊಹಿಸಿಕೊಳ್ಳಲು ಅವು ಸಹಾಯ ಮಾಡುತ್ತವೆ :

ಮಾಯೆಯುಗಲಿದ ಬಳಿಕ ಭಾವಿಸೆ
ಕಾಯವುಂಟೇ ಪ್ರಾಣವಾಗಿಹ
ವಾಯು ನಡೆವುದೆ ಕಾಲು ಕೈ ಕಣ್ಣುಗಳು ಮಿಡುಕುವುವೆ
ಬಾಯ ನುಡಿವೆವಹಾರ ಬೆಸನಗ
ಳಾಯತವು ಬಳಿಕುಂಟೆ ಮರುಳೇ
ಸಾಯದಂತಿರೆ ಸತ್ತೆ ನಾನಕಟೆಂದನಲ್ಲಮನು

'ಶಿವ ಕಾಮ ತತ್ವ'ದ ದ್ವಂದ್ವವನ್ನು ಹೇಳುವ ಈ ಮಾತುಗಳು ಮಾಯೆಯ ಸಖಿಯರಿಗೆ ಕೊಟ್ಟ ಅರ್ಥವೇ ಬೇರೆ. ತಮ್ಮ ಒಡತಿಯನ್ನು ಕುರಿತು ಅಲ್ಲಮನಿಗೆ ಪ್ರೇಮವಿದೆಯೆಂದು ಅವರು ಭಾವಿಸುತ್ತಾರೆ. ಪ್ರಭುಲಿಂಗ ಲೀಲೆಯಲ್ಲಿ ಇಂಥ ಅನೇಕ ಪದ್ಯಗಳಿವೆ. ಅಲ್ಲಮನು ತನ್ನ ತಾಯಿ ತಂದೆಗಳಾದ ಸುಜ್ಞಾನಿ ನಿರಹಂಕಾರರನ್ನು ಬೀಳ್ಕೊಡುವಾಗ ಹೇಳುವ ಮಾತುಗಳೂ ಇದೇ ರೀತಿ ದ್ವಂದ್ವಾರ್ಥದಿಂದ ರಂಜಿಸುತ್ತವೆ.

ಭಕ್ತ ಕವಿಯಾದ ಚಾಮರಸ ತಾನು ಭಗವಂತನ ಕೈಯ್ಯಲ್ಲಿನ ಉಪಕರಣ ಮಾತ್ರವೆಂದು ಭಾವಿಸಿದ್ದ. ಪ್ರಭುಲಿಂಗಲೀಲೆಯ ರಚನೆ ತನ್ನಿಂದಾಯಿತೆಂಬ ಹೆಮ್ಮೆ ಅವನಿಗಿಲ್ಲ.

ದೇಗುಲವೆ ಮಾತಾಡುವಂದದೊ
ಳಾಗಿರದೆ ಒಳಗಿರ್ದು ನುಡಿವಡೆ
ಲೋಗರಿಗೆ ಪ್ರತಿಶಬ್ದದಿಂದಾ ಪರಿಯಲೆನ್ನೊಳಗೆ
ಲಾಗಿನಿಂದನಲಿ ಗುರುಗುಹೇಶ್ವರ
ನಾಗಳೆನ್ನನು ನುಡಿಸಿದಡೆ ನುಡಿ
ದಾಗು ಮಾಡಿಯೆ ಪೇಳ್ದೆನೀ ಪ್ರಭುಲಿಂಗಲೀಲೆಯನು

ಎಂಬ ಅರಿವಿನಿಂದಲೇ ಇರಬೇಕು ಆತ ಸ್ವವಿಷಯವನ್ನು ಹೇಳಿಕೊಳ್ಳದಿರುವುದು. ತನ್ನ ಬಗ್ಗೆ ನಿರಭಿಮಾನಿಯಾಗಿದ್ದರೂ ತನ್ನ ಕಾವ್ಯದ ವಸ್ತುವನ್ನು ಕುರಿತು ಆತ ಮಹಾ ಅಭಿಮಾನಿಯಾಗಿದ್ದಾನೆ. ಮಹಾಭಾರತದಂತಹ ಲೌಕಿಕ

ಕಾವ್ಯಗಳನ್ನು ಬರೆದ ಕವಿಗಳನ್ನು ಅದರಲ್ಲಿಯೂ ಕುಮಾರವ್ಯಾಸನನ್ನು ಅತ ಹಂಗಿಸುವ ಧ್ವನಿಯನ್ನು ಅಲ್ಲಿ ಗುರುತಿಸಬಹುದು:

ಸತ್ತವರ ಕಥೆಯಲ್ಲಿ ಜನನದ
ಕುತ್ತದಲಿ ಕುದಿಕುದಿದು ಕರ್ಮದ
ಕತ್ತಲೆಗೆ ಸಿಲುಕುವವರ ಸೀಮೆಯ ಹೊಲಬುತಾನಲ್ಲ
ಹೊತ್ತು ಹೋಗದೆ ಪುಂಡರಾಲಿಪ
ಮತ್ತ ಮತಿಗಳ ಗೋಷ್ಠಿಯಲ್ಲಿದು
ಸತ್ಯಶರಣರು ತಿಳಿವುದೀ ಪ್ರಭುಲಿಂಗಲೀಲೆಯನು

"ಪ್ರಭುಲಿಂಗಲೀಲೆ ಕನ್ನಡ ಸಾಹಿತ್ಯದಲ್ಲಿ ಒಂದು ಉತ್ತಮ ಕಾವ್ಯ ವಾಗಿದೆ. ಅದಕ್ಕಿಂತ ಪ್ರೌಢವಾದ ಗ್ರಂಥಗಳನ್ನು ವೀರಶೈವ ಕವಿಗಳಲ್ಲಿಯೇ ಇತರರು ರಚಿಸಿರಬಹುದು. ಆದರೆ ಯೋಗಿ ಶ್ರೇಷ್ಠನಾದ ಒಬ್ಬ ಅವತಾರ ಪುರುಷನ ಜೀವನ ಚರಿತ್ರೆಯನ್ನೂ ಆತನ ಬೋಧೆಗಳನ್ನೂ ಸರಸವಾಗಿ ಕಾವ್ಯ ರೂಪದಲ್ಲಿಡುವುದು ಹೇಗೆಂಬುದನ್ನು ಚಾಮರಸನು ತೋರಿಸಿರುವಂತೆ ಇತರ ವೀರಶೈವ ಪುರಾಣ ಕವಿಗಳು ತೋರಿಸಿಲ್ಲ"[5] ವೆಂಬ ಅಭಿಪ್ರಾಯವು ವೀರಶೈವ ಕವಿಗಳಲ್ಲಿ ಚಾಮರಸನ ಸ್ಥಾನವೇನೆಂಬುದನ್ನು ನಿರ್ದೇಶಿಸುತ್ತದೆ. ಕನ್ನಡದ ಕೆಲವೇ ಶ್ರೇಷ್ಠ ಕವಿಗಳ ಸಾಲಿಗೆ ಚಾಮರಸನೂ ಸೇರುತ್ತಾನೆಂಬುದನ್ನು ಒಪ್ಪಿಕೊಂಡು ವೀರಶೈವ ಕವಿಗಳ ಮಟ್ಟಿಗೆ ಮೇಲೆ ಹೇಳಿರುವ ಮಾತುಗಳನ್ನು ಅಂಗೀಕರಿಸಬಹುದಾಗಿದೆ.

ಅಡಿ ಟಿಪ್ಪಣಿಗಳು

1 ಎಂ. ಚಿದಾನಂದಮೂರ್ತಿ : ಶೂನ್ಯ ಸಂಪಾದನೆಯನ್ನು ಕುರಿತು, ಪು. 31
2 ಎಲ್. ಬಸವರಾಜು : ಶೂನ್ಯ ಸಂಪಾದನೆ, ಪು. 56
3 ಎಂ. ಚಿದಾನಂದಮೂರ್ತಿ : ಶೂನ್ಯ ಸಂಪಾದನೆಯನ್ನು ಕುರಿತು, ಪು. 53
4 ರಂ. ಶ್ರೀ. ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಪು. 359
5 ಎಂ. ಆರ್. ಶ್ರೀನಿವಾಸಮೂರ್ತಿ : ಪ್ರಭುಲಿಂಗ ಲೀಲೆಯ ಸಂಗ್ರಹ, ಪು. 62

## ಕೆಲವು ಷಟ್ಪದಿಕಾರರು

ಹಿಮಾಲಯದ ಪರ್ವತ ಶ್ರೇಣಿಯಲ್ಲಿ ಮುಗಿಲು ಮುಟ್ಟುವ ಅತಿ ಎತ್ತರದ ಶಿಖರಗಳು ಕೆಲವು. ಉಳಿದವು ಮಧ್ಯಮ ಸಾಧಾರಣ ಎತ್ತರದವು. ಮೈಲಿ ಮೈಲಿಗಳವರೆಗೆ ಹಬ್ಬಿರುವ ಈ ಪರ್ವತ ಶ್ರೇಣಿಯಲ್ಲಿ ಎಲ್ಲಕ್ಕೂ ಮಹತ್ವವುಂಟು. ಅಲ್ಲದೆ ಚಿಕ್ಕ ಶಿಖರಗಳಿರುವುದರಿಂದಲೇ ದೊಡ್ಡ ಶಿಖರಗಳ ಎತ್ತರ ಸ್ಫುಟವಾಗಿ ಕಾಣುವುದು.

ಯಾವುದೇ ಸಾಹಿತ್ಯ ಪರಂಪರೆಯಲ್ಲಿಯೂ ಸಹ ಉತ್ತಮ ಕವಿಗಳಿರುವಂತೆ ಅತ್ಯುತ್ತಮ ಕವಿಗಳೂ ಇರುತ್ತಾರೆ; ಸಾಧಾರಣ ಕವಿಗಳಂತೂ ಇರಲೇಬೇಕು; ಕನ್ನಡದ ಷಟ್ಪದಿ ಕಾವ್ಯ ಪರಂಪರೆಯಲ್ಲಿ ರಾಘವಾಂಕ, ಕುಮಾರವ್ಯಾಸ, ಚಾಮರಸ, ಲಕ್ಷ್ಮೀಶರಂತಹ ಶ್ರೇಷ್ಠ ಕವಿಗಳಿರುವಂತೆ ಈ ಪರಂಪರೆಗೆ ವಿಸ್ತಾರ ವೈವಿಧ್ಯಗಳನ್ನು ತಂದು ಕೊಟ್ಟಿರುವ ನೂರಾರು ಕವಿಗಳಿದ್ದಾರೆ. ಅವರಲ್ಲಿ ಉತ್ತಮರಾದ ಕೆಲವರನ್ನು ಈ ಅಧ್ಯಾಯದಲ್ಲಿ ಪರಿಚಯಿಸಿದ್ದೇವೆ. ಕುಮಾರವ್ಯಾಸನಿಂದ ಲಕ್ಷ್ಮೀಶನವರೆಗೆ ಆಗಿ ಹೋದ ಎರಡು ಶತಮಾನಗಳ ಕಾಲದಲ್ಲಿ ಬಂದ ಕವಿಗಳು ಮಾತ್ರ ಇಲ್ಲಿ ಸೇರ್ಪಡೆಯಾಗಿದ್ದಾರೆ. ಈ ಕಾಲದಲ್ಲಿಯೇ ಅತಿ ಹೆಚ್ಚು ಸಂಖ್ಯೆಯ ಷಟ್ಪದಿ ಕಾವ್ಯಗಳು ಬಂದಕಾರಣ ಇದನ್ನು ಷಟ್ಪದಿಯ ಸುಗ್ಗಿಯ ಕಾಲವೆಂದು ಬೇಕಾದರೆ ಕರೆಯಬಹುದು.

ಭಾಸ್ಕರನು ಹದಿನೈದನೆ ಶತಮಾನದ ಆರಂಭ ಕಾಲದಲ್ಲಿದ್ದ ಒಬ್ಬ ಜೈನ ಕವಿ. ಆತನ ಕೃತಿ 'ಜೀವಂಧರ ಚರಿತೆ'. ಈತನ ತಂದೆ ಬಸವಣಾಂಕ. ಆಂಧ್ರ ಪ್ರದೇಶದ ಹಿಂದೂಪುರ ಜಿಲ್ಲೆಯ ಪೆನುಗೊಂಡೆ, ಈತನ ಸ್ಥಳ. ಅಲ್ಲಿನ ಶಾಂತಿನಾಥನ ಬಸದಿಯಲ್ಲಿ 'ಜೀವಂಧರ ಚರಿತೆ' ಬರೆದನಂತೆ.

'ಜೀವಂಧರ ಚರಿತೆ'ಯ ಕಥಾವಸ್ತು ಸಂಸ್ಕೃತ, ತಮಿಳು, ಪ್ರಾಕೃತಗಳಲ್ಲಿ ಪ್ರಸಿದ್ಧವಾದುದು. ಕನ್ನಡದಲ್ಲಿಯೂ ಐದು ಗ್ರಂಥಗಳು ಜೀವಂಧರ ಚರಿತೆಗೆ ಸಂಬಂಧಪಟ್ಟಂತೆ ಇರುವುದನ್ನು ವಿದ್ವಾಂಸರು ತೋರಿಸಿದ್ದಾರೆ. ಭಾಸ್ಕರನ 'ಜೀವಂಧರ ಚರಿತೆ'ಯೇ ಅವುಗಳಲ್ಲಿ ಮೊದಲನೆಯದು. ಉಳಿದವು ಆಮೇಲೆ ಬಂದಿವೆ.

ವಾದಿ ಮದಗಜ ಸಿಂಹ ಸೂರಿಗ
ಳಾದಿಯಲಿ ನವ ಸಂಸ್ಕೃತದೆ ಸಂ
ಪಾದಿಸಿದ ಭೂವಿನುತ ಜೀವಂಧರನ ಚರಿತವನು
ವೇದಿಸುವೆನುರು ಭಾಮಿನಿಯ ಷ
ಟ್ಪಾದದಿಂ ಕನ್ನಡದೊಳೊಲಿದಿದ
ನಾದರಿಸಿ ಕೇಳುವುದು ಭವ್ಯ ಸಮೂಹವೊಲವಿನಲಿ

ಎಂದು ಕವಿಯೇ ಹೇಳುವುದರಿಂದ ಈ ಕೃತಿಗೆ ಮೂಲ ಪ್ರೇರಣೆ ಸಂಸ್ಕೃತ ದಿಂದ, ವಾದಿ ಮದಗಜನಾದ ಸಿಂಹಸೂರಿಯ ಕೃತಿಯಿಂದ ಬಂದಿದೆ.

"ಈಗ ದೊರೆತಿರುವ ಜೀವಂಧರನ ಚರಿತೆಯನ್ನೊಳಗೊಂಡ ಅತೀ ಪ್ರಾಚೀನ ಗ್ರಂಥವೆಂದರೆ ಕ್ರಿ.ಶ. 897ರಲ್ಲಿ ಬಾಳಿದ ಗುಣಭದ್ರಾಚಾರ್ಯರ ಉತ್ತರ ಪುರಾಣವಾಗಿದೆ... ಇದಕ್ಕೂ ಪೂರ್ವದಲ್ಲಿ ಲಿಖಿತವಾದ ಜೀವಂಧರನ ಕಥೆ ಸಿಕ್ಕುತ್ತಿಲ್ಲವಾದರೂ, ಈ ಕಥೆಯ ಬೇರುಗಳು ಗುಣಾಢ್ಯನ ಬೃಹತ್ಕಥೆ ಯಲ್ಲಿರಬಹುದೆಂದೂ, ಪೈಶಾಚಿ ಭಾಷೆಯಲ್ಲಿದ್ದ ಗ್ರಂಥವನ್ನು ಗುಣಭದ್ರಾ ಚಾರ್ಯರು ನೋಡಿರುವ ಶಕ್ಯತೆ ಇದೆಯೆಂದೂ ಎ. ಎನ್. ಉಪಾಧ್ಯೆ ಅವರು ಹರಿಶ್ಚಂದ್ರನ ಜೀವಂಧರ ಚಂಪೂ ಗ್ರಂಥಕ್ಕೆ ಬರೆದ ಮುನ್ನುಡಿಯಲ್ಲಿ ಸೂಚಿಸಿದ್ದಾರೆ."[1]

ಜೀವಂಧರನ ತಂದೆ ಸತ್ಯಂಧರ, ಕಾಷ್ಠಾಂಗನೆಂಬ ಕಟ್ಟಿಗೆ ಮಾಡುವವ ನೊಬ್ಬನ ಬುದ್ಧಿ ಚಾತುರ್ಯವನ್ನು ಮೆಚ್ಚಿ ತನ್ನ ಮಂತ್ರಿಯನ್ನಾಗಿ ಮಾಡಿ ಕೊಂಡ. ನೆರಳು ಕೊಡುವ ಮರವನ್ನೇ ಕಡಿಯುತ್ತಿದ್ದ ಈ ಕಾಷ್ಠಾಂಗ ತನಗೆ ಆಶ್ರಯಕೊಟ್ಟ ರಾಜನನ್ನು ಕೊಂದು ತಾನೇ ರಾಜನಾದ. ತಬ್ಬಲಿಯಾದ ಜೀವಂಧರನು ಆ ಊರಿನ ವಣಿಕನೊಬ್ಬನ ಮನೆಯಲ್ಲಿ ಗುಪ್ತವಾಗಿ ಬೆಳೆದು ಕಾಲಾಂತರದಲ್ಲಿ ಕಾಷ್ಠಾಂಗನನ್ನು ಕೊಂದು ರಾಜ್ಯವನ್ನು ಮರಳಿ ಪಡೆಯು ತ್ತಾನೆ. ವೃದ್ಧನಾದ ಮೇಲೆ ರಾಜ್ಯವನ್ನು ಮಕ್ಕಳಿಗೆ ಒಪ್ಪಿಸಿ ಸನ್ಯಾಸ ದೀಕ್ಷೆ ಪಡೆಯುತ್ತಾನೆ.

ಇಷ್ಟು ಸ್ಥೂಲಕಥೆಗೆ ಭಾಸ್ಕರನು ಅನೇಕಾನೇಕ ಪ್ರಸಂಗಗಳನ್ನು ಜೋಡಿಸಿದ್ದಾನೆ. ವರ್ಣನೆಗಳಿಗೆ ಅವಕಾಶ ಮಾಡಿಕೊಂಡಿದ್ದಾನೆ. ಕಥಾ ನಾಯಕನ ಜಾಡನ್ನೇ ಹಿಡಿದು ಕಥೆ ಮುಂದುವರಿಯುತ್ತದೆಯಾದರೂ ಕ್ರಮಬದ್ಧ ಬೆಳವಣಿಗೆಯಿಲ್ಲ. ಸಲೀಲವಾದ ಓಟವಿಲ್ಲ. ಜೀವಂಧರನು ಮದುವೆಯಾಗುವ ಎಂಟು ಜನ ಹೆಣ್ಣುಗಳಿಗೂ ಪ್ರತ್ಯೇಕ ಪ್ರತ್ಯೇಕ ಪ್ರಸಂಗ ಗಳಿವೆ. ಅತಿ ದೀರ್ಘವಾದ ಜನಪದ ಕತೆಯೊಂದು ಹೇಗೆ ಸುತ್ತಿ ಬಳಸಿ ಮುಂದೆ ಸಾಗುತ್ತದೆಯೋ ಹಾಗೆ ಇಲ್ಲಿ ಕಥಾರಚನೆ.

ಭಾಸ್ಕರನ ಮೇಲೆ ತನಗಿಂತ ಹಿಂದೆ ಇದ್ದ ಕವಿಗಳ ಪ್ರಭಾವವಾಗಿದೆ ಯೆಂಬುದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಆದರೆ ಇದು ಕೇವಲ ಪ್ರಭಾವವಾಗಿರದೆ ಅಲ್ಲಿನ ನುಡಿಗಳನ್ನು, ಇಡೀ ಪದ್ಯ ಪದ್ಯಗಳನ್ನು ಇಲ್ಲಿಗೆ ಸ್ಥಳಾಂತರಿಸುವುದಾಗಿರುವುದರಿಂದ ಮತ್ತೇನಾದರೂ ಹೆಸರು ಕೊಡುವುದು ಉಚಿತವಾಗುತ್ತದೆ ; ಕೃತಿ ಚೌರ್ಯವೆನ್ನಬೇಕು. ರಾಘವಾಂಕನ ಎಷ್ಟೋ ಪ್ರಸಿದ್ಧ ನುಡಿಗಳು ಇಲ್ಲಿ ಸ್ವಲ್ಪ ವ್ಯತ್ಯಾಸದೊಡನೆ ನುಸುಳಿಕೊಂಡಿವೆ. 'ಕೃತಿಗೆ ನಾಮಂ ಹರಿಶ್ಚಂದ್ರ ಚಾರಿತ್ರ'. 'ನಡೆವರೆಡಹದೆ ಕುಳಿತರೆಡಹುವರೆ', 'ಪುರದ ಪುಣ್ಯಂ ಪುರುಷ ರೂಪಿಂದೆ ಹೋಗುತಿದೆ' ಮುಂತಾದ 'ಹರಿಶ್ಚಂದ್ರ ಕಾವ್ಯ'ದ ಸಾಲುಗಳು ಇಲ್ಲಿ ಹೀಗೆ ಶೋಭಿಸಿವೆ. ಕುಮಾರವ್ಯಾಸನಿಂದ ಆತ ಪಡೆದಿರುವ ಸಾಲವಂತೂ ಅವನ ಸ್ವಂತಿಕೆಯನ್ನು ಸಂದೇಹಪಡುವಷ್ಟು ಅಗಾಧವಾಗಿದೆ. 'ಭಾಸ್ಕರ ಕವಿಯ ಜೇಬಿನಲ್ಲಿ ಕುಮಾರವ್ಯಾಸನ ನಾಣ್ಯಗಳು' ಎಂಬ ಒಂದು ದೀರ್ಘ ಲೇಖನವನ್ನೇ ವಿದ್ವಾಂಸರೊಬ್ಬರು ಪ್ರಕಟಿಸಿ ದ್ದಾರೆ.[2] ಆದರೆ ಭಾಸ್ಕರನಿಗೆ ಮಾತ್ರ ಈ ಉಪಕಾರ ಸ್ಮರಣೆಯಿಲ್ಲವೆನ್ನು ವುದು ತೀರಾ ಶೋಚನೀಯ ಸಂಗತಿ. ನೇಮಿ, ಗುಣವರ್ಮ, ನಾಗವರ್ಮ, ವಿಜಯ, ಗಜಾಂಕುಶ – ಇತ್ಯಾದಿ ಕವಿಗಳನ್ನು ಹೊಗಳಿರುವ ಈ ಕವಿ ಅಪ್ಪಿ ತಪ್ಪಿಯೂ ಪಂಪ, ರನ್ನ, ನಾಗಚಂದ್ರ, ಹರಿಹರ, ರಾಘವಾಂಕ, ಕುಮಾರ ವ್ಯಾಸರ ಹೆಸರು ಎತ್ತಿಲ್ಲ. ಆದರೆ ಇವರೆಲ್ಲರಿಂದಲೂ ನಿರಾತಂಕವಾಗಿ ದೋಚಿದ್ದಾನೆ.

ಲಕ್ಕಣ್ಣ ದಂಡೇಶನು ಕ್ರಿ.ಶ. 1416-1446ರವರೆಗೆ ವಿಜಯನಗರದ ಅರಸನಾಗಿದ್ದ ಪ್ರೌಢ ದೇವರಾಯನಲ್ಲಿ ಪ್ರಧಾನ ಸಚಿವನಾಗಿದ್ದವನು. ಆತನ ಕೃತಿ 'ಶಿವತತ್ವ ಚಿಂತಾಮಣಿ'. ತನ್ನ ಸಮಕಾಲೀನ ಇತಿಹಾಸದಲ್ಲಿ ರಾಜಕೀಯ

ಕಾರಣಕ್ಕಾಗಿ ಮಹತ್ವ ಪಡೆದಿರುವ ಈ ವ್ಯಕ್ತಿ ಅಷ್ಟೇ ಮಹತ್ವವನ್ನು ಧಾರ್ಮಿಕ ಮತ್ತು ಸಾಹಿತ್ಯ ಕ್ಷೇತ್ರದಲ್ಲಿಯೂ ಪಡೆದಿರುವುದು ಆತನ ಬಹು ಮುಖ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ. ತಮಿಳುನಾಡು ಮತ್ತು ಕನ್ನಡ ನಾಡಿನಲ್ಲಿ ಈತನನ್ನು ಕುರಿತ ಹತ್ತಾರು ಶಾಸನಗಳಿವೆಯಂತೆ. ಈತನ ಹೆಸರಿನ ಅಂಕಿತವುಳ್ಳ ನಾಣ್ಯಗಳು ಸಿಕ್ಕಿವೆ. ಅಬ್ದುಲ್ ರಜಾಕ್ ಎಂಬ ವಿದೇಶಿ ಪ್ರವಾಸಿ ಈತನ ಹೆಸರನ್ನು ಉಲ್ಲೇಖಿಸಿದ್ದಾರೆ.

ಪ್ರೌಢ ದೇವರಾಯನ ಕಾಲದಲ್ಲಿ ವೀರಶೈವ ಧರ್ಮಕ್ಕೆ ವಿಶೇಷವಾದ ಪ್ರೋತ್ಸಾಹ ದೊರೆಯಿತು. ಅವನ ಕಾಲದಲ್ಲಿದ್ದ ನೂರೊಂದು ವಿರಕ್ತರು ಪ್ರಸಿದ್ಧ ಶರಣರು. ಹನ್ನೆರಡನೆಯ ಶತಮಾನದ ವಚನ ಯುಗವನ್ನು ಬಿಟ್ಟರೆ ಈ ಕಾಲ ಧಾರ್ಮಿಕವಾಗಿ ಮಹತ್ವಪೂರ್ಣವಾದುದು. ವೀರಶೈವ ಧರ್ಮವನ್ನು ಸೈದ್ಧಾಂತಿಕವಾಗಿ ಪ್ರತಿಪಾದಿಸುವ ಮತ್ತು ಶರಣರ ವಚನಗಳ ಸಂಪಾದನೆ ಮತ್ತು ಸಂಕಲನಗಳ ಕೆಲಸ ಹೆಚ್ಚು ನಡೆಯಿತು.

ಲಕ್ಕಣ ದಂಡೇಶನ 'ಶಿವತತ್ವ ಚಿಂತಾಮಣಿ' ವೀರಶೈವ ಸಿದ್ಧಾಂತವನ್ನು ನಿರೂಪಿಸುವ ಕೃತಿ ವಾರ್ಧಕ ಷಟ್ಪದಿಯಲ್ಲಿದೆ. ಚಿಂತಾಮಣಿಯೆನ್ನುವ ರತ್ನ ಹೇಗೆ ಕೇಳಿದ ವಸ್ತುವನ್ನೆಲ್ಲಾ ಕೊಡುತ್ತದೆಯೋ ಹಾಗೆ ಶಿವತತ್ವಕ್ಕೆ ಸಂಬಂಧಿಸಿದ ಎಲ್ಲ ಸಂಗತಿಗಳಿಗೂ 'ಶಿವತತ್ವ ಚಿಂತಾಮಣಿ' ಆಕರ ಗ್ರಂಥವಾಗಿದೆ. ಈ ಅರ್ಥದಲ್ಲಿ ಇಟ್ಟಿರುವ ಹೆಸರು ಸಾರ್ಥಕವಾಗಿದೆಯೆನ್ನುವುದರಲ್ಲಿ ಸಂದೇಹವೇ ಇಲ್ಲ. ವೇದ, ಶಿವಾಗಮಗಳು, ಶಿವನ ಇಪ್ಪತ್ತೈದು ಲೀಲೆಗಳು, ಗಣಂಗಳ ಚರಿತ್ರೆ, ವೀರಶೈವ ಶಿವಶರಣರ ಕಥೆಗಳು, ಅರವತ್ತುಮೂರು ಪುರಾತನರ ಶಿವಭಕ್ತಿ ನಿಷ್ಠೆ, ಪಂಚಾಕ್ಷರೀ ಭಸಿತಾದಿಗಳ ಮಹಿಮೆ, ಲಿಂಗಧಾರಣ, ಶಿವಪೂಜಾವಿಧಾನ, ಷಟ್ಸ್ಥಲ ಸಿದ್ಧಾಂತ–ಮುಂತಾದ ಅನೇಕಾನೇಕ ಸಂಗತಿಗಳಿಂದ ಕೂಡಿದ ಕೃತಿ ವೀರಶೈವ ಧರ್ಮದ ವಿಶ್ವಕೋಶದಂತಿದೆ. ಆದರ್ಶ ವೀರಶೈವ ಪುರಾಣವೊಂದರ ರಚನಾಪದ್ಧತಿಯನ್ನು 'ಶಿವತತ್ವ ಚಿಂತಾಮಣಿ'ಯಲ್ಲಿ ಸ್ಪಷ್ಟವಾಗಿ ಕಾಣಬಹುದೆಂದು ಎಲ್ಲ ವಿದ್ವಾಂಸರೂ ಕೊಂಡಾಡಿದ್ದಾರೆ.

ಶಾಸ್ತ್ರ ವಿಷಯಗಳನ್ನು ಕಾವ್ಯರೂಪದಲ್ಲಿ ಆಸ್ವಾದ್ಯವಾಗುವಂತೆ ರಚಿಸುವುದು ಸಾಮಾನ್ಯವಾಗಿ ನಮ್ಮ ಹಿಂದಿನ ಕವಿಗಳ ಒಂದು ರೂಢಿ. 'ಶಿವತತ್ವ ಚಿಂತಾಮಣಿ' ಪ್ರಧಾನವಾಗಿ ಧಾರ್ಮಿಕ ಮಹತ್ವವುಳ್ಳ ಶಾಸ್ತ್ರ

ಗ್ರಂಥವಾದರೂ ಅಲ್ಲಿ ಬರುವ ಕಥಾನಕಗಳಲ್ಲಿ ಲಕ್ಕಣ ದಂಡೇಶನ ಕಾವ್ಯ ಮನೋಧರ್ಮವನ್ನು ಗುರುತಿಸಬಹುದಾಗಿದೆ. ಮೂರು ಸಂಧಿಗಳಲ್ಲಿ ಬಂದಿರುವ ಬಸವಣ್ಣನವರ ವೃತ್ತಾಂತವನ್ನು ಕವಿ ಸಾಕಷ್ಟು ಕುಶಲತೆಯಿಂದ ನಿರೂಪಿಸಿದ್ದಾನೆ.

ಲಕ್ಕಣದಂಡೇಶನೂ ಉಳಿದ ಕವಿಗಳಂತೆಯೇ ಬಸವಣ್ಣನು ನಂದಿಯ ಅವತಾರವೆಂದೇ ಹೇಳುತ್ತಾನೆ. ಕಲಿಯುಗದಲ್ಲಿ ನರಜನ್ಮ ಅತಿ ಕಷ್ಟವಾಗಿರುವಾಗ ತನ್ನಂತಹ ಸಾಮಾನ್ಯನು ಧರ್ಮವನ್ನು ಪಾಲಿಸಲು ಸಾಧ್ಯವೇ ಎಂದು ನಂದಿ ಕೈಲಾಸದಲ್ಲಿಯೇ ಸಂದೇಹಪಟ್ಟನಂತೆ. ಆದರೂ ಶಿವನು ಅವನಿಗೆ ಅಭಯವಿತ್ತು ವೀರಶೈವ ಧರ್ಮದ ಉದ್ಧಾರಕ್ಕಾಗಿ ಭೂಮಿಯಲ್ಲಿ ಅವತರಿಸಲು ಬಸವನನ್ನು ಕಳುಹಿಸಿದನು. ತಾನೂ ಜಂಗಮನಾಗಿ ಹಲವು ನಾಮಾಂತರಗಳಿಂದ ಆತನನ್ನು ಹಿಂಬಾಲಿಸಿದನು.

ಬಸವಣ್ಣ ಬಾಗೇವಾಡಿಯ ಮಾದಿರಾಜ ದಂಪತಿಗಳಿಗೆ ಮಗನಾಗಿ ಹುಟ್ಟುತ್ತಾನೆ. ಶಿವನೇ ಹುಟ್ಟಿದ ಮಗುವಿಗೆ ಪಂಚಾಕ್ಷರೀ ಮಂತ್ರವನ್ನು ಉಪದೇಶಿಸಿದನು. ತಾಯಿ ತಂದೆಗಳೂ ಈ ಕಾರಣಿಕ ಶಿಶುವನ್ನು ಅಕ್ಕರೆಯಿಂದ ಬೆಳಸುತ್ತಾರೆ. ಅವನಿಗೆ ಎಂಟು ವರ್ಷವಾದಾಗ ಉಪನಯನ ಮಾಡಲು ಪ್ರಯತ್ನಿಸಿದರು. ಆದರೆ ಬಸವಣ್ಣ ವಿರೋಧಿಸಿದ ಆತನ ವಾದ ಹೀಗಿದೆ :

ನಿತ್ಯ ತೃಪ್ತಂಗೆಯಾರೋಗಣೆಯ ಹಂಗೇಕೆ
ಸತ್ವ ಸನ್ನಿಹಿತಂಗೆ ತಪದ ಬಳಲಿಕೆಯೇಕೆ
ಮತ್ತೆ ಕೇಳಮೃತಮಂ ಸೇವಿಸುವ ದೇಹಿಗಂ ವ್ಯಾಧಿ ಪೀಡಿಸಲರಿವರೆ
ಉತ್ತಮ ಶಿವಾಚಾರ ಸಂಪನ್ನನೆನಿಪ ಗುರು
ವಿತ್ತ ಸಂಗಯ್ಯನುಪದೇಶಮಂ ಬಾಲ್ಯದಲಿ
ಯುಕ್ತವಲ್ಲೆನಗೆ ಉಪನಯನವೆಂದೆಂಬಿನ ಚರಣಾಂಬುಜಕ್ಕೆ ಶರಣು

ತಂದೆ ತಾಯಿಗಳಿಗೆ ಶಿವಧರ್ಮವನ್ನುಪದೇಶಿಸಿ ಸದಾ ಶಿವ ಸೇವೆಯಲ್ಲಿದ್ದ ಬಸವಣ್ಣನು ಮುಂದೆ ನಡೆದ ಒಂದು ಚಿಕ್ಕ ಘಟನೆಯಿಂದಾಗಿ ಊರು ಬಿಟ್ಟು ಸಂಗಮೇಶ್ವರಕ್ಕೆ ಬಂದು ನೆಲಸುತ್ತಾನೆ. ಆತನ ಕೀರ್ತಿಯನ್ನು ಕೇಳಿ ಕಲ್ಯಾಣದ ಬಲದೇವ ದಂಡೇಶನು ಕರೆಸುತ್ತಾನೆ. ಪೂರ್ವ ಸಂಬಂಧವಿರುವುದನ್ನು ತಿಳಿಸಿ ಮಗಳನ್ನು ಕೊಟ್ಟು ಮದುವೆ ಮಾಡುತ್ತಾನೆ. ಬಿಜ್ಜಳನ ಸಭೆಯಲ್ಲಿ ಯಾರೂ ಓದಲಾಗದ ಓಲೆಯೊಂದನ್ನು ಬಸವಣ್ಣನು ಓದಿ

ಸಿಂಹಾಸನದ ಕೆಳಗಿದ್ದ ಅರವತ್ತಾರು ಕೋಟಿ ಧನವನ್ನು ತೆಗೆದುಕೊಟ್ಟನು. ಇದರಿಂದ ಪ್ರಭಾವಿತನಾದ ಬಿಜ್ಜಳನು ಆತನನ್ನು ತನ್ನ ಪ್ರಧಾನ ಮಂತ್ರಿಯನ್ನಾಗಿ ಮಾಡಿಕೊಳ್ಳುತ್ತಾನೆ. ಜಂಗಮ ಪೂಜೆ, ದಾಸೋಹಗಳಲ್ಲಿ ತನ್ಮಯನಾಗಿ ವೀರಶೈವ ಧರ್ಮವನ್ನು ಮೆರೆಸುತ್ತಿದ್ದ ಬಸವಣ್ಣನು ಅನೇಕ ಪವಾಡಗಳನ್ನೂ ಮಾಡುತ್ತಾನೆ. ಈ ಸಂಗತಿಗಳನ್ನೆಲ್ಲಾ ಸಾಕಷ್ಟು ಪಳಗಿದ ಕಥನಕಾರನಂತೆ ಕವಿ ನಿರೂಪಿಸಿದ್ದಾನೆ. ಶಾಸ್ತ್ರ ವಿಷಯ ನಿರೂಪಣೆಯಲ್ಲಿಯಂತೂ ಆತನ ಶೈಲಿ ಪ್ರಥಮ ತರಗತಿಯದು.

ಬಸವಣ್ಣನಲ್ಲದೆ ನೂರಾರು ಶಿವಶರಣರ ವೃತ್ತಾಂತಗಳು, ಅದಕ್ಕೂ ಮಿಗಿಲಾದ ಐತಿಹಾಸಿಕ ಸ್ಥಳಗಳು ಮತ್ತು ಇತ್ತೀಚಿನ ಪ್ರೌಢ ದೇವರಾಯನ ಕಾಲದ ನೂತನ ಶರಣರ ವಿಚಾರಕ್ಕೂ ಇಲ್ಲಿ ಎಡೆ ದೊರೆತಿದೆ. ಹೀಗಾಗಿ ವೀರಶೈವ ಧರ್ಮದ ಇತಿಹಾಸವನ್ನು ಬರೆಯುವವರಿಗೆ 'ಶಿವತತ್ವ ಚಿಂತಾಮಣಿ' ಒಂದು ಗಣಿಯಿದ್ದಂತೆ. "ಶಿವತತ್ವವೆಂಬ ಮಹೋದಧಿಯಲ್ಲಿ ಲಕ್ಕಣದಂಡೇಶನು ಕಡೆದು ಪಡೆದ ಪಾತ್ರಗಳು ಒಂದಲ್ಲ ಎರಡಲ್ಲ ನೂರಾರು. ಆ ದಿವ್ಯ ಪಾತ್ರಗಳ ಮೂಲಕ ಶಿವಾದ್ವೈತವೆಂಬ ಚಿಂತಾಮಣಿಯನ್ನು ಸಾಧಿಸಿದ್ದಾನೆ. ಹೀಗೆ ಹಲವಾರು ಪಾತ್ರಗಳು, ಕಥೆಗಳು, ಸನ್ನಿವೇಶಗಳು, ವರ್ಣನೆಗಳು, ಅಲಂಕಾರಗಳು ಎಂದು ಮುಂತಾಗಿ ಈ ಎಲ್ಲ 'ಕಾವ್ಯ ಕಟ್ಟುವ' ನಾಟಕವನ್ನಾಡಿದರೂ ಕವಿಯ ಮುಖ್ಯ ಧ್ಯೇಯ, ನಿರಂತರವೂ ಅಬಾಲ ವೃದ್ಧರನ್ನೂ ಪಂಡಿತ ಪಾಮರರನ್ನೂ ಅಂದಿನವರನ್ನೂ ಇಂದಿನವರನ್ನೂ ಮುಂದಿನವರನ್ನೂ ಶಿವಮಾರ್ಗದತ್ತ ಕೊಂಡೊಯ್ದು ಬದುಕಿಸಬೇಕೆಂಬುದೇ ಆಗಿದೆ".[3] ಮೇಲಿನ ವಿಮರ್ಶೆ ಭಾವುಕ ಉದ್ಗಾರಗಳಿಂದ ಕೂಡಿದ್ದರೂ 'ಶಿವತತ್ವ ಚಿಂತಾಮಣಿ'ಯನ್ನು ಕುರಿತು ಯಥಾರ್ಥವನ್ನೇ ಹೇಳುತ್ತಿದೆ.

ಲಕ್ಕಣ ದಂಡೇಶನ ಕಾಲದ ಹೊತ್ತಿಗೆ ವೀರಶೈವ ಧರ್ಮ ಒಂದು ರೂಢಿ ಬದ್ಧ ಪರಂಪರೆಯಾಗಿತ್ತು. ಆದುದರಿಂದಲೇ ಆ ಕಾಲದಲ್ಲಿ ಈ ಪರಂಪರೆಯನ್ನು ಸೈದ್ಧಾಂತಿಕವಾಗಿ ವಿವರಿಸುವ ಪ್ರಯತ್ನಗಳಿಗೆ ಮಹತ್ವ ದೊರೆತದ್ದು. ರೂಢಿ ಜಡವಾದ ಆಚಾರ ವಿಚಾರಗಳನ್ನು ವಿರೋಧಿಸಿ ಪ್ರಚಾರಕ್ಕೆ ಬಂದ ವೀರಶೈವ ಧರ್ಮ ಹೇಗೆ ಕಾಲಾಂತರದಲ್ಲಿ ಅದೇ ಶೃಂಖಲೆಗೆ ಮತ್ತೆ ಸಿಲುಕಿಕೊಂಡಿತೆಂಬುದನ್ನು ಮಾತ್ರ ಇನ್ನೂ ವಸ್ತುನಿಷ್ಠವಾಗಿ ವಿವರಿಸುವ ಪ್ರಯತ್ನ ನಡೆಯಬೇಕಾಗಿದೆ. ಈ ಬಗೆಯ ಸಂಶೋಧನೆಗಳಿಗೆ 'ಶಿವತತ್ವ

ಚಿಂತಾಮಣಿ' ಯಂಥ ಪ್ರಾಚೀನ ಆಕರ ಗ್ರಂಥಗಳು ಸಹಾಯವಾಗುತ್ತವೆ. ಸಾಂಸ್ಕೃತಿಕವಾಗಿ ಈ ಬಗೆಯ ಕೃತಿಗಳ ಮಹತ್ವ ಸಾಹಿತ್ಯ ಕೃತಿಗಳಿಗಿಂತ ಮಿಗಿಲಾದುದೆಂಬುದರಲ್ಲಿ ಸಂದೇಹವೇ ಇಲ್ಲ.

ಹದಿನೈದನೇ ಶತಮಾನದ ಹೊತ್ತಿಗೆ ವೀರಶೈವ ಧರ್ಮ, ವಚನಕಾರರು ತಿರಸ್ಕರಿಸಿದ್ದ ವೇದ ಉಪನಿಷತ್ತುಗಳನ್ನು ಪುರಸ್ಕರಿಸಿತು. ಲಕ್ಕಣ ದಂಡೇಶನ ಸಮಕಾಲೀನನೇ ಆಗಿದ್ದ ಗುರುಬಸವ ತನ್ನ 'ಮನೋವಿಜಯ'ವನ್ನು 'ವಿದಿತ ವೇದಾಗಮೋಕ್ತದೊಳುಪನಿಷತ್ತುಗಳೊದವಿಸಿದ ಸಮ್ಮತದ ಸಂಗ್ರಹವಿದು' ಎಂದು ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ.

ಗುರುಬಸವ ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರಲ್ಲಿ ಒಬ್ಬ. ಈತನಿಗೆ ಭಕ್ತ ಜನ ಮನೋಮಂದಿರ, ಶಿವಯೋಗಿಜನಸೇವಿತ ಚರಣಾರವಿಂದ, ವೀರಶೈವ ಮತಸ್ಥಾಪನಾಚಾರ್ಯ ಮುಂತಾದ ಬಿರುದುಗಳಿದ್ದವು. ತನ್ನ ಕಾಲದ ವೀರಶೈವ ಧರ್ಮಗುರುಗಳಲ್ಲಿ ಆತನಿಗೆ ಹಿರಿದಾದ ಸ್ಥಾನವಿದ್ದಿರಬೇಕೆಂದು ಇದರಿಂದ ಗೊತ್ತಾಗುತ್ತದೆ. ಯೋಗಿಗೆ ಸಹಜವಾದ ರೀತಿಯಲ್ಲಿ ಆತ ಸ್ವಂತ ವಿಚಾರವನ್ನೇನನ್ನೂ ತನ್ನ ಕಾವ್ಯಗಳಲ್ಲಿ ಹೇಳಿಕೊಂಡಿಲ್ಲ. ಈತನು ಶಿವಯೋಗಾಂಗ ಭೂಷಣ, ಸದ್ಗುರು ರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತ ಗೀತೆ, ಮನೋವಿಜಯ–ಹೀಗೆ ಏಳು ಕಾವ್ಯಗಳನ್ನು ರಚಿಸಿದ್ದು ಸಪ್ತಕಾವ್ಯದ ಗುರುಬಸವನೆಂದೇ ಪ್ರಖ್ಯಾತಿ ಹೊಂದಿದ್ದಾನೆ. ಎಲ್ಲವೂ ವೀರಶೈವ ವೇದಾಂತ ಪ್ರತಿಪಾದಕವಾಗಿಯೂ ಗುರುಶಿಷ್ಯ ಸಂವಾದರೂಪದಲ್ಲಿಯೂ ಇವೆ. ಇವುಗಳಲ್ಲಿ ಶಿವಯೋಗಾಂಗ ಭೂಷಣ ಮತ್ತು ಕಲ್ಯಾಣೇಶ್ವರ ಪರಿವರ್ಧಿನಿ ಷಟ್ಪದಿಯಲ್ಲಿಯೂ, ಸದ್ಗುರು ರಹಸ್ಯ ಮತ್ತು ಸ್ವರೂಪಾಮೃತ ಭಾಮಿನಿ ಷಟ್ಪದಿಯಲ್ಲಿಯೂ, ವೃಷಭಗೀತೆ ಭೋಗ ಷಟ್ಪದಿಯಲ್ಲಿ, ಮನೋವಿಜಯ ಕುಸುಮ ಷಟ್ಪದಿಯಲ್ಲಿ ರಚಿಸಲ್ಪಟ್ಟಿವೆ.

ಅನುಭಾವ, ಅಧ್ಯಾತ್ಮ ಮತ್ತು ಯೋಗದಂತಹ ಗಹನ ವಿಚಾರಗಳನ್ನು ಸಾಕಷ್ಟು ಸರಳವಾಗಿ ಸ್ವಾರಸ್ಯಕರವಾಗಿ ನಿರೂಪಿಸುವುದು ಗುರು ಬಸವನ ವೈಶಿಷ್ಟ್ಯ :

ನಳಿನ ಮಿತ್ರನ ಕಿರಣ
ತಳಿಗೆ ಯೋಳ್ಪೆಳಗಲದು
ತೊಳಗದೇ ಶತಗುಣೋತ್ತರಮದಾಗಿ
ಪಳಿವುಂಟೆ ರವಿಗೆ ಸಂ
ಚಳ ತಳಿಗೆಯಿಂದ್ಯೆಸೆ
ತಿಳಿವುದಾ ಪರಿಯ ಪರಮಾತ್ಮನಿರವ

ಇಂತಹ ಸರಳವಾದ ನಿರೂಪಣೆಗಳು ಒಳ್ಳೆಯ ಉಪಮೆ ಮತ್ತು ದೃಷ್ಟಾಂತಗಳಿಂದ ಹೆಚ್ಚು ಸ್ವಾರಸ್ಯವನ್ನು ಪಡೆಯುತ್ತವೆ :

ಕರ್ಪುರದ ಹೆಣ್ಣಗ್ನಿ ಪುರುಷನ
ನಪ್ಪಿದಾಕ್ಷಣ ನೋಡ ನೋಡಲಿ
ಕೊಪ್ಪಡಗಿ ಸಂದಳಿದು ನಿರ್ವಯಲಪ್ಪ ತರನಂತೆ
ತಪ್ಪದೀ ಸದ್ಗುರು ರಹಸ್ಯದೊ
ಳಿಪ್ಪ ಸುಕೃತಾರ್ಥವನು ವೇದಿಸು
ತಿಪ್ಪವರ ತನುವಳಿದು ಮನ ಮಹದೊಳಗೆ ಲಯವಹುದು

"ಸಪ್ತ ಕಾವ್ಯಗಳಲ್ಲಿ ಒಡೆದು ಕಾಣುವ ಇನ್ನೊಂದು ವೈಶಿಷ್ಟ್ಯವೆಂದರೆ ಗುರು ಬಸವನ ಸಂಗೀತ ಜ್ಞಾನ. ಶಾಸ್ತ್ರಕ್ಕೆ ಸಂಗೀತದ ಒಪ್ಪ ಬಿದ್ದರೆ ಕೇಳುವುದೇನು ? ಶಾಸ್ತ್ರವೂ ಸಹ ಕಾವ್ಯ ಗುಣವನ್ನು ಪಡೆಯುತ್ತದೆ. ಗುರು ಬಸವನು ಕನ್ನಡ ಪಕ್ಷಪಾತಿ. ಅವನಿಗೆ ಸಂಸ್ಕೃತದಲ್ಲಿ ಅಗಾಧ ಪಾಂಡಿತ್ಯವಿದ್ದರೂ ಕನ್ನಡವೆಂದರೆ ಅವನ ಮೈ ಉಬ್ಬುವಂತೆ ತೋರುತ್ತದೆ. ಕನ್ನಡ ಛಂದೋಮಟ್ಟುಗಳಲ್ಲಿ ಹಾಡುವುದೆಂದರೆ ಅವನಿಗೆ ಹೆಚ್ಚಿನ ಉತ್ಸಾಹ. ಷಟ್ಪದಿಯಂತೂ ವಿವಿಧ ರೂಪತಾಳಿ ಅವನ ವಾಣಿಯೊಡನೆ ಝೇಂಕರಿಸುತ್ತದೆ''[4]

"ಶಾಸ್ತ್ರಜ್ಞಾನ, ಶಿವಾನುಭವಗಳ ಜೊತೆಗೆ ಗುರು ಬಸವನಲ್ಲಿ ಮೇಲಾದ ಕವಿತಾಶಕ್ತಿಯಿದೆಯೆಂಬುದನ್ನು ಅವನ ಎಲ್ಲ ಕೃತಿಗಳೂ ತೋರುತ್ತವೆ... ತತ್ವ, ಅನುಭಾವ ಸಾಹಿತ್ಯ ಇವು ಮುಪ್ಪುರಿಯಾಗಿ ಸತ್ಕಾವ್ಯವನ್ನು ಬಹುಭಾಗದಲ್ಲಿ ಒದವಿಸಿದ ಕನ್ನಡ ಗ್ರಂಥಕಾರರಲ್ಲಿ ಇವನಿಗೆ ಮನ್ನಣೆಯ ಸ್ಥಾನವಿದೆ.''[5]

ದೇಪರಾಜನು ವಿಜಯನಗರದ ರಾಜವಂಶಕ್ಕೆ ಸೇರಿದವನು. ಕವಿ ಚರಿತೆಕಾರರು ಈತನ ಕಾಲವನ್ನು ಸುಮಾರು ಕ್ರಿ. ಶ. 1410 ಎಂದು ನಿರ್ಧರಿ

ಸಿದ್ದಾರೆ. ಈತನ ತಂದೆ ಕಂಪ. 'ಸೊಬಗಿನ ಸೋನೆ' ಮತ್ತು 'ಅಮರುಕ' ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. 'ಅಮರುಕ'ವು ಸಂಸ್ಕೃತದಲ್ಲಿರುವ 'ಅಮರುಕ ಶತಕ'ದ ಭಾಷಾಂತರ; ಪರಿವರ್ಧಿನೀ ಷಟ್ಪದಿಯಲ್ಲಿದೆ. ಪೂರ್ವ ಕವಿಗಳಲ್ಲಿ ವಾಲ್ಮೀಕಿ, ಕಾಳಿದಾಸ, ಬಾಣರನ್ನು ಸ್ಮರಿಸಿದ್ದಾನೆ.

ಈ ಕಾಲದ ಷಟ್ಪದಿಕಾರರಲ್ಲಿ ಮೂರು ಜನ ಬೊಮ್ಮರಸರು ಬಂದಿದ್ದಾರೆ. ಅವರಲ್ಲಿ ಮೊದಲನೆಯವನು 'ಸೌಂದರ ಪುರಾಣ'ದ ಕರ್ತೃ. ಈತನ ಕಾಲ ಸುಮಾರು ಕ್ರಿ. ಶ. 1450. ವೀರಶೈವ ಕವಿ. 'ಸೌಂದರ ಪುರಾಣ'ವು ವಾರ್ಧಕ ಷಟ್ಪದಿಯಲ್ಲಿದ್ದು, ಅರವತ್ತುಮೂರು ಪುರಾತನರಲ್ಲಿ ಒಬ್ಬನಾದ ಸೌಂದರ ನಂಬಿಯ ಕಥೆಯನ್ನು ಹೇಳುತ್ತದೆ. ಹರಿಹರನ 'ನಂಬಿಯಣ್ಣನ ರೆಗಳೆ' ಈತನಿಗೆ ಆಕರವನ್ನೊದಗಿಸಿದೆ.

ತೆರಕಣಾಂಬಿ ಬೊಮ್ಮರಸನ ಷಟ್ಪದಿ ಕಾವ್ಯ 'ಸನತ್ಕುಮಾರ ಚರಿತೆ'. ಭಾಮಿನಿ ಷಟ್ಪದಿಯಲ್ಲಿದೆ. ಈತನ ಕಾಲ ಸು. 1485 ಎಂದು ಕವಿಚರಿತೆಕಾರರ ಹೇಳಿಕೆ. ಜೈನ ಕವಿಯಾದ ಈತನ ಊರು ತೆರಕಣಾಂಬಿ. ಬೊಮ್ಮರಸೋಪಾಧ್ಯಾಯ ಈತನ ತಂದೆ. ಹಸ್ತಿನಾಪುರದ ರಾಜನಾಗಿದ್ದ ವಿಶ್ವಸೇನನ ಮಗ ಸನತ್ಕುಮಾರನ ಕಥೆಯನ್ನು ಇಲ್ಲಿ ಹೇಳಲಾಗಿದೆ. 'ಸನತ್ಕುಮಾರ ಚರಿತೆ'ಯಲ್ಲದೆ 'ಜೀವಂಧರ ಸಾಂಗತ್ಯ' ಎಂಬ ಮತ್ತೊಂದು ಕಾವ್ಯವನ್ನೂ ಈತ ಬರೆದಿದ್ದಾನೆ.

ಚತುರ್ಮುಖ ಬೊಮ್ಮರಸನ ಕಾಲ ಸುಮಾರು 1500. ವೀರಶೈವ ಕವಿ. ಈತನ ತಂದೆ ಮಾಯಣ. 'ರೇವಣಸಿದ್ಧೇಶ್ವರ ಪುರಾಣ' ಈತನ ಕೃತಿ. ರೇವಣಸಿದ್ಧೇಶ್ವರನ ವಂಶದವನೇ ಆಗಿದ್ದ ಬಾಲ ಸಿದ್ಧೇಶ್ವರನು ಈತನ ಗುರು. 'ಸೌಂದರ ಪುರಾಣ'ದ ಬೊಮ್ಮರಸನಿಗೆ ಈತ ಮೊಮ್ಮಗನಾಗಿದ್ದರೂ ಆಗಿರಬಹುದೆಂದು ಕವಿಚರಿತೆಕಾರರು ಊಹಿಸುತ್ತಾರೆ. ಪೂರ್ವ ಕವಿಗಳಲ್ಲಿ ಕನ್ನಡದ ಹರಿಹರ, ಕೆರೆಯ ಪದ್ಮರಸ ಮತ್ತು ಮಗ್ಗೆಯ ಮಾಯಿದೇವರನ್ನು ಸ್ತುತಿಸಿದ್ದಾನೆ. ವಾರ್ಧಕ ಷಟ್ಪದಿಯಲ್ಲಿರುವ 'ರೇವಣ ಸಿದ್ಧೇಶ್ವರ ಪುರಾಣ'ಕ್ಕೆ ಆಕರಗಳು ಎರಡು ಕಾವ್ಯಗಳೆಂದು ಕವಿಯೇ ಹೇಳಿದ್ದಾನೆ. ಸಂಸ್ಕೃತದ ಈಶಾನ್ಯ ಗುರುವಿನ ರೇವ ಸಿದ್ಧೇಶ್ವರ ಚರಿತೆ ಮತ್ತು ಹರಿಹರ ಕವಿಯ 'ರೇವಣ ಸಿದ್ಧೇಶ್ವರ ರಗಳೆ' ಗಳನ್ನು ಆಶ್ರಯಿಸಿ ಬರೆದಿದ್ದಾನಂತೆ. ರೇವಣಸಿದ್ಧ ವೀರಶೈವ ಪಂಚಾಚಾರ್ಯರಲ್ಲಿ ಒಬ್ಬ.

ಸಾಳ್ವನು ಸುಮಾರು 1550 ರಲ್ಲಿದ್ದ ಜೈನ ಕವಿ. ಈತನು ಜೈನ ಭಾರತವೊಂದನ್ನು ಬರೆದಿದ್ದು ಅದು 'ಸಾಳ್ವಭಾರತ'ವೆಂದೇ ಪ್ರಸಿದ್ಧವಾಗಿದೆ. ಭಾಮಿನಿ ಷಟ್ಪದಿಯಲ್ಲಿದೆ. ಈ ಕೃತಿಯಲ್ಲದೆ ರಸರತ್ನಾಕರ, ವೈದ್ಯ ಸಾಂಗತ್ಯ, ಶಾರದಾ ವಿಲಾಸ ಎಂಬ ಬೇರೆ ಕೃತಿಗಳನ್ನು ಈತ ರಚಿಸಿದ್ದಾನೆ. ಸಾಳ್ವನ ತಂದೆ ಧರ್ಮಚಂದ್ರ, ಗುರು ಶ್ರುತಕೀರ್ತಿ. ಸಾಳ್ವಭಾರತಕ್ಕೆ 'ನೇಮೀಶ್ವರ ಚರಿತೆ' ಎಂದೂ ಹೆಸರುಂಟು. ಇದರಲ್ಲಿ ಹರಿವಂಶ ಕುರುವಂಶ ಗಳ ಚರಿತ್ರೆಯನ್ನು ಜೈನ ಸಂಪ್ರದಾಯಕ್ಕನುಸಾರವಾಗಿ ಹೇಳಲಾಗಿದೆ. ಪಂಪ, ರನ್ನರು ಭಾರತವನ್ನು ಇದಕ್ಕಿಂತ ಮುಂಚೆಯೇ ಕನ್ನಡದಲ್ಲಿ ರಚಿಸಿ ದ್ದರು. ಆದರೆ ಅವರು ವೈದಿಕ ಕಥಾವಸ್ತುವನ್ನು ಒಪ್ಪಿ ವ್ಯಾಸಭಾರತವನ್ನು ಅನುಸರಿಸಿದರು. ಸಾಳ್ವನಾದರೋ ಪ್ರಥಮಬಾರಿಗೆ ಕನ್ನಡದಲ್ಲಿ ಪೂರ್ತಿ ಜೈನ ಸಂಪ್ರದಾಯದ ಭಾರತವನ್ನು ರಚಿಸಿದ್ದಾನೆ. ಧರ್ಮಪ್ರಚಾರವೇ ಈ ಬಗೆಯ ಕೃತಿಗಳ ಗುರಿಯಾಗಿರುವುದರಿಂದ ದೇಸಿ ಸಂಪ್ರದಾಯದ ಷಟ್ಪದಿ ಯಲ್ಲಿ ಆತ ರಚಿಸಿದ್ದು ಯೋಗ್ಯವೇ ಆಗಿದೆ.

ಸಿಂಗಿರಾಜನು ಕ್ರಿ.ಶ. 1500 ರ ಸುಮಾರಿನಲ್ಲಿ ಜೀವಿಸಿದ್ದ ವೀರಶೈವ ಕವಿ. ಈತನ ಕೃತಿ 'ಅಮಲ ಬಸವ ಚಾರಿತ್ರ' ; ಸಿಂಗಿರಾಜ ಪುರಾಣವೆಂದೇ ಹೆಸರಾಗಿದೆ. ವಾರ್ಧಕ ಷಟ್ಪದಿಯಲ್ಲಿದೆ, ಆತನ ಕೃತಿಯಲ್ಲಿ ಕಾಲದೇಶಾದಿ ವಿಚಾರಗಳು ಬರುವುದಿಲ್ಲವಾದುದರಿಂದ ಇದನ್ನು ಕುರಿತ ಹೆಚ್ಚಿನ ಮಾಹಿತಿಗಳು ದೊರೆಯುತ್ತಿಲ್ಲ.

ಬಸವಣ್ಣನ ಜೀವನವನ್ನೇ ವಸ್ತುವಾಗಿಟ್ಟುಕೊಂಡು ಬರೆದ ಅನೇಕ ವೀರಶೈವ ಪುರಾಣಗಳಲ್ಲಿ ಸಿಂಗಿರಾಜ ಪುರಾಣವೊಂದು. ಬಸವಣ್ಣನ ಕಥೆ ಯನ್ನು ಪವಾಡಗಳ ಬೆಳಕಿನಲ್ಲಿಯೇ ಎಲ್ಲ ವೀರಶೈವ ಕವಿಗಳೂ ಕಂಡಿದ್ದಾರೆ. ಮಾನವೀಯವಾದ ಚಿತ್ರ ನಮಗೆ ಸಿಗುವುದು ಕೇವಲ ಆತನ ವಚನಗಳಲ್ಲಿ ಮಾತ್ರ. ಹರಿಹರನ 'ಬಸವರಾಜ ದೇವರ ರಗಳೆ' ಉಳಿದ ವೀರಶೈವ ಪುರಾಣ ಗಳಿಗಿಂತ ಎಷ್ಟೋ ಮೇಲು. ಅಲ್ಲಿ ಪವಾಡಗಳು ಬಸವಣ್ಣನ ಸಮಗ್ರ ಬದುಕಿನ ಚಿತ್ರಕ್ಕೆ ಪೂರಕವಾಗಿ ಬರುತ್ತವೆ. ಉಳಿದವರಿಗೆಲ್ಲ ಬಸವಣ್ಣನು ಕೇವಲ ಅತಿಮಾನುಷ ವ್ಯಕ್ತಿ. ಸಿಂಗಿರಾಜ ಪುರಾಣದ ಕಥಾರಚನೆಯಂತೂ ಬಸವಣ್ಣನ ಪವಾಡಗಳನ್ನೇ ಆಶ್ರಯಿಸಿದೆ. ಒಟ್ಟು ನಲವತ್ತೆಂಟು ಸಂಧಿಗಳ ಈ ಕಾವ್ಯದಲ್ಲಿ ಪವಾಡಗಳಿಲ್ಲದ ಭಾಗವೇ ಇಲ್ಲ. ಅರವತ್ತುನಾಲ್ಕು ಪವಾಡ

ಗಳನ್ನು ಸವಿಸ್ತಾರವಾಗಿ ಬಣ್ಣಿಸಿದ್ದಾನೆ. ಹರಿಹರನ 'ಬಸವರಾಜದೇವರ ರಗಳೆ', ಭೀಮಕವಿಯ 'ಬಸವಪುರಾಣ' ಮತ್ತು ಲಕ್ಕಣ್ಣ ದಂಡೇಶನ 'ಶಿವತತ್ತ್ವ ಚಿಂತಾಮಣಿ'ಗಳು ಸಿಂಗಿರಾಜನ ಆಕರ ಗ್ರಂಥಗಳು. ಇವುಗಳಲ್ಲಿ ಶಿವತತ್ತ್ವ ಚಿಂತಾಮಣಿಯನ್ನೇ ಆತ ಹೆಚ್ಚು ಅನುಸರಿಸಿರುವುದು. ತಾನು ಪಡೆದ ವಸ್ತುವನ್ನು ಸಂಗ್ರಹಿಸಿಯೋ ವಿಸ್ತರಿಸಿಯೋ ತನ್ನ ಎರಕಕ್ಕೆ ಹೊಂದಿಸಿಕೊಂಡಿದ್ದಾನೆ. ಕೆಲವು ಸಾಮಾನ್ಯ ಘಟನೆಗಳನ್ನೂ ಇಲ್ಲಿ ಪವಾಡಗಳೆಂದು ಕರೆಯಲಾಗಿದೆ. ಉದಾಹರಣೆಗೆ, ಬಸವಣ್ಣನ ಮಹಾಮನೆಯಲ್ಲಿ ಒಮ್ಮೆ ಆಕಳುಗಳನ್ನು ಕಳ್ಳರು ಕದ್ದೊಯ್ದರಂತೆ. ಸುದ್ದಿ ತಿಳಿದ ಬಸವಣ್ಣನು 'ಕೊಟ್ಟವನೂ ಸಂಗ, ಕೊಂಡವನೂ ಸಂಗ, ಅಲ್ಲಿ ಉಂಬನು ಸಂಗ, ಇಲ್ಲಿ ಉಂಬನು ಸಂಗ' ಎಂದು, ಕರುಗಳನ್ನೂ ಅವುಗಳ ಹಿಂದೆ ಬಿಚ್ಚಿ ಬಿಡಲು ಹೇಳಿದನಂತೆ. ಹಸುಗಳನ್ನು ಹಿಂಬಾಲಿಸಿ ಬರುತ್ತಿರುವ ಕರುಗಳನ್ನು ಕಂಡ ಕಳ್ಳರಿಗೆ ವಿವೇಕ ಉದಿಸಿ, ಹಸುಕರುಗಳೆರಡನ್ನೂ ಬಸವಣ್ಣನಿಗೆ ಹಿಂದಿರುಗಿಸಿದರಂತೆ. ಅವರಿಗೆ ಶಿವದೀಕ್ಷೆ ಕೊಟ್ಟು ಬಸವಣ್ಣ ಉದ್ಧರಿಸಿದ. ಇದು ಬಸವಣ್ಣನ ಮಾನವೀಯ ಗುಣವನ್ನು ಎತ್ತಿತೋರಿಸುವ ಒಂದು ಘಟನೆ. ಪವಾಡವೆಂದರೆ ಅತಿಮಾನುಷ ಶಕ್ತಿಯಿಂದ ಘಟಿಸುವ ಕಾರ್ಯ. ಮೇಲಿನ ಉದಾಹರಣೆಯಲ್ಲಿ ಅತಿಮಾನುಷ ಶಕ್ತಿಯ ಕೈವಾಡವೇನೂ ಇಲ್ಲ.

ಕೆಲವು ಮಾನವೀಯ ಘಟನೆಗಳಿಗೆ ಪವಾಡದ ಮುಕ್ತಾಯ ಕೊಟ್ಟಿರುವುದೂ ಉಂಟು. ಒಮ್ಮೆ ಕಳ್ಳನೊಬ್ಬ ಜಂಗಮವೇಷದಿಂದ ಬಸವಣ್ಣನ ಮನೆಗೆ ಮಧ್ಯರಾತ್ರಿಯಲ್ಲಿ ನುಗ್ಗಿ ನೀಲಾಂಬಿಕೆಯ ಆಭರಣಗಳನ್ನೆಲ್ಲ ಕಳಚಿಕೊಂಡು ಕಿವಿಯ ಓಲೆಗೆ ಕೈಹಾಕಿದಾಗ ಆಕೆಗೆ ಎಚ್ಚರಾಗಿ ಕೂಗಿಕೊಂಡಳಂತೆ. ಬಸವಣ್ಣನು 'ಎಲೆಲೆ ಪಾತಕಿ, ಬಿಡು ಬಿಡೋಲೆಯಂ ಕಲಹಮೇಕೆ ? ಅಯ್ಯನ ಕೈಗಳು ಅಳುಕುವುವು' ಎಂದು ಆತನನ್ನು ಬಿಡಿಸಿದನಂತೆ. ಜಂಗಮ ವೇಷದಲ್ಲಿ ಬಂದಿದ್ದ ಕಳ್ಳನನ್ನು ಸೇವಕರು ಹಿಂಸಿಸತೊಡಗಿದಾಗ ಬಸವಣ್ಣನು ತನ್ನ ಪ್ರಭಾವದಿಂದ ಅವರನ್ನು ನಿಜಜಂಗಮರನ್ನಾಗಿಯೇ ಮಾಡಿದನಂತೆ. ಮತ್ತೊಮ್ಮೆ ಕಳ್ಳರು ಜಂಗಮ ವೇಷಧರಿಸಿ ಸುಳ್ಳು ಲಿಂಗಗಳನ್ನು ಕೊರಳಿಗೆ ನೇತುಹಾಕಿಕೊಂಡು ಬಸವಣ್ಣನ ಕೊಲೆಗೆ ಪ್ರಯತ್ನಪಟ್ಟಾಗಲೂ ಅವರನ್ನೂ ನಿಜಜಂಗಮರನ್ನಾಗಿ ಮಾಡಿದನಂತೆ. ಕೊರಳಿನಲ್ಲಿ ಜ್ಯೋತಿರ್ಲಿಂಗಗಳಿದ್ದುವಂತೆ.

ಬಸವಣ್ಣನ ವಚನಗಳನ್ನೇ ಸಮಯವರಿತು ಕಾವ್ಯದಲ್ಲಿ ಬಳಸಿಕೊಂಡಿರುವುದನ್ನು ಸಿಂಗಿರಾಜ ಪುರಾಣದಲ್ಲಿ ಕಾಣಬಹುದು. ಅನಾವಶ್ಯಕವಾದ ಅಷ್ಟಾದಶವರ್ಣನೆಗಳಿಗೆ ಅಲ್ಲಿ ಅವಕಾಶವಿಲ್ಲ. ಕಥೆಯನ್ನು ಸ್ವಾಭಾವಿಕವಾಗಿ ನಡೆಸಿಕೊಂಡು ಹೋಗುವ ಚಾತುರ್ಯ ಸಿಂಗಿರಾಜನಿಗಿದೆ. "ಒಟ್ಟಿನಲ್ಲಿ ಇತಿಹಾಸ ದೃಷ್ಟಿಯಿಂದಲೂ ಸಾಹಿತ್ಯ ದೃಷ್ಟಿಯಿಂದಲೂ ಉತ್ತಮ ವರ್ಗಕ್ಕೆ ಸೇರಿದ ವೀರಶೈವ ಪುರಾಣಗಳಲ್ಲಿ ಇದೊಂದೆಂದು ಹೇಳಬಹುದು."[6]

ತಿಮ್ಮಣ್ಣಕವಿ ವಿಜಯನಗರದರಸು ಕೃಷ್ಣದೇವರಾಯನ ಆಸ್ಥಾನದಲ್ಲಿದ್ದವನು. ಹದಿನಾರನೆ ಶತಮಾನದ ಮೊದಲ ಭಾಗದಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಆಳಿದ ಕೃಷ್ಣದೇವರಾಯನು ಸಾಹಿತ್ಯ ಕಲೆಗಳಿಗೆ ವಿಶೇಷವಾದ ಪ್ರೋತ್ಸಾಹಕೊಟ್ಟ ದೊರೆ. ಆತನ ಅಪ್ಪಣೆಯಂತೆ ಮಹಾಭಾರತದ ಏಳು ಪರ್ವಗಳನ್ನು ತಿಮ್ಮಣ್ಣಕವಿ ಬರೆದಿದ್ದಾನೆ. ಕುಮಾರವ್ಯಾಸ ಭಾರತಕ್ಕೆ ಪೂರಕವಾಗಿ ಮಹಾಭಾರತದ ಉತ್ತರ ಭಾಗವನ್ನು ಮಾತ್ರ ಈತ ರಚಿಸಿದ್ದಾನೆ. ಕುಮಾರವ್ಯಾಸನು ಹೇಳಿದ ದಶಪರ್ವಗಳನ್ನು ಬಿಟ್ಟು ಉಳಿದವನ್ನು ನೀನು ಬರೆ ಎಂದು ಕೃಷ್ಣದೇವರಾಯನೇ ತಿಮಣ್ಣನಿಗೆ ಹೇಳಿದನಂತೆ. ಭಾಮಿನೀ ಷಟ್ಪದಿಯಲ್ಲಿರುವ ಈ ಕೃತಿಗೆ 'ಕೃಷ್ಣರಾಜಭಾರತ' ಎಂಬ ಹೆಸರಿದೆ. "ತಿಮ್ಮಣ್ಣನ ಭಾರತದಲ್ಲಿ ತೆಲುಗಿನ 'ಕವಿಬ್ರಹ್ಮ'ನಾದ ತಿಕ್ಕಣ್ಣನ ವರ್ಚಸ್ಸು ತೋರಿಬರುತ್ತದೆ. ತಿಕ್ಕಣ್ಣನು ಹದಿಮೂರನೆಯ ಶತಮಾನದಲ್ಲಿದ್ದು ವಿರಾಟಪರ್ವದಿಂದ ಮುಂದಿನ ಪರ್ವಗಳನ್ನು ತೆಲುಗಿಸಿದ್ದಾನೆಂದು ಹೇಳುತ್ತಾರೆ. ತಿಮ್ಮಣ್ಣನು ಸಂಸ್ಕೃತ, ತೆಲುಗು ಭಾರತಗಳ ಪ್ರಭಾವಕ್ಕೆ ಒಳಪಟ್ಟು ತಕ್ಕಮಟ್ಟಿಗೆ ಅನುವಾದ ಕಾರ್ಯದಲ್ಲಿ ಯಶಸ್ವಿಯಾಗಿದ್ದಾನೆ. ಅವನ ಬರವಣಿಗೆಯಲ್ಲಿ ಪ್ರಸನ್ನತೆಯಿದೆ, ಓಘವಿದೆ. ಕಲ್ಪನೆ ಚಮತ್ಕೃತಿಯ ಚದುರನ್ನು ತೋರುತ್ತದೆ. ಆದರೂ 'ಕರ್ನಾಟಕ ಕವಿಕುಲಸಾರ್ವಭೌಮ' ಎಂಬ ಬಿರುದು ಯಥಾರ್ಥವಾಗಿಲ್ಲ."[7] 'ಗದುಗಿನ ಭಾರತ'ದ ಮುಂದಿನ ಕಥೆಯನ್ನು ಒಳಗೊಂಡಿದೆ ಎಂಬುದರ ಹೊರತು ತಿಮ್ಮಣ್ಣನಿಗೂ ಕುಮಾರ ವ್ಯಾಸನಿಗೂ ಯಾವ ಸಂಬಂಧವೂ ಇಲ್ಲ. ಪರಸ್ಪರರನ್ನು ಹೋಲಿಸುವುದೇ ಸರಿಯಲ್ಲ. ಅವರಿಬ್ಬರಿಗೂ ಅಜಗಜಾಂತರ ವ್ಯತ್ಯಾಸವಿದೆ. ತಾವಿಬ್ಬರೂ ಗಂಗೆ-ಯಮುನೆಯಂತೆ ಎಂದು ತಿಮ್ಮಣ್ಣನು ಭಾವಿಸಿದ್ದಾನೆ. ಕುಮಾರವ್ಯಾಸನ ಮಟ್ಟಿಗೆ ಅವನ ಈ ಭಾವನೆ ಸರಿಯಾಗಿದೆ.

ಕುಮಾರ ವಾಲ್ಮೀಕಿ 'ತೊರವೆ ರಾಮಾಯಣ'ದ ಕರ್ತೃ. ತನ್ನ ಹೆಸರು, ಊರು, ಕಾಲ ಇದಾವುದನ್ನೂ ತಿಳಿಸದಿರುವ ಈ ಕವಿಯ ವಿಚಾರವಾಗಿ ವಿದ್ವಾಂಸರು ಪ್ರಮಾಣಪೂರ್ವಕವಾಗಿ ಊಹಿಸಿರುವ ಕೆಲವು ಸಂಗತಿಗಳು ಹೀಗಿವೆ. ಕುಮಾರ ವಾಲ್ಮೀಕಿಯೆಂಬುದು ಹೆಸರಲ್ಲ; ಕಾವ್ಯನಾಮ. ಆತನ ಹೆಸರು ನರಹರಿ ಎಂದಿರಬಹುದು. ಬಿಜಾಪುರ ಜಿಲ್ಲೆಯಲ್ಲಿರುವ ತೊರವೆ ಎಂಬ ಗ್ರಾಮಕ್ಕೆ ಸೇರಿದವನು ನರಹರಿ. ಆ ಊರಿನಲ್ಲಿರುವ ಪ್ರಸಿದ್ಧ ನರಹರಿ ದೇವರ ಭಕ್ತ. ಆತನ ಕಾಲವನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಾಗಿಲ್ಲ. ಕುಮಾರವ್ಯಾಸನ ಬಳಿಕ ಕನಕದಾಸರಿಗಿಂತ ಪೂರ್ವದಲ್ಲಿ ಅಂದರೆ ಬಹುಶಃ ಹದಿನಾರನೆ ಶತಮಾನದಲ್ಲಿ ಇದ್ದಿರಬಹುದೆಂದು ಸ್ಥೂಲವಾಗಿ ಹೇಳಬಹುದು.

ಕುಮಾರವ್ಯಾಸನನ್ನು ತನ್ನ ಕಾವ್ಯದಲ್ಲಿ ಸ್ತುತಿಸಿರುವ ಈ ಕವಿ ಆತನಿಂದ ತುಂಬಾ ಪ್ರಭಾವಿತನಾಗಿದ್ದಾನೆ. ವ್ಯಾಸಭಾರತವನ್ನು ಕನ್ನಡಕ್ಕೆ ತಂದ ನಾರಣಪ್ಪ ತನ್ನನ್ನು ಕುಮಾರವ್ಯಾಸನೆಂದು ಕರೆದುಕೊಂಡಂತೆ ವಾಲ್ಮೀಕಿ ರಾಮಾಯಣವನ್ನು ಕನ್ನಡಕ್ಕೆ ತಂದ ನರಹರಿ ತನ್ನನ್ನು ಕುಮಾರವಾಲ್ಮೀಕಿ ಎಂದು ಕರೆದುಕೊಂಡಿದ್ದಾನೆ. ಗದುಗಿನ ವೀರನಾರಾಯಣನ ಭಕ್ತನಾದ ಕುಮಾರವ್ಯಾಸನ ಭಾರತ ಗದುಗಿನ ಭಾರತವೆಂದು ಪ್ರಖ್ಯಾತಿ ಹೊಂದಿದಂತೆ ತೊರವೆ ನರಹರಿಯ ಭಕ್ತನ ಕೃತಿ 'ತೊರವೆ ರಾಮಾಯಣ'ವೆಂದು ಹೆಸರಾಯಿತು.

ಭಾರತೀಯ ಸಾಹಿತ್ಯದಲ್ಲಿ ಆದಿಕವಿಯೆಂದು ಹೆಸರು ಪಡೆದಿರುವ ವಾಲ್ಮೀಕಿಯ ರಾಮಾಯಣ ಜಗತ್ತಿನಲ್ಲೇ ಹೆಸರಾದ ಕೃತಿ. ಭಾರತೀಯ ಭಾಷೆಗಳಲ್ಲೆಲ್ಲಾ ಅದು ಅನೇಕ ರೂಪ ತಾಳಿ ಹುಟ್ಟಿದೆ. ಹಳಗನ್ನಡದಲ್ಲಿ ಜೈನ ರಾಮಾಯಣಗಳನ್ನು ಬಿಟ್ಟರೆ 'ತೊರವೆ ರಾಮಾಯಣ'ದಷ್ಟು ಸಮಗ್ರ ವಾದ ರಾಮಾಯಣ ಮತ್ತೊಂದಿಲ್ಲ. ವಾಲ್ಮೀಕಿ ರಾಮಾಯಣವೇ ಕುಮಾರ ವಾಲ್ಮೀಕಿಯ ಆಕರವಾದರೂ ತನ್ನ ಕಾಲದಲ್ಲಿದ್ದ ಹಲವಾರು ರಾಮಾಯಣ ಗಳನ್ನು ಆತ ಓದಿಕೊಂಡಿರುವಂತಿದೆ. ಸಂಸ್ಕೃತದ ಆಧ್ಯಾತ್ಮ ರಾಮಾಯಣ, ಆನಂದ ರಾಮಾಯಣಗಳಲ್ಲದೆ ಕಾಳಿದಾಸನ ರಘುವಂಶದ ಪರಿಚಯವೂ ಆತನಿ ಗಿದ್ದಿರಬಹುದು. ಆದುದರಿಂದಲೇ ವಾಲ್ಮೀಕಿ ರಾಮಾಯಣದಲ್ಲಿಲ್ಲದ ಕೆಲವು ಪ್ರಸಂಗಗಳು ತೊರವೆ ರಾಮಾಯಣದಲ್ಲಿವೆ. ಕೆಲವು ಪಾತ್ರ ಕಲ್ಪನೆಗಳಲ್ಲಿ ಈ ಪ್ರಭಾವವನ್ನು ನಿಚ್ಚಳವಾಗಿ ಗುರುತಿಸಬಹುದು. ರಾಮನ ವನವಾಸ

ಮತ್ತು ದಶರಥನ ಸಾವಿಗೆ ಕಾರಣವಾಗುವ ಮಂಥರೆ ಇಲ್ಲಿ ಮಾಯೆಯ ಅವತಾರವಾಗಿದ್ದಾಳೆ. ಕೈಕೆ ಮತ್ತು ಮಂಥರೆಯ ಪಾತ್ರಗಳನ್ನು ಹೆಚ್ಚು ಕನಿಕರಕ್ಕೆ ಪಾತ್ರವಾಗುವಂತೆ ಚಿತ್ರಿಸಿದ್ದಾನೆ. ಇದೆಲ್ಲಕ್ಕಿಂತ ರಾವಣನ ಪಾತ್ರ ಕಲ್ಪನೆಯಲ್ಲಿ ಆಗಿರುವ ಬದಲಾವಣೆ ವಿಶೇಷವಾದುದು. ಆರಂಭದಲ್ಲಿ ಸೀತೆಯ ರೂಪಿಗೆ ಮರುಳಾಗಿ ರಾವಣನು ಪಾಪಕ್ಕೆಳಸಿದ. ಆದರೆ ರಾಮನೊಡನೆ ಯುದ್ಧವುಂಟಾಗಿ ತನ್ನವರೆಲ್ಲಾ ರಣರಂಗದಲ್ಲಿ ಆಹುತಿಯಾಗುತ್ತಿದ್ದಾಗ ರಾವಣನಿಗೆ ಪಶ್ಚಾತ್ತಾಪವುಂಟಾಗುತ್ತದೆ. ಮಂಡೋದರಿ, ವಿಭೀಷಣ, ಅತಿಕಾಯರು ಹೇಳುವಂತೆ ರಾಮನು ಅವತಾರಪುರುಷನೆಂದು ರಾವಣನೇ ಹೇಳುತ್ತಾನೆ :

ಮಾಣದಾದೆನು ಮಾವನಾಡಿದ
ವಾಣಿಯನು ಕಾಮುಕತನದಿ ತಾ
ಕಾಣದಾದೆನು ಕವಿ ವಿಭೀಷಣನುಚಿತ ಭಾಷಿತವ
ಪ್ರಾಣಮಿತ್ರನಲಾ ಪ್ರಹಸ್ತನ
ಲೂಣಯವ ತಾಳಿದೆನು ಜನನಿಯ
ಜಾಣಕೆಯ ಜಾತ್ಯುತ್ತರವನತಿಗಳೆದೆನಕಟೆಂದ

ರಾವಣನು ಮಹಾ ಸಂಗ್ರಾಮಕ್ಕೆ ಹೊರಡುವ ಮುನ್ನ ತನ್ನ ಭಂಡಾರ ವನ್ನೆಲ್ಲಾ ಬಡಬಗ್ಗರಿಗೆ ಹಂಚಿದನಂತೆ. ಕುಮಾರವ್ಯಾಸನ ದುರ್ಯೋಧನನು ಕೃಷ್ಣನನ್ನು ಕೆಣಕಿದಲ್ಲದೆ ತನಗೆ ಸ್ವರ್ಗವಿಲ್ಲವೆನ್ನುವಂತೆ ಕುಮಾರವಾಲ್ಮೀಕಿಯ ರಾವಣನೂ ರಾಮನನ್ನು ಭಕ್ತಿಯಿಂದ ಕೆಣಕಿದ್ದಾನೆ :

ಬಲ್ಲೆನೀ ರಘುನಾಥ ಲಕ್ಷ್ಮೀ
ವಲ್ಲಭನು ತಾನೆಂಬುದನು ನೀ
ಬಲ್ಲೆನವನಿಜೆ ಲಕ್ಷ್ಮಿಯೆಂಬುದನಾಹವಕೆ ನೆರೆದೆ
ಭಲ್ಲುಕರು ಮರ್ಕಟರು ಸುರರೆಂ
ದೆಲ್ಲವೇತಕೆ ಕೇಳು ರಣಮುಖ
ದಲ್ಲಿ ರಾಮನ ಕೂಡುವುದು ಸಂಕಲ್ಪ ತನಗೆಂದ

ಇಲ್ಲಿ ಸ್ಪಷ್ಟವಾಗಿ ರಾವಣನು ದುರಂತನಾಯಕನಂತೆ ರೂಪುಗೊಂಡಿರು ವುದನ್ನು ಗುರುತಿಸಬಹುದು. ಇದಕ್ಕೆ ಕುಮಾರವಾಲ್ಮೀಕಿಯ ಮೇಲೆ ಜೈನ ರಾಮಾಯಣಗಳ ಪ್ರಭಾವವಾಗಿರುವುದೂ ಕಾರಣವಾಗಿದ್ದಿರಬಹುದು ; ಅಥವಾ ಕುಮಾರವಾಲ್ಮೀಕಿಯೂ ಒಬ್ಬ ಭಾಗವತ ಕವಿಯಾದುದರಿಂದ ಈ

ಬಗೆಯ ಒಂದು ಕಲ್ಪನೆ ಆವನಿಗೆ ಸಹಜವಾಗಿಯೇ ಬಂದಿರುವ ಸಾಧ್ಯತೆಯೂ ಉಂಟು. ಏಕೆಂದರೆ ರಾಮನೂ ರಾವಣನ ವಿಚಾರದಲ್ಲಿ ಅನುಗ್ರಹದಿಂದಲೇ ವರ್ತಿಸುತ್ತಾನೆ. ಆತನ ಕೊನೆಗಾಲದಲ್ಲಿ ವಿಶ್ವರೂಪ ದರ್ಶನವನ್ನು ಒದಗಿಸಿ ಕೊಟ್ಟು ಮುಕ್ತಿಯನ್ನು ಕರುಣಿಸಿದ್ದಾನೆ.

ಕುಮಾರವಾಲ್ಮೀಕಿಯ ಶೈಲಿ ಅತ್ಯುತ್ತಮ ಭಾಗಗಳಲ್ಲಿ ಸಾಕಷ್ಟು ಆಕರ್ಷಕವಾಗಿಯೇ ಕಂಡುಬರುತ್ತದೆ. ಬೇಡನೊಬ್ಬನ ಬಾಣಕ್ಕೆ ತುತ್ತಾಗಿ ಗಂಡು ಕ್ರೌಂಚ ಹಕ್ಕಿ ಸತ್ತು ಬಿದ್ದಾಗ, ಆಕ್ರಂದನ ಮಾಡುತ್ತ ಹೆಣ್ಣು ಕ್ರೌಂಚ ತನ್ನ ಪ್ರಣಯಿಯ ಸುತ್ತ ತಿರುಗುವ ದೃಶ್ಯವನ್ನು ವರ್ಣಿಸುವ ಕೆಳಗಿನ ಪದ್ಯವು ಲಲಿತವಾಗಿದ್ದು ಕರುಣರಮ್ಯವಾಗಿರುವುದನ್ನು ಗುರುತಿಸಬಹುದು :

ಅರೆಮುಗಿದ ಲೋಚನದ ಸಂಪುಟ
ವರಳಿ ಚಲಿಸುವ ಚಂಚು ಪುಟದು
ಪ್ಪರಿಸಿದಂಘ್ರಿಯ ಕೆದರಿದೆರಕೆಯ ಬಿರಿದ ತುಪ್ಪುಳಿನ
ಕೊರಳ ಮಿಡುಕಿನ ಮಸೆಯ ಮುಖದಲಿ
ಸುರಿವ ನೆತ್ತರ ಪತಿಯ ಸುತ್ತಲು
ತಿರುಗಿ ಬೀರುವ ವಿಹಗ ಸತಿಯನು ಕಂಡನಾ ಮುನಿಪ

ಕುಮಾರವಾಲ್ಮೀಕಿಯ ಕಾಳಗದ ವರ್ಣನೆಗಳು ಕನ್ನಡದಲ್ಲಿ ಪ್ರಸಿದ್ಧ ವಾಗಿವೆ. 'ತೊರವೆ ರಾಮಾಯಣ'ದಲ್ಲಿ ಯುದ್ಧ ಕಾಂಡಕ್ಕೆ ಕೃತಿಯ ಅರ್ಧದಷ್ಟು ಜಾಗ ಸಿಕ್ಕಿದೆ. ದಕ್ಷಿಣ ಕನ್ನಡದ ಯಕ್ಷಗಾನ ಬಯಲಾಟಗಳ ಮೇಲೆ ತೊರವೆ ನರಹರಿಯಷ್ಟು ಪ್ರಭಾವ ಬೀರಿದ ಕನ್ನಡ ಕವಿಗಳು ತೀರಾ ವಿರಳವಾಗಿ ಸಿಗುತ್ತಾರೆ. ಕನ್ನಡ ನಾಡಿನಲ್ಲಿ ಬಹುಸಂಖ್ಯೆಯಲ್ಲಿ ದೊರೆಯುವ ಕಾವ್ಯದ ಓಲೆಕಟ್ಟುಗಳಲ್ಲಿ ತೊರವೆ ರಾಮಾಯಣವೂ ಒಂದು.

ಗದುಗಿನ ಭಾರತ, ಜೈಮಿನಿ ಭಾರತಗಳು ಜನಪ್ರಿಯವಾಗಿರುವುದ ರೊಡನೆ ಸಾಹಿತ್ಯ ದೃಷ್ಟಿಯಿಂದಲೂ ಮೇಲಾದ ಕೃತಿಗಳು. ಆದರೆ ತೊರವೆ ರಾಮಾಯಣ ಕೇವಲ ಜನಪ್ರಿಯ ಕೃತಿ. ಸಾಹಿತ್ಯ ದೃಷ್ಟಿಯಿಂದ ಮಧ್ಯಮ ತರಗತಿಯದು. ಆದರೂ ಕುಮಾರ ವಾಲ್ಮೀಕಿಗೆ ಹೆಮ್ಮೆ ಮಾತ್ರ ಸಾಕಷ್ಟಿದೆ. ಕುಮಾರವ್ಯಾಸನಿಂದ ಹೇರಳವಾಗಿ ಉಪಕೃತನಾಗಿಯೂ ತಾನು ಅವನ ಸಮವೆಂಬ ಹೆಗ್ಗಳಿಕೆಯನ್ನು ತೋರಿಸಿಕೊಂಡಿದ್ದಾನೆ. 'ಬರಡು ಕವಿಗಳ ಲೆಕ್ಕಿಪನೆ ಸಾಕೆಣಿಸದಿರು ಕುಣಿಸಿ ನಗನೇ ಕುಮಾರವ್ಯಾಸನುಳಿದವರ' ಎಂಬ

ಮಾತನ್ನೇ ಕದ್ದು, 'ಮಿಕ್ಕಿನ ಬರಡು ಕವಿಗಳ ಲೆಕ್ಕಿಸುವನೆ ಕುಮಾರ ವಾಲ್ಮೀಕಿ'- ಎಂದಿದ್ದಾನೆ. ಸ್ವಂತಿಕೆಯನ್ನು ಕುರಿತು ಜಂಬ ಕೊಚ್ಚಿಕೊಳ್ಳುವಾಗಲಾದರೂ ಕವಿಗಳು ಅನ್ಯಪ್ರಭಾವಕ್ಕೆ ಒಳಗಾಗದಿದ್ದರೆ ಒಳ್ಳೆಯದು.

ಕನ್ನಡ ಸಾಹಿತ್ಯದಲ್ಲಿ ಮಂಗರಸ ಎಂಬ ಹೆಸರಿನ ಮೂವರು ಕವಿಗಳು ಇದ್ದಾರೆ. ಮೂರನೆಯ ಮಂಗರಸನೆಂದು ಹೆಸರಾಗಿರುವ ಕವಿಯ ಕಾಲ ಕ್ರಿ.ಶ. 1508. ಈತನು ಜೈನ ಕವಿ. ತಂದೆ ವಿಜಯಭೂಪಾಲ. ತಾಯಿ ದೇವಿಲೆ. ಗುರು ಚಿಕ್ಕಪ್ರಭೇಂದು. ರಾಜವಂಶಕ್ಕೆ ಸೇರಿದ ಈತನು ಅರಸನಾಗಿದ್ದವನು. ಹೊಯ್ಸಳ ದೇಶದ ಧಾತು ಪುರದ ಅರಸನಾಗಿದ್ದನಂತೆ. ಹುಣಸೂರು ತಾಲ್ಲೂಕಿನಲ್ಲಿರುವ ಈಗಿನ ಕಲ್ಲಹಳ್ಳಿಯೇ ಅಂದಿನ ಧಾತುಪುರ. ಅಲ್ಲಿ ಇಂದಿಗೂ ಅವರ ವಂಶಸ್ಥರು ಇದ್ದಾರೆ; ಹಿಂದಿನವರು ಕಟ್ಟಿಸಿದ ಶ್ರೀ ಚಂದ್ರನಾಥ ದೇವಾಲಯವೂ ಇದೆ. ಮಂಗರಸನು ಒಳ್ಳೆಯ ಯುದ್ಧ ವೀರನೂ ಆಗಿದ್ದನಂತೆ. ಜಯನೃಪಕಾವ್ಯ, ಸಮ್ಯಕ್ತ್ವ ಕೌಮುದಿ, ಪ್ರಭಂಜನ ಚರಿತೆ, ಶ್ರೀಪಾಲ ಚರಿತೆ, ನೇಮಿಜಿನೇಶ ಸಂಗತಿ, ಸೂಪಶಾಸ್ತ್ರ— ಹೀಗೆ ಒಟ್ಟು ಆರು ಕಾವ್ಯಗಳನ್ನು ಈತ ರಚಿಸಿದ್ದನೆಂದು ತಿಳಿದುಬರುತ್ತದೆ. ಜಯನೃಪ ಕಾವ್ಯ, ಸಮ್ಯಕ್ತ್ವ ಕೌಮುದಿ ಮತ್ತು ಸೂಪಶಾಸ್ತ್ರಗಳು ಷಟ್ಪದಿ ಕಾವ್ಯಗಳಾಗಿದ್ದು ಉಳಿದವು ಸಾಂಗತ್ಯದಲ್ಲಿವೆ.

'ಜಯನೃಪ ಕಾವ್ಯ' ಪರಿವರ್ಧಿನಿ ಷಟ್ಪದಿಯಲ್ಲಿದೆ. ಕುರುಜಾಂಗಣದ ರಾಜಪ್ರಭದೇವನ ಮಗನಾದ ಜಯನೃಪನ ಕಥೆಯೇ ಇದರ ವಸ್ತು. ಜಿನಸೇನನ ಪೂರ್ವಪುರಾಣವೇ ತನ್ನ ಆಕರವೆಂದು ಕವಿ ಹೇಳಿಕೊಂಡಿದ್ದಾನೆ. ಜಯಕುಮಾರ, ಆದಿ ತೀರ್ಥಂಕರನ ಕಥೆಯಲ್ಲಿ ಬರುವ ಒಬ್ಬ ಮಹಾಶೂರನಾದ ದೊರೆ; ಗಣಧರರಲ್ಲಿ ಒಬ್ಬ. ಬಹುಪಾಲು ಎಲ್ಲ ಜೈನ ಕಾವ್ಯಗಳಂತೆ ಇಲ್ಲಿಯೂ ಹುಟ್ಟು ಸಾವುಗಳ ಚಕ್ರದಲ್ಲಿ ಜೀವ ಪರಿಪಾಕಗೊಳ್ಳುವ ಪರಿಯನ್ನೇ ಪ್ರತಿಪಾದಿಸಲಾಗಿದೆ. ಹಾಲು ಸಕ್ಕರೆ ಬೆರೆಸಿದಂತೆ ಸಂಸ್ಕೃತ ಕನ್ನಡಗಳ ಸಂಬಂಧವಿರಬೇಕೆಂಬುದು ಮಂಗರಸನ ಆಶಯ.

'ಸಮ್ಯಕ್ತ್ವ ಕೌಮುದಿ' ವಾರ್ಧಕ ಷಟ್ಪದಿಯಲ್ಲಿದೆ. ಉದಿತೋದಯನೆಂಬ ಅರಸನು ಅರ್ಹದ್ದಾಸನೆಂಬ ವೈಶ್ಯನ ಹೆಂಡತಿಯರು ಹೇಳಿದ ಕಥೆಯನ್ನು ಕೇಳಿ ವಿವೇಕ ಉಂಟಾಗಿ ಜಿನದೀಕ್ಷೆಯನ್ನು ಸ್ವೀಕರಿಸಿ ಸ್ವರ್ಗಕ್ಕೆ ಹೋದನು ಎಂಬುದೇ ಕಥಾ ಚೌಕಟ್ಟು. ಈ ಚೌಕಟ್ಟಿನೊಳಗೆ ಅನೇಕ ಉಪಕಥೆಗಳು,

ದೃಷ್ಟಾಂತಗಳು ಬಂದು ಕಥನವು ರಮ್ಯವಾಗಿದೆ. ನೀತಿ ಪ್ರತಿಪಾದನೆಯು ಕಥೆಗಳೇ ಇಲ್ಲಿ ಜಾಸ್ತಿ. ಈ ಕಾವ್ಯದ ಅನುಭವ ಬೆಳುದಿಂಗಳಿನಷ್ಟು ಹಿತಕರ ವಾಗಿ ಓದುಗರ ಭವತಾಪಗಳನ್ನು ನಿವಾರಿಸಲೆಂಬುದೇ ಕವಿಯ ಆಶಯ.

ಮಂಗರಸನ ಕಾವ್ಯಗಳಲ್ಲಿ ಕಂಡುಬರುವ ವರ್ಣನಾಸಕ್ತಿ ಅವುಗಳ ಕಥನ ರಮ್ಯತೆಯನ್ನು ಮರೆಸಿಬಿಡುತ್ತವೆ. ಧಾರ್ಮಿಕ ಉದ್ದೇಶದಿಂದಲೇ ರಚಿಸಲ್ಪಟ್ಟ ಈ ಕಾವ್ಯಗಳು ಹೆಚ್ಚು ಕಥನ ನಿಷ್ಠವಾಗಿರಬಹುದಿತ್ತು.

ಗುಬ್ಬಿಯ ಮಲ್ಲಣಾರ್ಯನು ಹದಿನಾರನೆ ಶತಮಾನದ ಮೊದಲ ಭಾಗ ದಲ್ಲಿ ಜೀವಿಸಿದ್ದ ವೀರಶೈವ ಕವಿ. 'ಭಾವಚಿಂತಾರತ್ನ' ಮತ್ತು 'ವೀರಶೈವಾ ಮೃತ ಪುರಾಣ'ಗಳು ಆತನ ಎರಡು ಕಾವ್ಯಗಳು. ವಾರ್ಧಕ ಷಟ್ಪದಿಯಲ್ಲಿವೆ. ಎರಡೂ ಕೃತಿಗಳನ್ನು ರಚಿಸಿದ ಕಾಲ ಕ್ರಮವಾಗಿ ಕ್ರಿ. ಶ. 1513 ಮತ್ತು ಕ್ರಿ.ಶ. 1530. ಕವಿಯೇ ತನ್ನ ಕಾವ್ಯಗಳಲ್ಲಿ ಈ ವಿವರಗಳನ್ನು ಕೊಟ್ಟಿದ್ದಾನೆ. 'ಪುರಾತನ ರಗಳೆ' ಎಂಬ ಒಂದು ಕಾವ್ಯವನ್ನೂ ಆತ ಬರೆದಿರುವ ಪ್ರತೀತಿ ಇದೆ. ಆದರೆ ಸಿಕ್ಕಿಲ್ಲ. ಮಲ್ಲಣಾರ್ಯನ ತಂದೆ ಗುರುಭಕ್ತ, ತಾಯಿ ಸಪ್ಪೆಯಮ್ಮ, ಊರು ಗುಬ್ಬಿ. ಈ ಕವಿಯ ತಾತನಾದ ಗುಬ್ಬಿಯ ಮಲ್ಲಣ್ಣನೂ ಅಸಾಧಾರಣ ಪಾಂಡಿತ್ಯವಿದ್ದ ಕವಿ. ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯ.

ತಮಿಳುನಾಡಿನ ಪ್ರಸಿದ್ಧ ಪ್ರಾಚೀನ ಶಿವಭಕ್ತರಲ್ಲಿ ಒಬ್ಬನಾದ ಸತ್ಯೇಂದ್ರ ಚೋಳನ ಕಥೆಯನ್ನು ಭಾವಚಿಂತಾರತ್ನದಲ್ಲಿ ಮೊತ್ತಮೊದಲಿಗೆ ಕನ್ನಡದಲ್ಲಿ ಹೇಳಲಾಗಿದೆ. ತಮಿಳಿನಿಂದ ತಾನು ಈ ಕಥೆಯನ್ನು ಪಡೆದನೆಂದು ಕವಿ ಹೇಳಿರುವನಾದರೂ ಸ್ಪಷ್ಟವಾಗಿ ಅದರ ಮೂಲವನ್ನು ನಿರ್ಧರಿಸಲು ಕಷ್ಟ. ಹರಿಹರನ 'ಮನುಚೋಳ ರಗಳೆ'ಯೇ ಭಾವಚಿಂತಾರತ್ನಕ್ಕೆ ಆಕರವಾಗಿರ ಬಹುದೆಂದು ಒಬ್ಬ ವಿದ್ವಾಂಸರು ಅನುಮಾನಿಸಿದ್ದಾರೆ.[8] ಭಾವಚಿಂತಾರತ್ನದ ಕಥಾರಚನೆಯನ್ನು ಮೂರು ಹಂತಗಳಲ್ಲಿ ವಿಂಗಡಿಸಬಹುದು; ಗುಹನ ಪೌರಾಣಿಕ ಕಥೆ, ಸತ್ಯೇಂದ್ರಚೋಳನ ಕಥೆ ಮತ್ತು ತಿರುಕೊಳವಿನಾಚಿಯ ಕಥೆ. ಸತ್ಯೇಂದ್ರಚೋಳನೇ ಕಥೆಯ ಕೇಂದ್ರವ್ಯಕ್ತಿ, ನಾಯಕ. ಕಥನ ಕೌಶಲದ ದೃಷ್ಟಿಯಿಂದ ಕರುಣರಮ್ಯವಾದ ತಿರುಕೊಳವಿನಾಚಿಯ ಕಥೆ, ಈ ಕೃತಿಯ ಶ್ರೇಷ್ಠ ಭಾಗವಾಗಿದೆ.

ಸತ್ಯೇಂದ್ರ ಚೋಳ ಮಹಾರಾಜನಿಗೆ ಸಿಂಧು ದೇಶದ ರಾಜನು ಎರಡು ಕುದುರೆಗಳನ್ನು ಕಾಣಿಕೆಯಾಗಿ ಒಪ್ಪಿಸುತ್ತಾನೆ. ರಾಜನು ತನ್ನ ಮಕ್ಕಳಿಗೆ

ಅವುಗಳನ್ನು ಉಡುಗೊರೆಯಾಗಿ ಕೊಟ್ಟನು. ಅಣ್ಣ ತಮ್ಮಂದಿರಿಬ್ಬರೂ ಪರಿವಾರ ಸಮೇತ ತಮ್ಮ ನೂತನ ಅಶ್ವಗಳನ್ನೇರಿ ವೈಹಾಳಿಗೆ ಹೊರಟರು. ಇದರ ಸಂಭ್ರಮವನ್ನು ನೋಡಲು ಊರಿನ ಜನ ಬೀದಿಗಳಲ್ಲಿ ಕಿಕ್ಕಿರಿದು ನಿಂತರು. ತಿರುಕೊಳವಿನಾಚಿಯೆಂಬ ಅನಾಥ ವಿಧವೆಯೊದ ಶಿವಭಕ್ತೆಯೊಬ್ಬಳ ಮಗುವಾದ ಶಂಕರನೂ ಕುತೂಹಲದಿಂದ ಬೀದಿಗೆ ಓಡಿಬಂದು ಆಕಸ್ಮಾತ್ತಾಗಿ ರಾಜಕುಮಾರನ ಕುದುರೆಯ ಕಾಲಿನಡಿ ಸಿಕ್ಕುಬಿದ್ದ. ಕುದುರೆಯ ಗೊರಸು ಮಗುವಿನ ಶಿರವನ್ನು ಮೆಟ್ಟಿದೊಡನೆ ಪುಟನೆಗೆದ ತಲೆ ಧರೆಗುರುಳಿತು. ಅಂಗಳ ದಲ್ಲಿ ಆಡುತ್ತಿದ್ದ ಮಗು ಕಾಣದಾದಾಗ ತಿರುಕೊಳವಿನಾಚಿ ಹುಡುಕಿದಳು ; ಸುದ್ದಿ ತಿಳಿದು ಆಕ್ರಂದನಮಾಡುತ್ತ ದೊರೆಯಲ್ಲಿಗೆ ದೂರನ್ನು ಒಯ್ದಳು. ದೊರೆಯಾದರೋ ಸತ್ಯನಿಷ್ಠ ಶಿವಭಕ್ತ. ಶಿಶುಹತ್ಯೆಗೆ ಕಾರಣನಾದ ತನ್ನ ಮಗ ನಿಗೇ ಮರಣದಂಡನೆ ವಿಧಿಸಿದ. ರಾಜಕುಮಾರನ ತಲೆ ಕತ್ತರಿಸುವ ಹೊಣೆ ತನ್ನ ಪಾಲಿಗೆ ಬಂದಾಗ ಮಂತ್ರಿ ಒಡೆಯನ ಅಪ್ಪಣೆಯನ್ನೂ ಮೀರಲಾಗದೆ ರಾಜ ಕುಮಾರನನ್ನೂ ಕೊಲ್ಲಲಾರದೆ ತನ್ನ ತಲೆಯನ್ನೇ ಕತ್ತರಿಸಿಕೊಂಡ. ಸಂದಾಯಿ ಎಂಬ ಮತ್ತೊಬ್ಬನು ರಾಜಕುಮಾರನನ್ನು ವಧಿಸಿ ತಾನೂ ತಲೆ ಕತ್ತರಿಸಿ ಕೊಳ್ಳುತ್ತಾನೆ. ಆದರೆ ಪಂಚಾಕ್ಷರೀ ಮಂತ್ರದ ಮಹಿಮೆಯಿಂದ ಅವರೆಲ್ಲರೂ ಬದುಕುತ್ತಾರೆ. ಶಿವನ ಕರುಣೆಯಿಂದ ತಿರುಕೊಳವಿನಾಚಿಯ ಮಗ ಶಂಕರನೂ ಜೀವವಳೆಯುತ್ತಾನೆ. ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ಓದುಗರಿಗೆ ಮನದಟ್ಟು ಮಾಡಿಕೊಡುವ ಸಲುವಾಗಿ ಕವಿ ಕಥೆಯನ್ನು ತುಂಬಾ ವಿಸ್ತರಿಸಿ ದ್ದಾನೆ. ತಿರುಕೊಳವಿನಾಚಿಯ ಪುತ್ರಶೋಕ ಮನಮಿಡಿಯುವಂತಿದೆ. ಕನ್ನಡ ಸಾಹಿತ್ಯದ ಉತ್ತಮ ಕರುಣರಮ್ಯ ಕಥಾಭಾಗಗಳಲ್ಲಿ ಇದೂ ಒಂದು.

'ವೀರಶೈವಾಮೃತ ಪುರಾಣ'ದಲ್ಲಿ ವೀರಶೈವ ಸಿದ್ಧಾಂತವನ್ನು ಕವಿ ಪ್ರತಿಪಾದಿಸಿದ್ದಾನೆ. ವೇದ, ಆಗಮ, ಪುರಾಣ, ಇತಿಹಾಸಗಳಿಂದ ಶ್ಲೋಕ ಗಳನ್ನು ಉದ್ಧರಿಸಿದ್ದಾನೆ. ಶಿವನ ಇಪ್ಪತ್ತೈದು ಲೀಲೆಗಳು, ಪುರಾತನ ನೂತನ ಶರಣರ ಕಥೆಗಳು, ವೀರಶೈವ ತತ್ತ್ವವಿಚಾರ, ಧರ್ಮಾಧರ್ಮ ಸ್ವರೂಪ ವಿವರಣೆಗಳನ್ನು ಅಲ್ಲಿ ಕಾಣಬಹುದು. ಭೀಮಕವಿಯ 'ಬಸವಪುರಾಣ' ಲಕ್ಕಣ್ಣ ದಂಡೇಶನ 'ಶಿವತತ್ತ್ವ ಚಿಂತಾಮಣಿ' ಮುಂತಾದ ವೀರಶೈವ ಪುರಾಣ ಗಳಿಂದ ವಿಷಯವನ್ನು ಸಂಗ್ರಹಿಸಿದ್ದಾನೆ. ಧಾರ್ಮಿಕ ಮಹತ್ವವಿರುವ ಈ ಕೃತಿ ಗಾತ್ರದಲ್ಲಿ ಬೃಹತ್ತಾದುದು.

ಚೆನ್ನಬಸವಾಂಕನು ಕ್ರಿ. ಶ. ಸುಮಾರು 1550 ರಲ್ಲಿದ್ದಿರಬಹುದಾದ ವೀರಶೈವ ಕವಿ. ಈತನ ಕೃತಿ 'ಮಹಾದೇವಿಯಕ್ಕನ ಪುರಾಣ'. ನಾನಾ ಷಟ್ಪದಿಗಳಲ್ಲಿದೆ. ಸಾಂಗತ್ಯವನ್ನು ಬಳಸಿದ್ದಾನೆ. ಆಧಾರಗಳಾಗಿ ಸಂಸ್ಕೃತ ಶ್ಲೋಕಗಳೂ ಬಂದಿವೆ. ಈತನ ತಂದೆ ರುದ್ರಕವಿ ನಾಗಭೂಷಣಾಚಾರ್ಯ; ಗುರುಗಳು ಚಿದಾನಂದ ಯತಿಪ ಮತ್ತು ಬಸವರಾಜ. ತನಗಿಂತ ಹಿಂದೆ ಇದ್ದ ಕವಿಗಳಲ್ಲಿ ಹರಿಹರ, ರಾಘವಾಂಕ, ಸಿಂಗಿರಾಜ, ಕೆರೆಯ ಪದ್ಮರಸ ಮುಂತಾದವರನ್ನು ಸ್ಮರಿಸಿದ್ದಾನೆ.

ಹನ್ನೆರಡನೆ ಶತಮಾನದ ಪ್ರಸಿದ್ಧ ಶಿವಶರಣೆ ವಚನಕಾರ್ತಿ ಅಕ್ಕಮಹಾದೇವಿಯೇ ಕಥಾ ನಾಯಕಿ. ಹರಿಹರನ ಮಹಾದೇವಿಯಕ್ಕನ ರಗಳೆಯನ್ನೇ ತಾನು ವಿಸ್ತರಿಸಿ ಹೇಳುತ್ತಿರುವೆನೆಂದು ಕವಿ ಒಪ್ಪಿಕೊಂಡಿದ್ದಾನೆ. ಆದರೆ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ಮಹಾದೇವಿಯ ಜನನಕ್ಕೆ ಹರಿಹರನು ಕಲ್ಪಿಸಿಕೊಂಡಿರುವ ಶಾಪ ಪ್ರಸಂಗ ಇಲ್ಲಿಲ್ಲ. ಇಲ್ಲಿ ಚಾಮರಸನ ಪ್ರಭುಲಿಂಗ ಲೀಲೆಯ ಕಥಾ ಸಂಪ್ರದಾಯವನ್ನು ಆತ ಮುಂದುವರಿಸಿದ್ದಾನೆ. ರಾಘವಾಂಕ ಮತ್ತು ಶೂನ್ಯ ಸಂಪಾದನೆಗಳ ಪ್ರಭಾವವು ಕಥಾ ರಚನೆಯ ಮೇಲೆ ಆಗಿರುವುದನ್ನು ಗಮನಿಸಬಹುದು. ಮಹಾದೇವಿಯಕ್ಕನ ವಚನಗಳನ್ನು ಸಾಕಷ್ಟು ಬಳಸಿಕೊಂಡಿರುವುದು ಕಾವ್ಯಕ್ಕೆ ಮೆರುಗನ್ನಿತ್ತಿದೆ. "ಇತರ ವೀರಶೈವ ಪುರಾಣಗಳಲ್ಲಿ ವರ್ಣಿಸಿರುವಂತೆ ಶಿವನ ಪಂಚವಿಂಶತಿ ಲೀಲೆಗಳು, ಸೃಷ್ಟಿಕ್ರಮ. ವಿಚಾರ ಮೊದಲಾದ ವರ್ಣನೆಗಳಿಗೆ ಕೈ ಹಾಕಿಲ್ಲ. ಆ ಮಟ್ಟಿಗೆ ಕಾವ್ಯದ ದೃಷ್ಟಿಯಿಂದ ಕವಿಯ ಔಚಿತ್ಯ ಪ್ರಜ್ಞೆಯನ್ನು ಪ್ರಶಂಸಿಸಬಹುದು. ಮಹಾದೇವಿಯ ಕಥೆಗೆ ಪೋಷಕವಾಗಬಹುದಾದ, ಶಿವನ ಪಾರಮ್ಯವನ್ನು ಮೆರೆವ ಕೆಲವು ಕತೆಗಳನ್ನು ಮಾತ್ರ ಹವಣರಿತು ಬಳಸಿದ್ದಾನೆ"[9]

ಚಾಟುವಿಠ್ಠಲನಾಥ ಒಬ್ಬ ಭಾಗವತ ಕವಿ. ಸಂಸ್ಕೃತ ಭಾಗವತವನ್ನು ಕನ್ನಡಿಸಿದ್ದಾನೆ. ಮಹಾಭಾರತದಲ್ಲಿ ಸ್ವಲ್ಪ ಭಾಗವನ್ನು ಬರೆದಿದ್ದಾನೆ. 'ನಿತ್ಯಾತ್ಮ ಶುಕಯೋಗಿ' ಎಂಬುದು ಈತನ ಅಂಕಿತ. ಈತನ ಕಾಲವನ್ನು ಕ್ರಿ. ಶ. 1530 ಎಂದು ಕವಿಚರಿತೆಕಾರರು ನಿರ್ಧರಿಸಿದ್ದಾರೆ. ಈ ಕವಿಯು ಸ್ವಂತ ವಿಚಾರಗಳೇನೂ ತಿಳಿದುಬಂದಿಲ್ಲ. ಹೆಸರನ್ನು ಸಹ ಹೇಳಿಕೊಂಡಿಲ್ಲ. ತನಗಿಂತ ಹಿಂದೆ ಇದ್ದ ಕನ್ನಡ ಕವಿಗಳಲ್ಲಿ ಯಾರನ್ನೂ ಸ್ಮರಿಸಿಲ್ಲ. ಈತನನ್ನೂ ಮುಂದಿನ ಯಾವ ಕನ್ನಡ ಕವಿಗಳೂ ಹೆಸರಿಸಿಲ್ಲ. ಭಾಗವತ ಪುರಾಣವನ್ನು ಸಂಸ್ಕೃತದಲ್ಲಿ

ರಚಿಸಿದ ವ್ಯಾಸಮಹರ್ಷಿಗಳನ್ನು ಮತ್ತು ವ್ಯಾಸನಿಂದ ಉಪದೇಶ ಪಡೆದು ಈ ಪುರಾಣವನ್ನು ಪರೀಕ್ಷಿತ ರಾಜನಿಗೆ ಹೇಳಿದ ಶುಕಮಹರ್ಷಿಯನ್ನು ಮಾತ್ರ ಕನ್ನಡ ಭಾಗವತದಲ್ಲಿ ಮುಕ್ತಕಂಠದಿಂದ ಪ್ರಶಂಶಿಸಿ ಸ್ತುತಿಸಲಾಗಿದೆ.

ಹನ್ನೆರಡು ಸಾವಿರಕ್ಕೂ ಮಿಗಿಲಾದ ಸಂಖ್ಯೆಯ ಭಾಮಿನೀ ಷಟ್ಪದಿಗಳಲ್ಲಿ ರಚಿಸಲಾಗಿರುವ ಈ ಬೃಹತ್ಕಾವ್ಯವಾದ ಭಾಗವತವು ಸಂಸ್ಕೃತದ ಅನುವಾದ. ಇದರ ಗಾತ್ರ ವಿಸ್ತಾರಗಳನ್ನು ಅನುಲಕ್ಷಿಸಿ ಮತ್ತು ಕಾವ್ಯದಲ್ಲಿಯೇ ದೊರೆಯುವ ಕೆಲವು ಆಂತರಿಕ ಪ್ರಮಾಣಗಳನ್ನು ಆಧರಿಸಿ ಕನ್ನಡ ಭಾಗವತವನ್ನು ಐದು ಜನ ಕವಿಗಳು ರಚಿಸಿರಬೇಕೆಂದೂ, ಅವರಲ್ಲಿ ಚಾಟುವಿಠ್ಠಲನಾಥ ಒಬ್ಬನೆಂದು ಕೆಲವು ವಿದ್ವಾಂಸರ ಅಭಿಪ್ರಾಯವಿದೆ.[10]

ಭಾಗವತಕಾರರು ಭಕ್ತಿ ಸಂಪ್ರದಾಯದ ಕವಿಗಳು. ವಿಷ್ಣುಭಕ್ತರು. ಮಹಾವಿಷ್ಣುವಿನ ನಾಮ ಸಂಕೀರ್ತನೆ, ಪೂಜೆ, ಧ್ಯಾನ, ಅವನ ಅವತಾರದ ಕಥೆಗಳನ್ನು ಹೇಳುವುದು ಮತ್ತು ಭಗವಂತನಲ್ಲಿ ವೈರ ಸಾಧಿಸಿ ನಾಶವಾದ ದುಷ್ಟರ ಕಥೆಗಳನ್ನು ಹೇಳುವುದು ಇದೆಲ್ಲಾ ಭಾಗವತದಲ್ಲಿ ಕಾಣಬಹುದು. ವಿಷ್ಣುವಿನ ಎಂಟು ಅವತಾರಗಳನ್ನೂ ಬಣ್ಣಿಸಿರುವನಾದರೂ ಶ್ರೀಕೃಷ್ಣನ ಅವತಾರಕ್ಕೇ ಹೆಚ್ಚು ಮಹತ್ವ. ಶ್ರೀಕೃಷ್ಣಕಥೆ ಭಾಗವತದ ದಶಮಸ್ಕಂಧದಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ. ಪರಮ ವಿಷ್ಣು ಭಕ್ತರಾದ ಅಕ್ರೂರ, ಕುಚೇಲ ಮುಂತಾದ ಅನೇಕರ ಕಥೆಗಳೂ ಇವೆ. ವಿಷ್ಣುವಿನ ವೈರಿಗಳಾಗ ಹೋಗಿ ಅವನ ಬೇರೆ ಬೇರೆ ಅವತಾರಗಳಲ್ಲಿ ನಿರ್ಮೂಲನ ಹೊಂದಿದ ಅಸುರರ ಕಥೆಗಳಂತೂ ಇದ್ದೇ ಇವೆ. ''ನಿತ್ಯಾತ್ಮಶುಕನ ಕಾವ್ಯಮೂಲ ಸಂಸ್ಕೃತ ಗ್ರಂಥದ ಕ್ರಮವಾದ ಅನುವಾದವೇ ಆದರೂ ಸ್ವಕಪೋಲ ಕಲ್ಪಿತ ಕಾವ್ಯಗಳಂತೆಯೇ ಏಕಧಾರೆಯಾಗಿ ಹರಿಯುವ ಕವಿತಾ ರಚನೆಯಿಂದ ಸುಶೋಭಿತವಾಗಿದೆ. ಇದರಲ್ಲಿನ ವರ್ಣನೆಗಳು ಬೇರೆ ಅನೇಕ ಕನ್ನಡ ಕಾವ್ಯಗಳಲ್ಲಿದ್ದಂತೆ ದೀರ್ಘವಾಗಿ ಬೆಳೆದು ಕಥೆಯ ಓಟಕ್ಕೆ ಭಂಗ ತರುವುದಿಲ್ಲ. ವರ್ಣನೆಗೆ ಪ್ರಾಧಾನ್ಯಕೊಟ್ಟು ಕಥೆಯನ್ನು ಮರೆಯುವ, ಕುಗ್ಗಿಸುವ ಸಾಹಸಕ್ಕೆ ಕವಿ ಎಲ್ಲಿಯೂ ಕೈಹಾಕಿಲ್ಲ.''[11]

ಚಾಟುವಿಠ್ಠಲನದೆಂದು ಹೇಳಲಾದ ಭಾರತದಲ್ಲಿ ಆದಿಪರ್ವಕ್ಕೆ ಸೇರಿದ ಪೌಲೋಮ, ಆಸ್ತಿಕ ಎಂಬ ಪರ್ವಗಳ ಕನ್ನಡ ಅನುವಾದವಿದೆ. "ಇದರಲ್ಲಿ ಸರಳ ಕಥನವಿದೆ. ಕುಮಾರವ್ಯಾಸ ಪ್ರಭಾವವಿದ್ದರೂ, ಅವನ ಪ್ರತಿಭೆ

ಕಿಂಚಿತ್ತಾದರೂ ಕಾಣದು. ಸಾಂಪ್ರದಾಯಿಕ ವ್ಯಾಕರಣಕ್ಕೆ ಸಮ್ಮತವಲ್ಲದ ಅಶುದ್ಧ ದೇಸಿ ಇದರಲ್ಲಿ ಹೆಣೆಯಿಕ್ಕಿದೆ."[12]

ಎಲ್ಲ ಕಾಲಗಳಲ್ಲಿಯೂ ಸಮಾಜದ ಮೇಲು ವರ್ಣದ ಜನರೇ ವಿಶೇಷ ವಾಗಿ ಸಾಹಿತ್ಯರಚನೆಯಲ್ಲಿ ತೊಡಗುವವರು. ಹಳಗನ್ನಡ ಸಾಹಿತ್ಯದಲ್ಲಿ ಇದಕ್ಕೆ ಅಪವಾದವಾಗಿ ಮಾದಾರ ಚೆನ್ನಯ್ಯ, ಅಂಬಿಗರ ಚೌಡಯ್ಯ ಮುಂತಾದ ಹತ್ತಾರು ವಚನಕಾರರು ಅಲ್ಲೊಬ್ಬ ಇಲ್ಲೊಬ್ಬ ಕವಿಗಳು ದೊರೆಯುತ್ತಾರೆ. ಹೆಂಗಸರಂತೂ ಕೈಬೆರಳಿನಲ್ಲಿ ಎಣಿಸಿ ಮುಗಿಸಬಹುದಾದ ಸಂಖ್ಯೆಯಲ್ಲಿದ್ದಾರೆ. ವಸ್ತುಸ್ಥಿತಿ ಹೀಗಿರುವಾಗ ಕನಕದಾಸನಂಥ ಒಬ್ಬ ಪ್ರತಿಭಾವಂತ ಕವಿ ಸಮಾಜದ ಕೆಳಗಿನ ಸ್ತರದಲ್ಲಿ ಬಂದರೆ ಆಶ್ಚರ್ಯಪಡಬೇಕಷ್ಟೆ.

ಭಾಗವತ ಕವಿಯಾದ ಕನಕದಾಸ ಹೆಚು ಪ್ರಖ್ಯಾತಿಯನ್ನು ಹೊಂದಿರು ವುದು ಹರಿದಾಸನಾಗಿ. ದಾಸಪರಂಪರೆಯಲ್ಲಿ ಪುರಂದರದಾಸರಷ್ಟೇ ಮೇಲು ಮಟ್ಟದ ಕೀರ್ತನಕಾರ, ಬದುಕಿನಲ್ಲಿ ಆತ ಕಂಡುಂಡ ಕಷ್ಟ-ನಷ್ಟಗಳು ಆತ ನನ್ನು ಉತ್ತಮ ಮಟ್ಟದ ಸಾಮಾಜಿಕ ವಿಮರ್ಶಕನನ್ನಾಗಿಸಿತು. ಆತನ ಕೀರ್ತನೆಗಳಲ್ಲಿ ಕಂಡುಬರುವ ತೀಕ್ಷ್ಣವಾದ ಸಾಮಾಜಿಕ ಪ್ರಜ್ಞೆ, ಸಾಹಿತ್ಯಗುಣ ಮತ್ತು ಗೇಯತೆಗಳನ್ನು ಮೆಚ್ಚದವರಿಲ್ಲ.

ಕನಕದಾಸ ಕೇವಲ ಕೀರ್ತನಕಾರನಾಗಿರದೆ ಕವಿಯೂ ಆಗಿದ್ದ 'ಮೋಹನ ತರಂಗಿಣಿ' ಎಂಬ ಸಾಂಗತ್ಯ ಕೃತಿಯನ್ನೂ, 'ನಳಚರಿತ್ರೆ' 'ಹರಿ ಭಕ್ತಿಸಾರ', 'ರಾಮಧಾನ್ಯ ಚರಿತೆ' ಎಂಬ ಷಟ್ಪದಿ ಕಾವ್ಯಗಳನ್ನು ರಚಿಸಿದ್ದಾನೆ. ಇವುಗಳಲ್ಲದೆ 'ತಿರುಕನ ಕನಸು' 'ವಸ್ತ್ರಾಪಹರಣ' ದಂಥ ಚಿಕ್ಕ ಖಂಡಕಾವ್ಯಗಳೂ ಇವೆ. 'ಕನಕನ ಮುಂಡಿಗೆ'ಗಳಂತೂ ಹೆಸರುವಾಸಿಯಾಗಿವೆ. ಕೇವಲ ಆತನ ಷಟ್ಪದಿ ಕಾವ್ಯಗಳನ್ನು ನಾವು ಪರಿಚಯ ಮಾಡಿಕೊಡುವುದಕ್ಕೆ ಹಿನ್ನಲೆಯಾಗಿ ಜೀವನ, ಕಾಲ, ದೇಶಾದಿ ವಿಚಾರಗಳನ್ನು ಸ್ವಲ್ಪ ತಿಳಿದುಕೊಳ್ಳಬಹುದು.

ಕನಕದಾಸನು ಹದಿನಾರನೇ ಶತಮಾನದ ಮಧ್ಯಭಾಗದಲ್ಲಿ ಜೀವಿಸಿದ್ದ ನೆಂಬುದು ಬಹುಪಾಲು ವಿದ್ವಾಂಸರ ಅಭಿಪ್ರಾಯ. ವೈರಾಗ್ಯಶೀಲ ಭಕ್ತಕವಿ ಯಾದ ಆತ ಸಹಜನಾಗಿಯೇ ತನ್ನ ಕೃತಿಗಳಲ್ಲಿ ಎಲ್ಲಿಯೂ ಸ್ವಂತ ವಿಚಾರ ಗಳನ್ನು ಹೇಳಿಕೊಂಡಿಲ್ಲ. ಕನಕದಾಸ ಎಂಬ ಹೆಸರು ಮತ್ತು ಆದಿಕೇಶವನ ಅಂಕಿತಗಳಷ್ಟೇ ಅಲ್ಲಿ ಗೊತ್ತಾಗುವುದು. ಆದರೆ ಕನ್ನಡನಾಡಿನಲ್ಲಿ ಕನಕದಾಸನನ್ನು

ಕುರಿತು ಪ್ರಚಾರದಲ್ಲಿರುವ ದಂತಕಥೆಗಳೂ, ಪವಾಡಗಳೂ ಇಲ್ಲಿ ನೆರವಾಗುತ್ತದೆ. ಅವುಗಳ ಹಿನ್ನೆಲೆಯಲ್ಲಿ ಆತನ ಜೀವನವನ್ನು ಸ್ಥೂಲವಾಗಿ ಕಲ್ಪಿಸಿಕೊಳ್ಳಬಹುದಾಗಿದೆ.

ಕನಕದಾಸನ ತಂದೆ ಬೀರಪ್ಪ, ತಾಯಿ ಬಚ್ಚಮ್ಮ, ಧಾರವಾಡ ಜಿಲ್ಲೆಯಲ್ಲಿರುವ ಬಾಡ ಎಂಬುದು ಈತನ ಊರು. ಜಾತಿಯಲ್ಲಿ ಕುರುಬರವನು. ಆತನ ತಂದೆ ಬೀರೇಗೌಡ ಸುತ್ತಮುತ್ತಲ ಹತ್ತಾರು ಗ್ರಾಮಗಳ ಢಣಾಯಕನಾಗಿದ್ದು ರಾಜ ಮಾನ್ಯನಾಗಿದ್ದ ಪ್ರತಿಷ್ಠಿತ ವ್ಯಕ್ತಿ. ಆತನಿಗೆ ಬಹಳ ಕಾಲ ಮಕ್ಕಳಿರಲಿಲ್ಲ. ವೃದ್ಧಾಪ್ಯದಲ್ಲಿ ಒಬ್ಬ ಮಗ ಹುಟ್ಟಿದ. ತಿರುಪತಿ ತಿಮ್ಮಪ್ಪನ ದಯದಿಂದ ಆತ ಹುಟ್ಟಿದನೆಂದು ತಿಮ್ಮಪ್ಪನೆಂದೇ ನಾಮಕರಣವಾಯಿತು. ಚಿಕ್ಕವಯಸ್ಸಿನಲ್ಲಿರುವಾಗಲೇ ತಂದೆಯನ್ನು ಕಳೆದುಕೊಂಡು ತಿಮ್ಮ ಬೆಳೆದು ದೊಡ್ಡವನಾದ. ಯಾವುದೋ ಕಾರಣಕ್ಕಾಗಿ ಭೂಮಿಯನ್ನು ಅಗೆದಾಗ ಕೊಪ್ಪರಿಗೆಗಟ್ಟಳೆ ಹೊನ್ನು ಆತನಿಗೆ ದೊರೆಯಿತು. ಅಂದಿನಿಂದ ತಿಮ್ಮನು ಕನಕನಾಯಕನಾದ. ಸಂಪತ್ತು ಅಧಿಕಾರಗಳಿಂದ ಬೀಗದೆ ಕನಕನಾಯಕನು ಜನಾನುರಾಗಿಯಾಗಿ ಪರೋಪಕಾರ ಬುದ್ಧಿಯಿಂದ ತುಂಬ ಮಾನ್ಯನಾಗಿದ್ದ. ಕನಕನಾಯಕನ ಉತ್ತಮ ನಡತೆಗಳಿಂದಲೂ, ಶೌರ್ಯ-ಪರಾಕ್ರಮಗಳಿಂದಲೂ ಆನೆಗೊಂದಿ ಸಂಸ್ಥಾನದ ಮಹಾರಾಜನು ಸುಪ್ರೀತನಾಗಿ ಬಂಕಾಪುರ ಪ್ರಾಂತ್ಯಕ್ಕೆ ಆತನನ್ನು ಸರ್ವಾಧಿಕಾರಿಯನ್ನಾಗಿ ಮಾಡಿದನು. ಕನಕನೇ ಕಾಗಿನೆಲೆಯಲ್ಲಿ ಇರುವ ಆದಿಕೇಶವನ ಗುಡಿಯನ್ನು ಜೀರ್ಣೋದ್ಧಾರ ಮಾಡಿಸಿ ಅಲ್ಲಿ ಕ್ರಮವಾಗಿ ಉತ್ಸವ, ಪೂಜಾದಿಗಳ ವ್ಯವಸ್ಥೆ ಮಾಡಿಸಿದ.

ಕನಕನಾಯಕನಿಗೆ ಮುಂದೆ ಅನೇಕ ದುಃಖಗಳು ಬಂದೊದಗಿದವು. ತಾಯಿ ಸತ್ತ ಕೆಲವು ಕಾಲದಲ್ಲಿಯೇ ಹೆಂಡತಿಯೂ ತೀರಿಹೋದಳು. ಮಕ್ಕಳಿರಲಿಲ್ಲ. ಬದುಕಿಗೆ ಜೋತು ಬೀಳಲು ಯಾವುದೇ ಆತ್ಮೀಯ ಎಳೆಗಳೂ ಇರಲಿಲ್ಲ. ಇಂಥ ಸಂದರ್ಭದಲ್ಲಿ ನಡೆದ ಒಂದು ಘಟನೆ ಆತನ ಜೀವನ ಪಥವನ್ನೇ ಬದಲಿಸಿತು. ಪಕ್ಕದ ಗ್ರಾಮದವರೊಡನೆ ಗಡಿ ವಿವಾದ ಉಂಟಾಗಿ ಕಾಳಗವಾಯಿತು. ಕನಕನಾಯಕನಿಗೆ ತೀವ್ರ ಗಾಯಗಳಾಗಿ ರಕ್ತಸ್ರಾವದಿಂದ ಪ್ರಜ್ಞೆ ತಪ್ಪಿ ಕೆಳಗೆ ಬಿದ್ದುಬಿಟ್ಟ. ಆ ವೇಳೆಯಲ್ಲಿ ಭಗವಂತನು ಕಾಣಿಸಿಕೊಂಡು ನನ್ನ ದಾಸನಾಗೆಂದು ಅಪ್ಪಣೆಕೊಟ್ಟ. ನಾಯಕನನ್ನು ಸ್ಪರ್ಶಿಸಿ ಎಲ್ಲ ನೋವನ್ನೂ ಹೋಗಲಾಡಿಸಿದ. ದೇಹ–ಮನಸ್ಸುಗಳೆರಡೂ ಜರ್ಜರಿತವಾಗಿ

ಅಪಮಾನದ ನೋವಿನಿಂದ ಕುದಿಯುತ್ತಿದ ಕನಕನಾಯಕನಿಗೆ ಮಿಂಚಿನಂತೆ ಬಿಡುಗಡೆ ದೊರೆಯಿತು. ಭಗವಂತನ ಸ್ಪರ್ಶದಿಂದಲೇ ಹಾಗಾಯಿತೆಂದು ಭಾವಿಸಿದ ಆತ ಎಲ್ಲ ಸಂಪತ್ತನ್ನೂ ತ್ಯಜಿಸಿ ಆದಿಕೇಶವನ ದಾಸನಾಗಿ ಮುಂದಿನ ಬದುಕನ್ನು ಕಳೆದನಂತೆ.

ಕನಕದಾಸನಿಗೆ ಸಂಬಂಧಿಸಿದಂತಹ ಹತ್ತಾರು ಪವಾಡಗಳೂ ಐತಿಹ್ಯಗಳೂ ಕನ್ನಡನಾಡಿನಲ್ಲಿ ಪ್ರಚಾರದಲ್ಲಿವೆ. ಅವುಗಳೆಲ್ಲವನ್ನೂ ಇಲ್ಲಿ ಪ್ರಸ್ತಾಪಿಸದೆ ಕೇವಲ ಒಂದು ಪವಾಡವನ್ನು ಪರಿಚಯಿಸಬಹುದಾಗಿದೆ. ದಾಸಪಂಥಕ್ಕೆ ಸೇರಿ ಭಕ್ತಿಮಾರ್ಗದಲ್ಲಿ ಮತ್ತು ಸಾಹಿತ್ಯ ಸಾಧನೆಗಳಲ್ಲಿ ಮಹತ್ವದ ಸಿದ್ಧಿಯನ್ನು ಪಡೆದಿದ್ದರೂ ಆತ ಹೀನಕುಲದವನಾದುದರಿಂದ ಸಾಕಷ್ಟು ಕಿರುಕುಳವನ್ನು ಮೇಲುಜಾತಿಯವರಿಂದ ಪಡೆಯಬೇಕಾಯಿತೆನ್ನುವುದನ್ನು ಈ ಪವಾಡವು ಸೂಚಿಸುತ್ತದೆ :

ಕನಕದಾಸನು ಕನ್ನಡನಾಡಿನ ಎಲ್ಲ ವೈಷ್ಣವ ಕ್ಷೇತ್ರವನ್ನೂ ಸಂದರ್ಶಿಸಿ ಉಡುಪಿಗೆ ಬಂದನಂತೆ. ದೇವರ ಪೂಜೆಯ ಕಾಲದಲ್ಲಿ ಮಹಾದ್ವಾರದಲ್ಲಿ ಒಳಗೆ ಬರಲು ಅಪ್ಪಣೆ ಬೇಡಿ ನಿಂತಿದ್ದ ಈ ಶೂದ್ರನನ್ನು ಅರ್ಚಕರು ಬೆದರಿಸಿ ಓಡಿಸಿಬಿಟ್ಟರು. ದೀನನಾಗಿ ಗರ್ಭಗುಡಿಯ ಹಿಂಬಾಗಿಲ ಕಿಟಕಿಯ ಬಳಿನಿಂತು ಕನಕದಾಸನು ಭಗವಂತನಿಗೆ ಮೊರೆಯಿಟ್ಟನಂತೆ. ಪೂಜೆಯನ್ನು ಸ್ವಾಮಿಗಳಿಂದ ಸ್ವೀಕರಿಸುತ್ತಿದ್ದ ಶ್ರೀಕೃಷ್ಣ ವಿಗ್ರಹ ಕೂಡಲೇ ಹಿಂದುಮುಂದಾಗಿ ತಿರುಗಿ ಕಿಟಕಿಯ ಮೂಲಕ ಕನಕದಾಸನಿಗೆ ದರ್ಶನ ಸಿಕ್ಕಿತಂತೆ. ಈಗಲೂ ಉಡುಪಿಯ ಶ್ರೀಕೃಷ್ಣ ದೇವಾಲಯಕ್ಕೆ ಹೋದರೆ ಕನಕನ ಕಿಂಡಿಯನ್ನು ತೋರಿಸುತ್ತಾರೆ.

ಕನಕದಾಸನನ್ನು ತಿರಸ್ಕರಿಸಿದ ಪುರೋಹಿತ ವರ್ಗದಲ್ಲಿಯೂ ಮಹಾ ಉದಾರವಾದಿಗಳಿದ್ದರು. ಹುಟ್ಟಿನಿಂದ ಯಾವ ಕುಲವಾದರೇನು ? ಭಕ್ತರೆಲ್ಲಾ ಒಂದೇ ಜಾತಿ ; ಎಂದು ಭಾವಿಸಿದ್ದ ಭಾಗವತರಿದ್ದರು. ಮಂತ್ರ ರಹಸ್ಯವನ್ನರಿಯಲು ಎಲ್ಲರು ಅರ್ಹರು ಎಂದು ಸಾರಿದ ರಾಮಾನುಜಾಚಾರ್ಯರ ಆದರ್ಶವಿತ್ತು. ಕನಕದಾಸನಿಗೆ ದಾಸದೀಕ್ಷೆ ಕೊಟ್ಟ ತಾತಾಚಾರ್ಯ, ಅವನ ಮಾರ್ಗದರ್ಶನ ಮಾಡಿ ಮುಂದಕ್ಕೆ ನಡೆಸಿದ ವ್ಯಾಸರಾಯ, ಸ್ನೇಹ ಹಸ್ತ ನೀಡಿದ ಪುರಂದರದಾಸ ಮುಂತಾದವರೆಲ್ಲಾ ಪ್ರತಿಷ್ಠಿತ ವರ್ಗದವರು. ಕನಕದಾಸನೂ ತನ್ನ ಕೃತಿಗಳಲ್ಲಿ ರಾಮಾನುಜರು, ತಾತಾಚಾರ್ಯರು ಮುಂತಾದವರನ್ನು ಸ್ಮರಿಸಿದ್ದಾನೆ.

ನಳನ ಕಥೆ ಸಂಸ್ಕೃತ ಮಹಾಭಾರತದಲ್ಲಿ ಬರುವ ಒಂದು ಉಪಾಖ್ಯಾನ. ಧರ್ಮರಾಯನು ಜೂಜಿನಲ್ಲಿ ರಾಜ್ಯಕೋಶಗಳನ್ನೆಲ್ಲಾ ಸೋತು ಕಾಡುಪಾಲಾದಾಗ ತನ್ನ ಕಷ್ಟಕ್ಕೆ ಮರುಗುತ್ತಾ ನಿರ್ವಿಣ್ಣನಾಗಿದ್ದ ಸಮಯದಲ್ಲಿ ರೋಮಶ ಋಷಿಗಳು ಅಲ್ಲಿಗೆ ಬಂದರು. ಅವರೇ ನಳದಮಯಂತಿಯ ಕಥೆಯನ್ನು ಧರ್ಮರಾಯನಿಗೆ ಹೇಳಿದರು. ಹಿಂದೆಯೂ ನಿನ್ನಂತೆ ಕಷ್ಟವನ್ನನುಭವಿಸಿ ಮತ್ತೆ ಸುಖವನ್ನು ಪಡೆದವರಿದ್ದಾರೆ ಎಂದು ಸಂತೈಸಿದರಂತೆ.

ಕನಕದಾಸನು ಮೂಲವನ್ನು ಅಲ್ಲಲ್ಲಿ ವ್ಯತ್ಯಾಸಮಾಡಿಕೊಂಡು 'ನಳಚರಿತ್ರೆ' ಯನ್ನು ಭಾಮಿನಿ ಷಟ್ಪದಿಯಲ್ಲಿ ರಚಿಸಿದ್ದಾನೆ. ಕನಕದಾಸನಿಗಿಂತ ಹಿಂದೆಯೇ ಚೌಂಡರಸನು 'ನಳಚಂಪು'ವನ್ನು ಬರೆದಿದ್ದನು. ಆದರೆ ಷಟ್ಪದಿಯಲ್ಲಿರುವ ಈ ಕೃತಿ ಜನಪ್ರಿಯತೆ ಗಳಿಸಿತು. ಕನಕದಾಸನು ಒಳ್ಳೆಯ ಕಥನಕಾರನಾಗಿದ್ದು ಅತಿಯಾದ ವರ್ಣನೆಗಳ ವ್ಯಾಮೋಹವಿಲ್ಲವಾದ್ದರಿಂದ 'ನಳ ಚರಿತ್ರೆ' ಸ್ಫುಟವಾಗಿ ಮೂಡಿದೆ. ನಳದಮಯಂತಿಯರ ವಿವಾಹಪೂರ್ವ ಅನುರಾಗ, ದೂತನಾಗಿ ಹಂಸಪಕ್ಷಿಯ ಓಡಾಟ, ದಮಯಂತಿಯ ಸ್ವಯಂವರ, ಇಂದ್ರಾದಿ ದೇವತೆಗಳು ಮೊದಲು ದಮಯಂತಿಯಲ್ಲಿ ಮನವಿಟ್ಟರೂ ಕೊನೆಗೆ ಮಗಳಂತೆ ಭಾವಿಸಿ ನಳನಿಗೇ ಅವಳನ್ನು ಒಪ್ಪಿಸಿಕೊಟ್ಟುದು, ಕಲಿಯಕೋಪ, ಪುಷ್ಕರನೊಂದಿಗೆ ಕಲಿಯೂ ಸೇರಿ ನಳಚಕ್ರವರ್ತಿಯನ್ನು ಜೂಜಿನಲ್ಲಿ ಸೋಲಿಸಿ ರಾಜ್ಯವನ್ನಪಹರಿಸಿದ್ದೂ—ಈ ಭಾಗಗಳನ್ನೆಲ್ಲಾ ಹಿತಮಿತವಾಗಿ ಉಚಿತ ರೀತಿಯಲ್ಲಿ ಕವಿ ನಿರೂಪಿಸಿದ್ದಾನೆ. ಮಕ್ಕಳನ್ನು ತಂದೆಯ ಮನೆಗೆ ಕಳುಹಿಸಿ ಪತಿಯೊಡನೆ ಕಾಡಿಗೆ ನಡೆದ ದಮಯಂತಿಯನ್ನು ಹಿಂದಿರುಗಿಸಲು ನಳ ಪ್ರಯತ್ನಿಸುತ್ತಾನೆ. ಆದರೆ ಅವಳು ಒಪ್ಪುವುದಿಲ್ಲ. ವಿಧಿಯಿಲ್ಲದೆ ರಾತ್ರಿಯ ಹೊತ್ತು ಮಲಗಿದ ವೇಳೆಯಲ್ಲಿ ಅವಳನ್ನು ಬಿಟ್ಟು ಹೊರಟುಹೋಗುತ್ತಾನೆ. ಇದು ನಳಚರಿತ್ರೆಯ ಅತ್ಯುತ್ತಮ ಸನ್ನಿವೇಶಗಳಲ್ಲಿ ಒಂದು. ಕನಕದಾಸನು ವರ್ಣನಾ ವ್ಯಾಮೋಹಕ್ಕೆ ಸಾಮಾನ್ಯವಾಗಿ ಬಲಿ ಬೀಳುವುದಿಲ್ಲ. ಆದರೆ ಮಾನವ ಭಾವನೆಗಳೊಂದಿಗೆ ಪ್ರಕೃತಿಯ ಚಟುವಟಿಕೆಗಳನ್ನು ಸುಂದರವಾಗಿ ಹೊಂದಿಸಿ ಬಣ್ಣಿಸುವ ಕಲೆಗಾರಿಗೆ ಆತನಿಗೆ ಸಿದ್ಧಿಸಿದೆ. ಅಡವಿಯಲ್ಲಿ ನಳ–ದಮಯಂತಿಯರು ಪರಿತಪಿಸುತ್ತಿದ್ದಾಗ ಕತ್ತಲೆ ಕವಿಯುವ ರೀತಿಯನ್ನು ಕವಿ ಹೀಗೆ ವರ್ಣಿಸಿದ್ದಾನೆ:

ಲೋಕಕಧಿಪತಿ ನಳನ ರಾಣಿಗೆ
ಶೋಕ ಪರ್ಬಿವ ತೆರದಿ ಕತ್ತಲೆ
ಲೋಕವನು ಮುಸುಕಿದುದು ಧರಣಿಯ ಮುಚ್ಚಿದಂದದಿ
ಭೀಕರ ಧ್ವನಿಗಳಿಗೆ ಹೆದರಿದ
ಳಾ ಕಮಲಲೋಚನೆಯು ಕಂಡು ವಿ
ವೇಕನಿಧಿ ಸಂತೈಸಿ ಬಿಗಿಯಪ್ಪಿದನು ತೂಬರಿದು

ನಳನು ದಮಯಂತಿಯನ್ನು ತೊರೆದು ಮನಸ್ಸಿಲ್ಲದ ಮನಸ್ಸಿನಿಂದ ಹೊರಟು ಹೋದಮೇಲೆ, ಅಡವಿಯಲ್ಲಿ ಏಕಾಂಗಿಯಾಗಿರುವ ಸತಿಯ ಕಷ್ಟವೇನೋ ಎಂಬುದನ್ನು ಕನಿಕರದಿಂದ ವಿಚಾರಿಸಲು ಬಂದಂತೆ ಸೂರ್ಯ ಹುಟ್ಟಿದನಂತೆ. ಮುಂದೆ ದಮಯಂತಿ ಅಡವಿಯಲ್ಲಿ ಸರ್ಪನಿಗೆ ತುತ್ತಾಗುವುದರಲ್ಲಿದ್ದಾಗ ಒಬ್ಬ ಬೇಡ ಬಿಡಿಸಿದ. ಅವನ ಕಾಮಕ್ಕೆ ದಮಯಂತಿ ಬಲಿಯಾಗದೆ ಅಕಸ್ಮಾತ್ತಾಗಿ ಸಿಕ್ಕಿದ ವ್ಯಾಪಾರಿಗಳೊಡನೆ ಚೈದ್ಯ ನಗರವನ್ನು ಸೇರಿದಳು. ಅಲ್ಲಿಯ ಮಹಾ ರಾಣಿಯ ಊಳಿಗದಲ್ಲಿರುವಾಗ ವಿದರ್ಭ ನಗರದ ಗೂಢಚಾರರು ಅವಳನ್ನು ಪತ್ತೆಹಚ್ಚಿ ತಮ್ಮ ರಾಜನಿಗೆ ತಿಳಿಸಿದರು. ಕೂಡಲೇ ಭೀಮಭೂಪಾಲನು ಮಗಳನ್ನು ಕರೆಸಿಕೊಂಡನು. ಇತ್ತ ನಳನು ದಮಯಂತಿಯ ಯೋಚನೆ ಯಲ್ಲಿಯೇ ಮುಂದುವರೆಯುತ್ತಿರುವಾಗ ದಾವಾಗ್ನಿಗೆ ಸಿಕ್ಕಿದ ಸರ್ಪವೊಂದನ್ನು ಬಿಡಿಸಿದನು. ನೀರಿನ ಹತ್ತಿರ ತಂದು ಅದನ್ನು ಉಪಚರಿಸುತ್ತಿರುವಾಗ ಆತ ನನ್ನು ಸರ್ಪ ಕಚ್ಚಿಬಿಟ್ಟಿತು. ಕ್ಷಣಾರ್ಧದಲ್ಲಿ ಅವನ ರೂಪ ವಿಕಾರಗೊಂಡಿತು. ನಳನಿಗೆ ಉಪಕಾರ ಮಾಡುವುದಕ್ಕಾಗಿಯೇ ಹೀಗೆ ಮಾಡಿದುದಾಗಿ ಹೇಳಿದ ಸರ್ಪ ಮುಂದೆ ಬೇಕಾದಾಗ ಮರಳಿ ರೂಪವನ್ನು ಪಡೆಯುವ ರಹಸ್ಯವನ್ನೂ ಹೇಳಿಕೊಟ್ಟಿತು. ಅಲ್ಲಿಂದ ನಳನು ಋತುಪರ್ಣ ರಾಜನಲ್ಲಿ ಸಾರಥಿಯಾಗಿ, ದಮಯಂತಿಗೆ ಮರುಸ್ವಯಂವರವೆಂಬ ವಾರ್ತೆಕೇಳಿ ಋತುಪರ್ಣನೊಡನೆ ವಿದರ್ಭ ನಗರಕ್ಕೆ ಹೋದನು. ಈ ಸ್ವಯಂವರ ವಾರ್ತೆ ಕೇವಲ ನಳನನ್ನು ಅಲ್ಲಿಗೆ ಕರೆಸಿಕೊಳ್ಳಲು ದಮಯಂತಿ ಹಾಕಿದ ಹಂಚಿಕೆ ಎಂಬ ವಿಚಾರ ಗೊತ್ತಾಯಿತು. ನಳದಮಯಂತಿಯರು ಒಂದಾದರು. ಕಲಿಪುರುಷನೂ ಅವನನ್ನು ಬಿಟ್ಟು ಹೊರಟುಹೋದ. ಮರಳಿ ರೂಪವನ್ನು ಪಡೆದುಕೊಂಡ. ರಾಜ್ಯಕ್ಕೆ ಹಿಂತಿರುಗಿ ಪುಷ್ಕರನನ್ನು ಜೂಜಿನಲ್ಲಿ ಸೋಲಿಸಿ ಎಲ್ಲವನ್ನೂ ಹಿಂದಕ್ಕೆ ಪಡೆದುಕೊಂಡ.

'ನಳಚರಿತ್ರೆ' ಒಂದು ಆದರ್ಶ ಮಾದರಿಯ ಕಥನಕಾವ್ಯ, ಯಾವುದೇ ರೀತಿಯ ಕುಸುರಿ ಕೆಲಸ, ವರ್ಣನೆ ಮುಂತಾದುವುಗಳಿಗೆ ತೊಡಗದೆ ಕೇವಲ ಕಥನ ದೃಷ್ಟಿಯಿಂದ ಮುಂದುವರೆಯುವ ಕನಕದಾಸನು ಸಹಜ ಕವಿಯಂತೆ ಅಲ್ಲಿ ಮೆರೆದಿದ್ದಾನೆ. ಕಾರ್ಕೋಟಕನು ಕಚ್ಚಿದಾಗ ಮನ್ಮಥನಂಥ ನಳನ ರೂಪ ಹೇಗೆ ವಿಕಾರವಾಯಿತೆಂಬುದನ್ನು ಎಷ್ಟು ಸರಳವಾಗಿ ಆದರೆ ಮನಸ್ಸನ್ನು ತೀವ್ರವಾಗಿ ತಟ್ಟಿ ತಲ್ಲಣಗೊಳಿಸುವಂತೆ ವಿವರಿಸಿದ್ದಾನೆಂಬುದನ್ನು ನೋಡಬಹುದು.

ದೊಡ್ಡ ಹೊಟ್ಟೆಯ ಗೂನು ಬೆನ್ನಿನ
ಅಡ್ಡ ಮೋರೆಯ ಗಂಟು ಮೂಗಿನ
ದೊಡ್ಡ ಕೈಕಾಲುಗಳ ಉದುರಿದ ರೋಮ ಮೀಸೆಗಳ
ಜಡ್ಡು ದೇಹದ ಗುಜ್ಜುಗೊರಲಿನ
ಗಿಡ್ಡು ರೂಪಿನ ಹರಕುಗಡ್ಡದ
ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ

ದಮಯಂತಿಯನ್ನು ಅಡವಿಯಲ್ಲಿ ತೊರೆದು ಹೋಗುವ ನಳನ ಮನಸ್ಸಿನ ತವಕ, ದುಃಖವನ್ನು ಕೇವಲ ಸಂದೇಹಗಳ ಮಾಲೆಯಲ್ಲೇ ಪೋಣಿಸಿ ಮಾರ್ಮಿಕವಾಗಿ ನಿರೂಪಿಸಿದ್ದಾನೆ :

ವನಿತೆ ಮಲಗಿಹಳೊ ಅಧೈರ್ಯದಿ
ನೆನೆವಳೋ ದೈವವನು ನಿದ್ರೆಯ
ಕನಸ ಕಂಡೇಳುವಳೊ ಕಾಣದೆ ಹಲವ ಹಂಬಲಿಸಿ
ಕನಲಿ ವಿಧಿಯನು ಬೈವಳೋ ಕಂ
ಬನಿಯ ಸುರಿವಳೊ ಶೋಕದಲಿ ನಿಜ
ತನುವ ಬಿಡುವಳೊ ಕಾಂತೆಯೆಂತಿಹಳೆನುತ ಬಿಸುಸುಯ್ದು

ಸರಳವಾದ ನೇರ ಕಥನಮಾರ್ಗವೇ ಕನಕದಾಸನಿಗೆ ಪ್ರಿಯವಾದರೂ ಹವಣರಿತು ಅಲಂಕಾರಗಳನ್ನೂ ಬಳಸುವುದುಂಟು. ಕಾರ್ಕೋಟಕನಿಂದ ಕಚ್ಚಿಸಿಕೊಂಡ ನಳ "ತೋರಮಾಣಿಕವೆಂದು ಪಿಡಿದಡೆ ಭೂರಿಕೆಂಡವಿದಾಯ್ತು ಶಿವ ಶಿವಾ" ಎಂದು ಗೋಳಾಡಿದನಂತೆ. ಸಾಂಗತ್ಯವಾದರೂ ಮೋಹನ ತರಂಗಿಣಿ ಒಂದು ರೀತಿಯಲ್ಲಿ ಪ್ರೌಢಕಾವ್ಯ. ಅದರೊಂದಿಗೆ ನಳಚರಿತ್ರೆಯನ್ನು ಹೋಲಿಸಿದರೆ ಇಲ್ಲಿನ ಕಥನಶೈಲಿ ಹೆಚ್ಚಾಗಿ ಜನಪದ ಧಾಟಿಯಲ್ಲಿರುವುದನ್ನು ಗುರುತಿಸಬಹುದು. ಕನ್ನಡ ಕವಿಗಳಲ್ಲಿ ಜನಜೀವನದೊಂದಿಗೆ ಬೆರೆತು ತಮ್ಮ ಅನುಭವವನ್ನು ಸಮೃದ್ಧಿಪಡಿಸಿಕೊಂಡವರು ತೀರಾ ವಿರಳವಾಗಿ ಸಿಗುತ್ತಾರೆ ; ಅಂಥವರಲ್ಲಿ ಕನಕದಾಸ ಅಗ್ರಗಣ್ಯನಾದವನು.

'ಹರಿಭಕ್ತಿಸಾರ'–ನೀತಿ, ವೈರಾಗ್ಯಗಳನ್ನು ಉಪದೇಶಿಸುವ ಒಂದು ಪುಟ್ಟ ಕೃತಿ. ನೂರಹತ್ತು ಪದ್ಯಗಳಿವೆ. ಭಾಮಿನಿ ಷಟ್ಪದಿಯಲ್ಲಿರುವ ಈ ಕಾವ್ಯ ಕನ್ನಡದ ಕೆಲವೇ ಜನಪ್ರಿಯ ನೀತಿಕಾವ್ಯಗಳಲ್ಲಿ ಒಂದು. ಎಲ್ಲ ಪದ್ಯಗಳೂ 'ರಕ್ಷಿಸು ನಮ್ಮನನವರತ' ಎಂಬ ಬೇಡಿಕೆಯೊಂದಿಗೆ ಮುಗಿಯುತ್ತವೆ. ಭಕ್ತಿ–ವಿರಕ್ತಿಗಳೆರಡೂ ಇದರಲ್ಲಿ ತನಿಯಾಗಿ ಬೆರೆತುಕೊಂಡಿವೆ. ಹೃದ್ಯವಾದ ಶೈಲಿಯಲ್ಲಿರುವ ಈ ಕಾವ್ಯದಲ್ಲಿ ಭಗವಂತನ ನಾಮಸಂಕೀರ್ತನೆ, ಆತನ ಲೀಲೆಯನ್ನು ದೃಷ್ಟಾಂತಗಳ ಮೂಲಕ ಹೇಳುವುದು, ತತ್ವನಿರೂಪಣೆ– ಹೀಗೆ ಭಾಗವತ ಸಂಪ್ರದಾಯದ ಎಲ್ಲ ವೈಶಿಷ್ಟ್ಯವನ್ನೂ ಗುರುತಿಸಬಹುದು. ತತ್ವಾರ್ಥವನ್ನು ಮನಮುಟ್ಟುವಂತೆ ವಿವರಿಸಲು ಇಲ್ಲಿ ಆತ ಕೊಡುವ ಉಪಮೆಗಳು ಮನಮೋಹಕವಾಗಿವೆ :

ಗಿಳಿಯ ಮರಿಯನು ತಂದು ಪಂಜರ
ದೊಳಗೆ ಪೋಷಿಸಿ ಕಲಿಸಿ ಮೃದುನುಡಿ
ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀನೆನಗೆ
ತಿಳುಹಿ ಮತಿಯನು ಎನ್ನ ಜಿಹ್ವೆಗೆ
ಮೊಳಗುವಂದಲಿ ನಿನ್ನ ನಾಮಾ
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ

ಭಕ್ತಿ ವೈರಾಗ್ಯವೇ ಈ ಕೃತಿಯ ವೈಶಿಷ್ಟ್ಯವಾದರೂ ಅಲ್ಲಲ್ಲಿ ಸಾಮಾಜಿಕ ನಡವಳಿಕೆಯ ಸೂಕ್ಷ್ಮ ವಿಮರ್ಶೆಯನ್ನೂ ಕಾಣಬಹುದು :

ಎಂಜಲೆಂಜಲು ಎಂಬರಾನುಡಿ
ಎಂಜಲಲ್ಲವೆ ವಾರಿ ಜಲಚರ
ದೆಂಜಲಲ್ಲವೆ ಹಾಲು ಕರುವಿನ ಎಂಜಲೆನ್ನಿಸದೆ
ಎಂಜಲೆಲ್ಲಿಯದೆಲ್ಲಿಯುಂ ಪರ
ರೆಂಜಲಲ್ಲದೆ ಬೇರೆ ಭಾವಿಸ
ಲೆಂಜಲುಂಟೇ ದೇವ ರಕ್ಷಿಸು ನಮ್ಮನನವರತ

'ಹರಿಭಕ್ತಿಸಾರ'ವನ್ನು ಕನಕದಾಸನು ತನ್ನ ಪರಿಣತ ವಯಸ್ಸಿನಲ್ಲಿ ಬರೆದನೆಂದು ವಿದ್ವಾಂಸರು ಹೇಳುತ್ತಾರೆ. ಭಗವದ್ ಭಕ್ತರಿಗೆ ಪಾರಾಯಣ ಗ್ರಂಥವಾಗಿ ಇದು ಪರಿಣಮಿಸಿದೆ. ಕನ್ನಡ ನಾಡಿನ ಶಾಲೆಗಳಲ್ಲಿ ಈ ಕೃತಿಯ ಪದ್ಯಗಳನ್ನು ಬಾಯಿಪಾಠ ಮಾಡಿಸುವ ರೂಢಿ ಮೊನ್ನೆಮೊನ್ನೆಯವರೆಗೂ ಇತ್ತು.

'ರಾಮಧಾನ್ಯಚರಿತೆ' ಸುಂದರವಾದ ಒಂದು ಚಿಕ್ಕಕಾವ್ಯ. ಕೇವಲ ನೂರೈವತ್ತೆಂಟು ಷಟ್ಪದಿಗಳಲ್ಲಿ ರಾಮಾಯಣವನ್ನೂ, ಅದಕ್ಕೆ ಸೇರದಂತೆ ರಾಗಿ, ಭತ್ತಗಳ ಕಥೆಯನ್ನೂ ಕವಿ ಸ್ವಾರಸ್ಯಕರವಾಗಿ ನಿರೂಪಿಸಿದ್ದಾನೆ.

ಶ್ರೀರಾಮಚಂದ್ರನು ರಾವಣನನ್ನು ಕೊಂದು ಸೀತಾ ಸಮೇತ ಅಯೋಧ್ಯೆಗೆ ಹಿಂದಿರುಗುತ್ತಿರುವ ದಾರಿಯಲ್ಲಿ ಗೌತಮ ಋಷಿಯ ಆಶ್ರಮದಲ್ಲಿ ಅವರ ಆತಿಥ್ಯವನ್ನು ಸ್ವೀಕರಿಸುತ್ತಾನೆ. ಜೇನುತುಪ್ಪ, ಬೆಲ್ಲ, ಸಕ್ಕರೆಗಳ ರಸಾಯನ, ವಿವಿಧ ಧಾನ್ಯಗಳಿಂದ ಮಾಡಿದ ಭಕ್ಷ್ಯಗಳನ್ನು ಅವರು ಬಡಿಸಿದರು. ವಿವಿಧ ಧಾನ್ಯಗಳ ರುಚಿಯ ತಾರತಮ್ಯ ಕುರಿತು ಹನುಮಂತ, ರಾಮ ಮತ್ತು ಗೌತಮರ ನಡುವೆ ಸಂಭಾಷಣೆ ನಡೆಯಿತು. ಗೌತಮನು ನರೆದಲಗ ಅಥವಾ ರಾಗಿಯನ್ನು ಹೊಗಳಿದನು. ಆಗ ವ್ರೀಹಿ ಅಥವಾ ಭತ್ತಕ್ಕೆ ಪಿತ್ತಕೆರಳಿ ರಾಗಿಯನ್ನು ಹೀನಾಮಾನ ನಿಂದಿಸಿ ತನ್ನ ಪ್ರತಿಷ್ಠೆಯನ್ನು ಕೊಚ್ಚಿಕೊಂಡಿತು :

ಲೋಕದಲಧಿಕ ಭೋಜನವಿದೆಂ
ದಾಕೆವಾಳರು ಬುಧರು ಜರೆದು ನಿ
ರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ
ನಾಕನಿಳಯರು ಸಾಕ್ಷಿ ನಿನ್ನ ವಿ
ವೇಕಿಗಳು ಮೆಚ್ಚುವರೆ ಬಾಹಿರ
ಸಾಕು ನಡೆ ನೀನಾವ ಮಾನ್ಯನು ಕಡೆಗೆ ತೊಲಗೆಂದ

ಕ್ಷಿತಿಯಮರರುಪನಯನದಲಿ ಸು
ವ್ರತ ಸುಭೋಜನ ಪರಮ ಮಂತ್ರಾ
ಕ್ಷತೆಗಳಲಿ ಶುಭಶೋಭನದಲಾರತಿಗೆ ಹಿರಿಯರಲಿ
ಕ್ರತುಗಳೆಡೆಯೊಳಗರಮನೆಯಲಿ
ಪ್ರತಿದಿನವು ರಂಜಿಸುತ ದೇವರಿ
ಗತಿಶಯದ ನೈವೇದ್ಯ ತಾನಹೆನೆಂದನಾ ವ್ರಿಹಿಗ

ಅಷ್ಟು ಸಾಲದೆ ಭತ್ತವು ತನ್ನನ್ನು ಚಂದನ, ಗೋವಿನ ಹಾಲು, ವೀರಹನುಮ, ಸುರನದಿ, ಹಂಸ ಇವುಗಳಿಗೆ ಹೋಲಿಸಿಕೊಂಡು ರಾಗಿಯನ್ನು ಒಣಗಿದ ಸೌದೆ, ಕುರಿಯ ಹಾಲು, ಮರದ ಮೇಲಿನ ಕಪಿ, ಕಾಡಹಳ್ಳ ಬಕ, ಕಾಗೆಗಳಿಗೆ ಹೋಲಿಸುತ್ತದೆ. ಇಷ್ಟೆಲ್ಲಾ ನಿಂದೆಯನ್ನು ಕೇಳಿದ ರಾಗಿಯು ಕನಲಿ ಭತ್ತವನ್ನು ತರಾಟೆಗೆ ತೆಗೆದುಕೊಳ್ಳುತ್ತದೆ. ಎಷ್ಟಾದರೂ ಶೂದ್ರಾನ್ನವಲ್ಲವೇ ? ಸ್ವಲ್ಪ ಸಹಜ ಒರಟು ; ಆದರೆ ನೇರನುಡಿ :

ಸತ್ಯಹೀನನು ಬಡವರನು ಕ
ಣ್ಣೆತ್ತಿ ನೋಡೆ ಧನಾಢ್ಯರನು ಬೆಂ
ಬತ್ತಿ ನಡೆವವುಪೇಕ್ಷೆ ನಿನ್ನದು ಹೇಳಲೇನದನು
ಹೆತ್ತ ಬಾಣಂತಿಯರು ರೋಗಿಗೆ
ಪತ್ಯ ನೀನಹೆ ಹೆಣದ ಬಾಯಿಗೆ
ತುತ್ತು ನೀನಹೆ ನಿನ್ನ ಜನ್ಮ ನಿರರ್ಥಕರವೆಂದ

ಬಲ್ಲಿದರು ಬರೆ ಬಡವರಲಿ ನಿ
ನ್ನಲ್ಲಿಯುಂಟು ವುಪೇಕ್ಷೆ ನಮ್ಮಲಿ
ಸಲ್ಲದೀ ಪರಿ ಪಕ್ಷಪಾತವದಿಲ್ಲ ಭಾವಿಸಲು
ಬಲ್ಲಿದರು ಬಡವರುಗಳೆನ್ನದೆ
ಎಲ್ಲರನು ರಕ್ಷಿಸುವೆ ನಿರ್ದಯ
ನಲ್ಲ ತಾ ನಿನ್ನಂತೆ ಎಲ ಕುಟಿಲಾತ್ಮ ಹೋಗೆಂದ

ರಾಗಿ – ಭತ್ತಗಳ ವಾದ – ವಿವಾದವು ಬಗೆಹರಿಯದ ಸಮಸ್ಯೆಯೆಂದರಿತ ಶ್ರೀರಾಮಚಂದ್ರನು ಅವೆರಡನ್ನೂ ತಾತ್ಕಾಲಿವಾಗಿ ಸೆರೆಯಲ್ಲಿಟ್ಟು ಮುಂದೆ ಅಯೋಧ್ಯೆಯಲ್ಲಿ ವಿಚಾರಣೆ ನಡೆಸುತ್ತಾನೆ. ಆರು ತಿಂಗಳ ಸೆರೆವಾಸದಿಂದ ಭತ್ತ ಕಂಗೆಟ್ಟು ಹೋಗಿರುತ್ತದೆ. ರಾಗಿ ಧೃಢವಾಗಿರುತ್ತದೆ. ಇಂದ್ರ ಮೊದ ಲಾಗಿ ಎಲ್ಲ ಸಭಿಕರು ರಾಗಿಯನ್ನು ಹೊಗಳಿ ಉಡುಗೊರೆಗಳನ್ನು ಕೊಡು ತ್ತಾರೆ. ಶ್ರೀರಾಮಚಂದ್ರನು ರಾಗಿಯ ಪರವಾಗಿಯೇ ತೀರ್ಪುಕೊಟ್ಟು ತನ್ನ 'ರಾಘವ' ಎಂಬ ಹೆಸರನ್ನು ಅದಕ್ಕೆ ಅನುಗ್ರಹಿಸುತ್ತಾನೆ. ರಾಗಿ ಎಂಬ ಹೆಸರು ಅಂದಿನಿಂದ ಈ ಧಾನ್ಯಕ್ಕೆ ಬಂದಿತಂತೆ. ಗೆದ್ದಮೇಲೆ ರಾಗಿಯೂ ಭತ್ತದ ವಿಚಾರವಾಗಿ ವೈರ ಸಾಧಿಸದೆ ವಿಶ್ವಾಸದಿಂದ ಮಾತಾಡಿ ಚೋಳ ದೇಶಕ್ಕೆ ಕಳುಹಿಸಿತಂತೆ. ಹೀಗೆ ಭತ್ತವು ಮದ್ರಾಸ್ ಪ್ರಾಂತ್ಯದಲ್ಲಿಯೂ, ರಾಗಿಯು ಮೈಸೂರು ಪ್ರಾಂತ್ಯದಲ್ಲಿಯೂ ನೆಲೆಸಿ ಆಹಾರವನ್ನು ಒದಗಿಸಿವೆ.

ರಾಮಾಯಣದ ಕಥೆಯನ್ನೇ ಸಂಗ್ರಹವಾಗಿ ಹೇಳುತ್ತಾ ರಾಗಿಯ ಕಥೆ ಯನ್ನು ಅಲ್ಲಿಗೆ ಹೊಂದಿಸಿರುವ ಕವಿಯ ಬುದ್ಧಿವಂತಿಕೆಯನ್ನು ಇಲ್ಲಿ ಮೆಚ್ಚ ಬೇಕು. ರಾಮಾಯಣದ ಜೊತೆ ಬಂದಿರುವುದರಿಂದ ರಾಗಿಯ ಕಥೆಯೂ ಚಿರಸ್ಥಾಯಿಯಾಗಿ ಉಳಿಯುತ್ತದೆ. ಮೇಲುನೋಟಕ್ಕೆ ಭಗವಂತನು ಬಡವರ ಕೈವಾರಿ ಎಂಬುದನ್ನು ಸೂಚಿಸುವುದಷ್ಟೇ ಈ ಕಥೆಯ ಅರ್ಥವೆಂದು ತೋರ ಬಹುದು. ನಿಜವಾಗಿ ಇದೊಂದು ವಿಡಂಬನೆ. ಇಡೀ ಕಥೆಯೇ ಸೊಗಸಾದ ಒಂದು ರೂಪಕ. ಕನಕದಾಸನು ಹೀನಕುಲದಲ್ಲಿ ಹುಟ್ಟಿ ದಾಸಪರಂಪರೆಯನ್ನು

ಸೇರಿದ. ಅಲ್ಲಿ ಉದಾರಿಗಳು ಇದ್ದರು. ಆದರೆ ಜಾತಿಯ ಒಣಪ್ರತಿಷ್ಠೆಯವರೇ ಹೆಚ್ಚಿಗೆ ಇರುವ ಸಂಭವವಿದೆ. ಕನಕದಾಸನ ಜೀವನದಲ್ಲಿ ಉಡುಪಿ ಶ್ರೀಕೃಷ್ಣ ದೇವಸ್ಥಾನದ ಘಟನೆಯಂಥವು ಅನೇಕ ನಡೆದಿರಬಹುದು. ಈ ಜಾತಿಮದವನ್ನು ತನ್ನ ಕೀರ್ತನೆಗಳಲ್ಲಿ ಖಂಡಿಸಿ ಸೂಕ್ಷ್ಮವಾಗಿ ಆತ ಎಚ್ಚರಿಸಿರುವುದೂ ಉಂಟು. ಆದರೂ ಮೇಲುಜಾತಿಯನ್ನು ಕುರಿತ ಅವನ ಕೋಪ ತಿರಸ್ಕಾರಗಳೆಲ್ಲಾ ಒಗ್ಗೂಡಿ 'ರಾಮಧಾನ್ಯ ಚರಿತೆ' ಯಂಥ ವಿಡಂಬನ ಕಾವ್ಯ ಸೃಷ್ಟಿಗೆ ಪ್ರೇರಣೆ ಕೊಟ್ಟಿರಬಹುದು. ಈ ಕಾವ್ಯದಲ್ಲಿ ಭತ್ತವು ಸ್ಪಷ್ಟವಾಗಿ ಮೇಲುವರ್ಗದ ಪ್ರತಿನಿಧಿಯಾಗಿಯೂ, ರಾಗಿಯು ದಲಿತರ ಪ್ರತಿನಿಧಿಯಾಗಿಯೂ ಚಿತ್ರಿಸಲ್ಪಟ್ಟಿವೆ. ಪುರಾಣ ಕಥೆಯಲ್ಲಿಯೇ ಸಮಕಾಲೀನ ಸಮಾಜದ ಚಿತ್ರವನ್ನಳವಡಿಸಿ ಜಾನಪದ ಧಾಟಿಯಲ್ಲಿ ಸುಂದರ ರೂಪಕ ಕಾವ್ಯವೊಂದನ್ನು ಕನ್ನಡಕ್ಕೆ ನೀಡಿದ ಕನಕದಾಸನನ್ನು ಎಷ್ಟು ಕೊಂಡಾಡಿದರೂ ಸಾಲದು.

ಕನಕದಾಸನ 'ತಿರುಕನ ಕನಸು' ಎಂಬ ಚಿಕ್ಕ ಪದ್ಯಕಥೆಯನ್ನು ಬಾಯಿಪಾಠ ಮಾಡದ ಕನ್ನಡಿಗನಿಲ್ಲ. ಅವಿದ್ಯಾವಂತರೂ ಇದನ್ನು ಕೇಳಿದ್ದಾರೆ. 'ಧರೆಯ ಭೋಗವನ್ನು ನೋಡಿ ಹರಿಯ ಮರೆದು ಕೆಡಲು ಬೇಡ ಧರೆಯ ಭೋಗ ಕನಸಿನಂತೆ ಕೇಳು ಮಾನವ' ಎಂಬ ನೀತಿವಾಕ್ಯವೊಂದನ್ನು ಹೇಳಿ ಅದಕ್ಕೆ ದೃಷ್ಟಾಂತವಾಗಿ ಷಟ್ಪದಿಯಲ್ಲಿ ಈ ಕಥೆ ಬರುತ್ತದೆ. ತಿರುಕನಿಗೆ ರಾಜನಾದಂತೆ ಕನಸು ಬಿದ್ದದ್ದು, ಕನಸಿನಲ್ಲಿಯೇ ಸತಿಸುತಸಂಭ್ರಮ, ಮಕ್ಕಳ ಮದುವೆ, ಕೊನೆಗೆ ವೈರಿರಾಜರು ಇವನ ರಾಜ್ಯವನ್ನೂ ಮುತ್ತುತ್ತಾರೆ; ಭಯದಿಂದ ಕಣ್ಣು ತೆರೆಯಲು ತಾನು ಕೇವಲ ಒಬ್ಬ ತಿರುಕನೆಂಬುದು ನೆನಪಿಗೆ ಬರುತ್ತದೆ. ತತ್ವಾರ್ಥಗಳನ್ನು ರೂಪಕ ಕಥೆಯ ಮೂಲಕ ಇಲ್ಲಿ ಪ್ರತಿಪಾದಿಸಲಾಗಿದೆ. ಭೋಗದ ಮಿಥ್ಯತೆಯನ್ನು ಮನಮುಟ್ಟುವಂತೆ ಹೇಳಲಾಗಿದೆ. ಮಕ್ಕಳಿಗೂ ಅರ್ಥವಾಗುವಂತಿದೆ ಎಂಬ ಮಾತೇ ಇಲ್ಲಿ ಅಗತ್ಯವಿಲ್ಲ. ಇದನ್ನು ಮಕ್ಕಳಿಗಾಗಿಯೇ ಬರೆದಿದ್ದಾರೆ ಎಂದೂ ಕೆಲವರು ಭಾವಿಸಿದ್ದಾರೆ. ಕನಸಿನಲ್ಲಿದ್ದ ಭಾಗ್ಯವೆಲ್ಲಾ ಎಚ್ಚರವಾದಾಗ ಮಾಯವಾಗಿರುತ್ತದೆ. ಆದರೆ ತಿರುಕನ ಬದುಕೇ ಇದರಿಂದ ಅಸ್ತವ್ಯಸ್ತವಾಯಿತಂತೆ. ಮುಂದಿನ ದಿನಗಳಲ್ಲಿ ಭಿಕ್ಷೆ ಬೇಡುವುದಕ್ಕೆ ಆತ ನಾಚಿಕೆಪಡುತ್ತಿದ್ದನಂತೆ. ಕನಸಿನಲ್ಲಿಯೇ ಆಗಿರಲಿ, ಒಮ್ಮೆ ರಾಜನಾಗಿದ್ದವನಲ್ಲವೇ ? ಅಧಿಕಾರದಿಂದ ಪದಚ್ಯುತರಾಗಿಯೋ, ನಿವೃತ್ತರಾಗಿಯೋ ರೆಕ್ಕೆ ಕತ್ತರಿಸಿದ ಹಕ್ಕಿಗಳಂತೆ ಚಡಪಡಿಸುವ ಎಷ್ಟು ಜನರನ್ನು

ನಾವು ಸುತ್ತಮುತ್ತ ನೋಡಿಲ್ಲ ? ಅವರಿಗೆಲ್ಲಾ ಈ ತಿರುಕನ ಕನಸು ಕೊಡುವ ಎಚ್ಚರಿಕೆ : 'ಧರೆಯ ಭೋಗ ಕನಸಿನಂತೆ ಕೇಳು ಮಾನವಾ'.

ಕನಕದಾಸನು ಶ್ರೇಷ್ಠ ಕೀರ್ತನಕಾರ, ಕವಿ. ಕನ್ನಡದ ದಾಸಪರಂಪರೆಯಲ್ಲಿ ಬಂದ ಮಹಾಸಂತರಲ್ಲಿ ಅಗ್ರಗಣ್ಯ. ಇದಕ್ಕಿಂತ ಮಿಗಿಲಾಗಿ ಅವನೆಲ್ಲ ಕೃತಿಗಳಲ್ಲಿಯೂ ಕಂಡುಬರುವ ಮಾನವಪ್ರೇಮ ಅದ್ವಿತೀಯವಾದದ್ದು. ಬದುಕಿನ ಗಾಣದಲ್ಲಿ ಕಬ್ಬಿನಂತೆ ಅರೆಸಿಕೊಂಡು ಅದರ ರಸವನ್ನು ಕಾವ್ಯ, ಕೀರ್ತನೆ ರೂಪದಲ್ಲಿ ಕನ್ನಡಿಗರಿಗೆ ಕೊಟ್ಟಿದ್ದಾನೆ. ಕನಕದಾಸನಂಥ ಮಾನವತಾವಾದಿಗಳು ಯುಗಕ್ಕೊಬ್ಬರು ಸಿಗುತ್ತಾರೆ. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಆತನ ಹೆಸರು ಶಾಶ್ವತವಾಗಿ ಉಳಿಯುವುದು ಅನಿವಾರ್ಯ.

### ಅಡಿ ಟಿಪ್ಪಣಿಗಳು

1 ಬಿ. ಎಸ್. ಕುಲಕರ್ಣಿ, ಸಂ. ಜೀವಂಧರ ಚರಿತೆ, ಪು. 34
2 ಸುಜನಾ, ಪ್ರಬುದ್ಧ ಕರ್ನಾಟಕ, 41–3, ಪು. 190-204
3 ಎಸ್. ಬಸಪ್ಪ, ಸಂ. ಶಿವತತ್ವ ಚಿಂತಾಮಣಿ, ಪು. 76.77
4 ಎಂ. ಎಸ್. ಸುಂಕಾಪುರ ಮತ್ತು ಪಂ. ನಾಗಭೂಷಣ ಶಾಸ್ತ್ರಿ ಸಂ. ಮನೋವಿಜಯ, ಪು. 16
5 ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. 301
6 ಎಚ್. ದೇವೀರಪ್ಪ, ಸಂ. ಸಿಂಗಿರಾಜ ಪುರಾಣ, ಪು. 80
7 ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. 282
8 ಸಿ. ಮಹಾದೇವಪ್ಪ, ಸಂ. ಭಾವಚಿಂತಾರತ್ನ, ಪು. 40
9 ಬಿ. ನಂ. ಚಂದ್ರಯ್ಯ, ಸಂ. ಮಹಾದೇವಿಯಕ್ಕನ ಪುರಾಣ, ಪು. 25
10 ಬೆಟಗೇರಿ ಕೃಷ್ಣಶರ್ಮ, ಕನ್ನಡ ಭಾಗವತ ಕವಿ ಯಾರು ? (ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ)–12–3
11 ಕೆ. ವೆಂಕಟರಾಮಪ್ಪ, ಸಂ. ಕನ್ನಡ ಭಾಗವತ ದಶಮಸ್ಕಂಧ, ಪು. 41
12 ರಂ. ಶ್ರೀ. ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ಪು. 250

## ಲಕ್ಷ್ಮೀಶ

ಷಟ್ಪದಿ ಕಾವ್ಯಗಳಲ್ಲೆಲ್ಲಾ ಜನಪ್ರಿಯತೆಯಲ್ಲಿ ಲಕ್ಷ್ಮೀಶನ 'ಜೈಮಿನಿ ಭಾರತ'ಕ್ಕೆ ಅಗ್ರಮನ್ನಣೆ ಸಿಕ್ಕಿದೆ. ಈ ಶತಮಾನದ ಆರಂಭಕಾಲದವರೆಗೂ ಕನ್ನಡನಾಡಿನ ಶಾಲೆಗಳಲ್ಲಿ ಜೈಮಿನಿ ಭಾರತವನ್ನು ಕಲಿಸುವುದು ಕಡ್ಡಾಯವಾಗಿತ್ತು. ಈ ಕಾವ್ಯವನ್ನು ರಾಗವಾಗಿ ಓದಿ ವ್ಯಾಖ್ಯಾನ ಮಾಡಿ ಜನ ಸಾಮಾನ್ಯರನ್ನು ರಂಜಿಸುವ ಗಮಕಿಗಳಿಗೆ ಹಿಂದೆ ಬಹು ಮರ್ಯಾದೆಯಿತ್ತು. ಈಗ ಅದರ ಜನಪ್ರಿಯತೆ ಕುಗ್ಗಿದೆಯೆಂದರೆ ಇದೊಂದೇ ಕಾವ್ಯಕ್ಕೆ ಈ ಗತಿ ಒದಗಿದೆಯೆಂದು ಅರ್ಥವಲ್ಲ. ಹೊಸ ಅಭಿವ್ಯಕ್ತಿ ಮಾಧ್ಯಮಗಳು, ಮನರಂಜನೆಯ ಸಾಧನಗಳು ಹಳೆಯದನ್ನು ಮರೆಸುತ್ತವೆ. ಮತ್ತೆ ಇವೂ ಒಂದು ದಿನ ಹಳೆಯುವಾಗುತ್ತವೆ ; ಕಾಲಗತಿಯೇ ಹೀಗೆ. ಎಲ್ಲ ಕಾಲಕ್ಕೂ ನಿಲ್ಲಬಲ್ಲ ಮಹಾ ಕೃತಿಗಳು ಕೆಲವು ಮಾತ್ರ. ಉಳಿದವಕ್ಕೆ ಏಳು ಬೀಳುಗಳು ಅನಿವಾರ್ಯ. ಲಕ್ಷ್ಮೀಶನ 'ಜೈಮಿನಿ ಭಾರತ'ಕ್ಕೆ ಹಿಂದಿನಂತೆ ಮಾನ್ಯತೆಯಿಲ್ಲದಿದ್ದರೂ ಈಗಲೂ ಓದಿದಾಗ ಮನಸ್ಸಿಗೆ ಸಂತೋಷ ಕೊಡಬಲ್ಲ ಕೆಲವೇ ಹಳಗನ್ನಡ ಕಾವ್ಯಗಳ ಪಾಲಿಗೆ ಅದು ಸೇರುತ್ತದೆ. ಕನ್ನಡದ ನಾಲ್ವರು ಶ್ರೇಷ್ಠ ಷಟ್ಪದಿ ಕಾರರಲ್ಲಿ ಲಕ್ಷ್ಮೀಶನೂ ಒಬ್ಬ.

ಲಕ್ಷ್ಮೀಶ ಕವಿಯ ವಿಚಾರ ನಮಗೆ ಹೆಚ್ಚು ತಿಳಿದಿಲ್ಲ. ಜೈಮಿನಿ ಭಾರತದ ಒಂದೇ ಒಂದು ಪದ್ಯದಲ್ಲಿ ಆತ ತನ್ನ ಸಂಗತಿಗಳನ್ನು ಹೇಳಿ ಮುಂದೆ ಸಾಗಿದ್ದಾನೆ. ಆತ ಕೊಟ್ಟಿರುವ ಮಾಹಿತಿಗಳೂ ವಿದ್ವಾಂಸರ ವಾದ ವಿವಾದಕ್ಕೆ ತುತ್ತಾಗಿರುವುದರಿಂದ ಬಹುಮತದ ಅಭಿಪ್ರಾಯವನ್ನು ಮಾತ್ರ ಗಣಿಸ ಬಹುದು.

ಲಕ್ಷ್ಮೀಶನ ಊರು ಚಿಕ್ಕಮಗಳೂರು ಜಿಲ್ಲೆಯ ದೇವನೂರು. ಈ ಊರಿನ ಲಕ್ಷ್ಮೀನಾರಾಯಣ ದೇವರು ಈತನ ಇಷ್ಟದೈವ. ಈತ ಯಾವ ರಾಜಾಶ್ರಯದಲ್ಲಿಯೂ ಇರಲಿಲ್ಲ. ತಂದೆಯ ಹೆಸರು ಅಣ್ಣಮಾಂಕ ;

ಭರದ್ವಾಜ ಗೋತ್ರಕ್ಕೆ ಸೇರಿದವನು. ಭಾಗವತ ಸಂಪ್ರದಾಯಕ್ಕೆ ಸೇರಿದ ಈ ಕವಿ ಶ್ರೀವೈಷ್ಣವನಿದ್ದರೂ ಇರಬಹುದು. ಈಗಲೂ ದೇವನೂರಿನಲ್ಲಿ ಲಕ್ಷ್ಮೀನಾರಾಯಣಸ್ವಾಮಿಯ ದೇವಸ್ಥಾನವಿದೆ. ಕವಿಯು ಇದ್ದ ಮನೆಯ ಸ್ಥಳವನ್ನು ಅಲ್ಲಿನ ಜನ ತೋರಿಸುತ್ತಾರೆ. ಆತನ ಪೂರ್ತಿ ಹೆಸರು ಲಕ್ಷ್ಮೀಕಾಂತ ಹೆಬ್ಬಾರ ಎಂದಿತ್ತು, ಎಂದು ದೇವನೂರಿನವರ ಹೇಳಿಕೆ. ಲಕ್ಷ್ಮೀನಾರಾಯಣ ದೇವಸ್ಥಾನದಲ್ಲಿರುವ ಆಳ್ವಾರರುಗಳ ವಿಗ್ರಹದೊಂದಿಗೆ ಕವಿಯ ವಿಗ್ರಹವೂ ಇದೆ. ವಾರ್ಧಕ ಷಟ್ಪದಿಯಲ್ಲಿರುವ ಜೈಮಿನಿ ಭಾರತವಲ್ಲದೆ ಕೆಲವು ಕೀರ್ತನೆಗಳೂ ಲಕ್ಷ್ಮೀಶನ ಹೆಸರಿನಲ್ಲಿ ದೊರೆಯುತ್ತವೆ.

ಸಂಸ್ಕೃತ ಜೈಮಿನಿ ಭಾರತವೇ ಲಕ್ಷ್ಮೀಶನಿಗೆ ಮೂಲ ಆಕರ. ವ್ಯಾಸ ಭಾರತವು ಹಲವು ಪರಂಪರೆಯ ಭಾರತಗಳು ಹುಟ್ಟಲು ಕಾರಣವಾಯಿತು. ಜೈಮಿನಿ ಭಾರತ ಭಾಗವತ ಪರಂಪರೆಗೆ ಸೇರಿದೆ. ಭಾಗವತರು ಮಹಾಭಾರತವನ್ನು ಶ್ರೀಕೃಷ್ಣ ಚರಿತೆಯೆಂದು ಭಾವಿಸುತ್ತಾರೆ. ವ್ಯಾಸ ಭಾರತದಲ್ಲಿ ಶ್ರೀಕೃಷ್ಣನಿಗೆ ಮಹತ್ವವಿದೆಯಾದರೂ ಅದು ಪ್ರಧಾನವಾಗಿ ಕುರು ಪಾಂಡವರ ಕಥೆ. ಜೈಮಿನಿ ಭಾರತದಂತಹ ಭಾಗವತ ಕೃತಿಗಳಲ್ಲಿ ಶ್ರೀಕೃಷ್ಣನೇ ಕಥಾನಾಯಕ.

ಸಂಸ್ಕೃತ ಜೈಮಿನಿ ಭಾರತವನ್ನು ಕುರಿತು ಒಂದು ದಂತಕಥೆಯಿದೆ: ವ್ಯಾಸ ಮಹಾಭಾರತವನ್ನು ವೈಶಂಪಾಯನನಿಂದ ಕೇಳಿದರೂ ಜನಮೇಜಯ ರಾಯನಿಗೆ ಸರ್ಪಹತ್ಯಾ ದೋಷದಿಂದಾದ ಕುಷ್ಠರೋಗವು ಗುಣವಾಗಲಿಲ್ಲ. ವ್ಯಾಸಶಿಷ್ಯರಾದ ಜೈಮಿನಿ ಮುನಿಗಳು ತಮ್ಮ ಒಂದು ಭಾರತವನ್ನು ಅವನಿಗೆ ಕೇಳಿಸಿದಾಗ ಅದು ಸಂಪೂರ್ಣ ವಾಸಿಯಾಯಿತಂತೆ. ಗುರುಗಳಾದ ವ್ಯಾಸರಿಗೆ ಜೈಮಿನಿ ತನ್ನ ಕೃತಿಯನ್ನು ತೋರಿಸಿದಾಗ ಅವರು ಹೊಟ್ಟೆಕಿಚ್ಚಿನಿಂದ ಸಮುದ್ರಕ್ಕೆಸೆದು ಬಿಟ್ಟರು. ಅಶ್ವಮೇಧ ಪರ್ವ ಮಾತ್ರ ತೇಲಿ ಉಳಿದುದೆಲ್ಲ ಮುಳುಗಿಹೋಯಿತು. ಆಗ ವ್ಯಾಸರು ಅಶ್ವಮೇಧ ಪರ್ವವು ಸತ್ವಯುತವಾದುದೆಂದು ಕೊಂಡಾಡಿ ಜೈಮಿನಿಯನ್ನು ಆಶೀರ್ವದಿಸಿದರು.

ಮಹಾಭಾರತದ ಹದಿನೆಂಟು ಪರ್ವಗಳಲ್ಲಿ ಅಶ್ವಮೇಧ ಪರ್ವ ಒಂದು. ಈ ಪರ್ವವನ್ನು ಸಂಸ್ಕೃತದಲ್ಲಿ ಜೈಮಿನಿಯು ಅರವತ್ತೆಂಟು ಅಧ್ಯಾಯಗಳ ಬೃಹತ್ಕಾವ್ಯವನ್ನಾಗಿ ರಚಿಸಿದ್ದಾನೆ. ಲಕ್ಷ್ಮೀಶನು ಸಂಸ್ಕೃತ ಕಾವ್ಯವನ್ನು ಅರ್ಧದಷ್ಟು ಸಂಗ್ರಹಗೊಳಿಸಿ ಮೂವತ್ತುನಾಲ್ಕು ಸಂಧಿಗಳ ಕನ್ನಡ ಜೈಮಿನಿ

ಭಾರತವನ್ನು ರಚಿಸಿದನು. ಇದು ಕೇವಲ ಅನುವಾದವಲ್ಲ. ಆತನ ಸಂಗ್ರಹ ಪ್ರತಿಭೆಯೂ ಮೇಲ್ತರಗತಿಯಲ್ಲಿದೆ. ಉಚಿತವೆಂದು ತೋರಿದ ಕಡೆ ವ್ಯತ್ಯಾಸ ಮಾಡಿಕೊಂಡಿದ್ದಾನೆ. ವೀರ ಮತ್ತು ಶೃಂಗಾರ ರಸಗಳಿಗೆ ಮೂಲಕ್ಕಿಂತ ಹೆಚ್ಚು ಮಹತ್ವವನ್ನು ಕೊಡಲಾಗಿದೆ.

ಜೈಮಿನಿ ಭಾರತವು ಅನೇಕ ಕಥೆಗಳ ಒಂದು ಸಂಕಲನ. ಅಶ್ವಮೇಧದ ಕಥೆ ಈ ಎಲ್ಲ ಕಥೆಗಳೂ ಸೇರಿಕೊಂಡಿರುವ ಸೂತ್ರ. ಸಂಸ್ಕೃತ ಜೈಮಿನಿ ಭಾರತದ ದೃಷ್ಟಿ ಪುರಾಣ ಪ್ರಧಾನವಾದುದು. ಉಪದೇಶ ಪರವಾದ ಉದ್ದೇಶ ವುಳ್ಳದ್ದು. ಲಕ್ಷ್ಮೀಶನು ಅಲ್ಲಿನ ನೀರಸ ಭಾಗಗಳನ್ನೆಲ್ಲಾ ವರ್ಜಿಸಿ, ಸಾರ ವತ್ತಾದ ಕಥನಾಪ್ರಧಾನ ಭಾಗಗಳಿಗೆ ಹೆಚ್ಚು ಮಹತ್ವ ಕೊಟ್ಟಿದ್ದಾನೆ. ಆತನು ಉತ್ತಮ ಶ್ರೇಣಿಯ ಕಥೆಗಾರ. ಜೈಮಿನಿ ಭಾರತದ ಎಲ್ಲ ಉಪಕಥೆ ಗಳಿಗೂ ಉತ್ತಮವಾದ ಆದಿ, ಮಧ್ಯ, ಅಂತ್ಯಗಳಿವೆ. ಒಟ್ಟು ಕಾವ್ಯದ ಕಥನ ಕಾರ ಜೈಮಿನಿಯಾದರೂ ಬೇರೆ ಬೇರೆ ಉಪಕಥೆಗಳನ್ನು ಬೇರೆ ಬೇರೆಯವರಿಂದ ಹೇಳಿಸಿದಂತೆ ಕಲ್ಪನೆಯಿದೆ. ಲಕ್ಷ್ಮೀಶನ ಕಥನಕೌಶಲವನ್ನು ಅವನ ಕಾವ್ಯ ಪರಿಚಯದ ಮೂಲಕವೇ ಮಾಡಿಕೊಂಡ ಬಳಿಕ ಅಲ್ಲಿನ ನಿರೂಪಣಾ ಸ್ವಾರಸ್ಯ ವನ್ನು ಚರ್ಚಿಸಬಹುದಾಗಿದೆ.

## 2

ಮಹಾಭಾರತದ ಯುದ್ಧವೆಲ್ಲಾ ಮುಗಿದು ಹಸ್ತಿನಾವತಿಯಲ್ಲಿ ರಾಜ ನಾಗಿ ಸ್ಥಿರವಾಗಿದ್ದರೂ ಧರ್ಮರಾಯನಿಗೆ ಸುಖಶಾಂತಿಗಳು ಲಭಿಸಲಿಲ್ಲ. ಸೋದರರು, ಗುರುಹಿರಿಯರು, ಬಂಧು ಬಾಂಧವರನ್ನು ಕೊಂದ ಪಾಪ ಪ್ರಜ್ಞೆ ಅವನನ್ನು ಕಾಡುತ್ತಿತ್ತು. ಪಾಪವಿಮೋಚನೆಗಾಗಿ ಅಶ್ವಮೇಧಯಾಗವನ್ನು ಮಾಡಲು ವೇದವ್ಯಾಸ ಮುನಿಗಳು ಹೇಳುತ್ತಾರೆ. ಆ ಸಮಯಕ್ಕೆ ಸರಿಯಾಗಿ ಬಂದ ಶ್ರೀಕೃಷ್ಣನೂ ಸಮ್ಮತಿಸುತ್ತಾನೆ. ಧರ್ಮರಾಜನ ಹತ್ತಿರ ಯಾಗ ಮಾಡಲು ಬೇಕಾದ ಹಣವಾಗಲೀ ಯಾಗಾರ್ಹವಾದ ಕುದುರೆಯಾಗಲೀ ಇರ ಲಿಲ್ಲ. ಮಹಾಯುದ್ಧವೊಂದನ್ನು ಆಗ ತಾನೆ ಮುಗಿಸಿ ಚೇತರಿಸಿಕೊಳ್ಳುತ್ತಿದ್ದ ಆತನ ದೈನ್ಯ ಸ್ಥಿತಿಯನ್ನು ಕವಿ ತುಂಬಾ ಸ್ವಾರಸ್ಯಕರವಾಗಿ ಹೇಳಿಸಿದ್ದಾನೆ. ವೇದವ್ಯಾಸರು ಧರ್ಮರಾಯನನ್ನು ಚಿಂತಿಸದಿರಲು ಹೇಳಿ ಹಿಮಾಲಯದಲ್ಲಿದ್ದ ಮರುತ್ತರಾಯನ ಅಪಾರ ದ್ರವ್ಯ ಸಂಪತ್ತನ್ನು ಹಸ್ತಿನಾವತಿಗೆ ತರಿಸುವರು.

ಭೀಮ, ವೃಷಕೇತುಗಳು ಭದ್ರಾವತಿಗೆ ಹೋಗಿ ಯೌವ್ವನಾಶ್ವನನ್ನು ಗೆದ್ದು ಉತ್ತಮ ಲಕ್ಷಣಗಳಿಂದ ಕೂಡಿದ ಯಾಗಾಶ್ವವನ್ನು ತರುವರು.

ಶ್ರೀಕೃಷ್ಣನನ್ನು ಮುಂದಿಟ್ಟುಕೊಂಡು ಧರ್ಮರಾಯನು ಯಜ್ಞವನ್ನು ಆರಂಭಿಸಬೇಕೆಂದಿರುವಾಗಲೇ ಅನುಸಾಲ್ವನೆಂಬುವನು ಕೃಷ್ಣನಲ್ಲಿದ್ದ ಪೂರ್ವ ವೈರವೇ ಕಾರಣವಾಗಿ ಕುದುರೆಯನ್ನು ಅಪಹರಿಸುವನು. ಯುದ್ಧದಲ್ಲಿ ಪಾಂಡವರಿಗೆ ಸೋತು ಅವರ ಮರೆಹೋಗುವನು. ಬಳಿಕ ಧರ್ಮರಾಯನು ವ್ರತದೀಕ್ಷೆ ಕೈಗೊಂಡು ಯಜ್ಞ ಪ್ರಾರಂಭವಾಗುತ್ತದೆ. ಚೈತ್ರ ಹುಣ್ಣಿಮೆಯ ದಿನ ಯಾಗಾಶ್ವವು ದೇಶ ದೇಶಗಳನ್ನು ಸುತ್ತಿಬರಲು ಹೊರಡುತ್ತದೆ.

ಅಶ್ವಮೇಧ ಯಾಗದಲ್ಲಿ ಯಜ್ಞಾಶ್ವವನ್ನು ಒಂದು ವರ್ಷದ ಕಾಲ ಮಿತಿಯಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಸುತ್ತಾಡಲು ಬಿಡುತ್ತಾರೆ. ಅದು ಹೋದ ಕಡೆಯೆಲ್ಲೆಲ್ಲಾ ರಕ್ಷಣೆಗೆ ಸೈನ್ಯವಿರುತ್ತದೆ. ಯಾರಾದರೂ ಪರ ದೇಶದ ವೀರರು ಅದನ್ನು ತಡೆದು ಕಟ್ಟಿದರೆ ಅವರೊಡನೆ ಯುದ್ಧ. ಹೀಗೆ ಎಲ್ಲಾ ಕಡೆಯಲ್ಲೂ ಗೆದ್ದು, ಒಂದು ವರ್ಷದ ಮೇಲೆ ಹಿಂದಿರುಗಿ ಯಾಗವನ್ನು ಸಾಂಗವಾಗಿ ನಡೆಸಿ ಮುಕ್ತಾಯಗೊಳಿಸಬೇಕು.

ಧರ್ಮರಾಯನ ಯಾಗಾಶ್ವದ ರಕ್ಷಣೆಗೆ ಅರ್ಜುನ, ವೃಷಕೇತು, ಪ್ರದ್ಯುಮ್ನ, ಸಾತ್ಯಕಿ, ಯೌವನಾಶ್ವ ಮತ್ತು ಅನುಸಾಲ್ವರು ಹೋಗುತ್ತಾರೆ. ಅಲ್ಲದೆ ಸಂಕಷ್ಟ ಸಮಯದಲ್ಲಿ ದ್ವಾರಕಾವತಿಯಿಂದ ಕೃಷ್ಣನೇ ಆಗಮಿಸಿ ಯುದ್ಧದಲ್ಲಿ ನೇರವಾಗಿ ಭಾಗವಹಿಸಿಯೇ ಅಥವಾ ಸಂಧಿಕಾರ್ಯದಲ್ಲಿ ನೆರ ವಾಗಿಯೇ ಕುದುರೆಯ ದಾರಿ ಸುಗಮಗೊಳಿಸುತ್ತಾನೆ.

ಕುದುರೆಯು ಮುಂದೆ ಹೋದಂತೆ ಓದುಗರು ಕಥೆಗಳ ಸ್ವಪ್ನಲೋಕದಲ್ಲಿ ಪ್ರವೇಶಿಸಿದಂತಾಗುತ್ತದೆ. ಒಬ್ಬೊಬ್ಬ ವೀರನದೂ ಒಂದೊಂದು ಬಗೆ. ಅವರೆಲ್ಲರೂ ಶ್ರೀಕೃಷ್ಣ ಭಕ್ತರು. ಶ್ರೀಕೃಷ್ಣನನ್ನು ಯುದ್ಧರಂಗದಲ್ಲಿ ಕಾಣುವ ತವಕದಿಂದಲೇ ಕುದುರೆಯನ್ನು ಕಟ್ಟಿದವರು. ಕೆಲವರಿಗೆ ಶ್ರೀಕೃಷ್ಣ ನನ್ನು ಯುದ್ಧಮಾಡಿ ಮೆಚ್ಚಿಸಬೇಕೆಂಬ ಆಸೆ ಇದ್ದರೆ, ಮತ್ತೆ ಕೆಲವರು ತಮ್ಮ ನೆಚ್ಚಿನ ದೇವರೆಂದು ಹೋರಾಡಲು ಇಷ್ಟಪಡದೆ ಸಂಧಿ ಮಾಡಿಕೊಂಡು ಯಾಗಕ್ಕೆ ಬೆಂಬಲ ಸೂಚಿಸುವರು. ಕುದುರೆ ಮುಂದೆ, ಅದನ್ನು ಬೆಂಬತ್ತಿ ಅರ್ಜುನ ಮುಂತಾದ ವೀರರು, ಅವರ ಹಿಂದೆ 'ಜೈಮಿನಿ ಭಾರತ'ದ ಓದುಗರು-

ಹೀಗಿದೆ ಇಲ್ಲಿನ ಸ್ವಾರಸ್ಯ. ಆದುದರಿಂದ ಈ ಕಾವ್ಯಕ್ಕೆ ಕುದುರೆಯೇ ನಾಯಕ ಎಂದು ಒಬ್ಬರು ಗೇಲಿಮಾಡಿದ್ದಾರೆ. ಒಂದೊಂದು ಪ್ರಸಂಗವೂ ತಮ್ಮಷ್ಟಕ್ಕೇ ಸ್ವತಂತ್ರವಾಗಿದ್ದು ಒಬ್ಬೊಬ್ಬ ವೀರನೂ ಅಲ್ಲಿಯ ನಾಯಕನಾಗಿರುತ್ತಾನೆ.

ಮೊತ್ತಮೊದಲು ಕುದುರೆ ಮಾಹಿಷ್ಮತೀ ಪಟ್ಟಣಕ್ಕೆ ಬರುತ್ತದೆ. ಮಾಹಿಷ್ಮತಿಯ ಅರಸನಾದ ನೀಲಧ್ವಜನು ಅಗ್ನಿಯ ಮಾತಿಗೆ ಒಡಂಬಟ್ಟು ಕುದುರೆಯನ್ನು ಬಿಟ್ಟುಕೊಡಲು ಒಪ್ಪುತ್ತಾನೆ. ಆದರೆ ಅವನ ಹೆಂಡತಿಯಾದ ಜ್ವಾಲೆ ಮಗನನ್ನು ಹುರಿದುಂಬಿಸಿ ಯುದ್ಧಕ್ಕೆ ಕಳಿಸಿದಳು. ಅರ್ಜುನನೊಡನೆ ಹೋರಾಡಿ ಮಗಸತ್ತಾಗ ನೀಲಧ್ವಜನಿಗೆ ಕೋಪ ಬಂದು ತನ್ನ ಹೆಂಡತಿಯಾದ ಜ್ವಾಲೆಯನ್ನು ಹೀಗಳೆದು ಅರ್ಜುನನೊಡನೆ ಸಂಧಿ ಮಾಡಿಕೊಳ್ಳುವನು.

'ಜೈಮಿನಿ ಭಾರತ'ದಲ್ಲಿ ಬರುವ ಉಪಕಥೆಗಳು ವೈವಿಧ್ಯಮಯವಾದವು. ವ್ಯಕ್ತಿಪ್ರಧಾನವಾದವು. ಮೂಲ ಪ್ರಸಂಗಕ್ಕಿಂತ ಈ ಬಗೆಯ ವ್ಯಕ್ತಿ ಪ್ರಧಾನ ಉಪಕಥೆಗಳೇ ಎಷ್ಟೋ ಕಡೆ ರಮ್ಯವಾಗಿವೆ. ಜ್ವಾಲೆಯ ಕಥೆಯನ್ನು ಈ ಗುಂಪಿಗ ಸೇರಿಸಬಹುದು. ಅರ್ಜುನನಿಂದ ತನ್ನ ಗಂಡನಿಗಾದ ಅಪಮಾನವನ್ನು ಜ್ವಾಲೆ ಸೈರಿಸಲಿಲ್ಲ. ಇದು ಸಹಜವಾಗಿಯೇ ಇದೆ. ಎಷ್ಟೇ ಚಿಕ್ಕವರಾದರೂ ತಮ್ಮದೇ ಆದ ಅಭಿಮಾನದ ಒಂದು ವೃತ್ತವನ್ನು ಕಲ್ಪಿಸಿಕೊಂಡಿರುತ್ತಾರೆ. ಅದಕ್ಕೆ ಧಕ್ಕೆ ಬಂದಾಗ ಅವರು ಸಿಡಿದೇಳುತ್ತಾರೆ. ಜ್ವಾಲೆಯ ತಮ್ಮನೂ ಅರ್ಜುನನೊಡನೆ ಕಾದಿ ಅಕ್ಕನ ಅಭಿಮಾನವನ್ನೂ ರಕ್ಷಿಸಲು ಮುಂದೆಬರಲಿಲ್ಲ. ಆಗ ಆಕೆ ಒಂದು ಉಪಾಯ ಮಾಡಿದಳು. ಗಂಗಾನದಿಯ ಹತ್ತಿರ ಹೋಗಿ 'ಈ ನದಿಯ ನೀರನ್ನು ಸ್ವಲ್ಪವೂ ಮುಟ್ಟದಂತೆ ನನ್ನನ್ನು ಆಚೆಯ ದಡಕ್ಕೆ ಸೇರಿಸಿ' ಎಂದು ಅಂಬಿಗರನ್ನು ಕೇಳಿದಳಂತೆ. ತನ್ನನ್ನು ದೋಷ ನಿವಾರಕಳೆಂದು ಸಕಲ ಲೋಕವೇ ಕೊಂಡಾಡುತ್ತಿರುವಾಗ ಮುಟ್ಟಲು ಹಿಂಜರಿಯುವ ಇವಳನ್ನು ಕಂಡು ಸಾಕ್ಷಾತ್ ಗಂಗೆಯೇ ಪ್ರಶ್ನಿಸಿದಳು. 'ಮಕ್ಕಳಿಲ್ಲದವರು ಸ್ಪರ್ಶಕ್ಕೆ ಬಾಹಿರರು' ಎಂದು ಜ್ವಾಲೆಯ ಉತ್ತರ. ಲೋಕೈಕ ವೀರನೂ, ಇಚ್ಛಾಮರಣಿಯೂ ಆದ ತನ್ನ ಮಗ ಭೀಷ್ಮನ ವಿಚಾರವನ್ನು ಗಂಗೆ ಹೇಳಿದಳು. ಈ ಸಂದರ್ಭವನ್ನೇ ಉಪಯೋಗಿಸಿಕೊಂಡು ಜ್ವಾಲೆ ಭೀಷ್ಮನ ಮರಣದ ಸಂಗತಿಯನ್ನು ಗಂಗೆಗೆ ತಿಳಿಸುತ್ತಾಳೆ. ಆತನ ಮರಣಕ್ಕೆ ಅರ್ಜುನನ ಮೋಸದ ಯುದ್ಧವೇ ಕಾರಣವೆಂದು ಚುಚ್ಚಿಕೊಟ್ಟಳು. ಜ್ವಾಲೆ ಬಿಟ್ಟಬಾಣ ಗಂಗೆಯನ್ನು ತಾಗಿತು.

'ನನ್ನ ಮಗನನ್ನು ಕೊಂದ ಅರ್ಜುನನೂ ಆರು ತಿಂಗಳ ಒಳಗಾಗಿ ತನ್ನ ಮಗನಿಂದಲೇ ಯುದ್ಧದಲ್ಲಿ ಹತನಾಗಲಿ' ಎಂದು ಗಂಗೆ ಶಪಿಸಿದಳು. ಜ್ವಾಲೆಯೂ ಅಗ್ನಿಪ್ರವೇಶ ಮಾಡಿ ಸತ್ತು ಬಾಣವಾಗಿ ಬಭ್ರುವಾಹನನ ಬತ್ತಳಿಕೆಯನ್ನು ಸೇರಿದಳು.

ಜ್ವಾಲೆಯ ಪ್ರತೀಕಾರದ ಚಿತ್ರವನ್ನು ಬಹು ಸ್ವಾರಸ್ಯಕರವಾಗಿ, ಮಾನವೀಯವಾಗಿ ಕವಿ ಚಿತ್ರಿಸಿದ್ದಾನೆ. ಜ್ವಾಲೆಯಂತೆಯೇ ಹಟಮಾರಿಯಾಗಿ ಕೊನೆಗೆ ಬುದ್ಧಿ ಕಲಿತವಳು ಚಂಡಿ. ಆಕೆಯ ಗಂಡ ಉದ್ದಾಲಕನಿಗೆ ಅವಳ ಜೊತೆ ಸಂಸಾರ ಮಾಡುವುದು ಸಾಕಾಗಿ ಹೋಯಿತು. ಗಂಡ ಏನು ಹೇಳಿದರೂ ಅದರ ವಿರುದ್ಧ ವರ್ತಿಸುವುದು ಅವಳ ಛಲ. ಆತನೂ ಉಪಾಯವಾಗಿ ತನ್ನ ಮನಸ್ಸಿನಲ್ಲಿ ಏನಿದ್ದರೂ ಅದಕ್ಕೆ ಪ್ರತಿಯಾಗಿ ಅಭಿಪ್ರಾಯ ಹೇಳುತ್ತಾ ಪರಿಣಾಮದಲ್ಲಿ ತನಗೆ ಅನುಕೂಲವಾಗುವಂತೆಯೇ ಕೆಲಸಗಳನ್ನು ಸಾಗಿಸಿಕೊಳ್ಳುತ್ತಿದ್ದ. ಒಮ್ಮೆ ಉದ್ದಾಲಕ ತನ್ನ ತಂದೆಯ ಶ್ರಾದ್ಧ ಮಾಡಬೇಕಾಯಿತು. ಎಂದಿನಂತೆಯೇ ಇವನು ಬೇಕೆಂದೇ ಅಪದ್ಧಗಳನ್ನು ಹೇಳುವುದು, ಆಕೆ ಸರಿಯಾಗಿ ನಡೆಯುವುದು ಹೀಗೆ ಶ್ರಾದ್ಧವೆಲ್ಲಾ ಸಾಂಗವಾಗಿ ಮುಗಿದು ಇನ್ನೇನು ಕೊನೆಗೊಳ್ಳುವುದರಲ್ಲಿತ್ತು. ಸಂತೋಷಾತಿರೇಕದಿಂದ ಉದ್ದಾಲಕನು ವಿರುದ್ಧವಾಗಿ ಮಾತಾಡುವುದನ್ನು ಮರೆತುಬಿಟ್ಟ. 'ಪಿಂಡವನ್ನು ತೆಗೆದು ಮಡುವಿನಲ್ಲಿ ಹಾಕು' ಎಂದು ಬಿಟ್ಟ. ಆಕೆ ಅದನ್ನು ಬೀದಿಗೆಸೆದಳು. ರೋಸಿಹೋದ ಉದ್ದಾಲಕನು ಅವಳನ್ನು 'ಕಲ್ಲಾಗಿ ಹೋಗು' ಎಂದು ಶಪಿಸಿಬಿಟ್ಟ. ಮತ್ತೆ ಕರುಣೆಯಿಂದ 'ಮುಂದೆ ಅರ್ಜುನನ ಯಾಗಾಶ್ವ ಬಂದಾಗ 'ಆತನಿಂದ ನಿನಗೆ ಬಿಡುಗಡೆ' ಎಂದು ವಿಶಾಪವನ್ನೂ ಸೂಚಿಸಿದ. ನೀಲಧ್ವಜನ ರಾಜ್ಯವನ್ನು ಕಳೆದು ಸೌಭರಿ ಆಶ್ರಮದಲ್ಲಿಗೆ ಬಂದಾಗ ಕುದುರೆ ಒಂದು ಅರೆಯ ಮೇಲೆ ಮುಂದೆ ಹೋಗದಂತೆ ನಿಂತುಬಿಟ್ಟಿತು. ಆಗ ಋಷಿಗಳು ಚಂಡಿಯ ಕಥೆಯನ್ನು ಹೇಳಿ ಅರ್ಜುನನಿಂದ ಆಕೆಗೆ ಶಾಪ ವಿಮೋಚನೆಯಾಯಿತು.

ಚಂಪಕಾವತಿಗೆ ಕುದುರೆ ಬಂದಾಗ ಅಲ್ಲಿನ ಅರಸು ಹಂಸಧ್ವಜ ಅದನ್ನು ಕಟ್ಟಿದನು. ಅವನೊಬ್ಬ ಶ್ರೇಷ್ಠ ಭಾಗವತ ಭಕ್ತಾಗ್ರಣಿ. ಶ್ರೀಕೃಷ್ಣ ದರ್ಶನಕ್ಕಾಗಿ ಅರ್ಜುನನೊಡನೆ ಯುದ್ಧ ಹೂಡುತ್ತಾನೆ. ಆತನ ಮಗ ಸುಧನ್ವನೂ ಮಹಾಪರಾಕ್ರಮಶಾಲಿ. ತಮ್ಮ ಸುರಥನೂ ಸೇರಿ ಶ್ರೀಕೃಷ್ಣಾರ್ಜುನರೊಡನೆ

ಘನಘೋರ ಕಾಳಗವನ್ನು ಮಾಡಿದನು. ಒಂದು ಅಧ್ಯಾಯದ ತುಂಬ ಅವರ ಯುದ್ಧವರ್ಣನೆ ಇದೆ. ಸುಧನ್ವನು ಯುದ್ಧದಲ್ಲಿ ಮಡಿದು ಶಿವನ ಕೊರಳ ರುಂಡಮಾಲೆಯನ್ನು ಸೇರಿದ. ಸುರಥನೂ ರುದ್ರಭಯಂಕರನಾಗಿ ಕಾದುತ್ತಿರಲು ಅರ್ಜುನನು ಅವನೆರಡು ತೋಳುಗಳನ್ನು ಕತ್ತರಿಸಿದನಂತೆ. ಆಗಲೂ ಸುರಥನು ಹಿಮ್ಮೆಟ್ಟದೆ ಕಾದಿದ ಚಿತ್ರವನ್ನು ಕವಿಯ ಮಾತಿನಲ್ಲೇ ಹೇಳಬಹುದಾಗಿದೆ :

ತೋಳ್ಗಳೆರಡುಂ ಕತ್ತರಿಸಿ ಬೀಳೆ ಮತ್ತೆ ಕ
ಟ್ಟಾಳ್ಗಳ ಶಿರೋಮಣಿ ಸುರಥನಾ ಕಿರೀಟಿಯಂ
ಕಾಲ್ಗಳಿಂದೊದೆದು ಕಿಡಹುವೆನೆಂದು ಭರದಿಂದೆ ಬೊಬ್ಬಿರಿಯುತೈತರಲ್ಕೆ
ಕೋಲ್ಗಳಿಂ ತೊಡೆಗಳಂ ಕತ್ತರಿಸೆ ನಾದಿದವು
ದೂಳ್ಗಳರುಣಾಂಬುವಿಂದೆದೆಯೊಳ್ ತೆವಳ್ದಹಿಯ
ಪೋಲ್ಗಂಡುಗಲಿ ಧನಂಜಯನ ಸಮ್ಮುಖಕೆ ಮೇಲ್ವಾಯ್ದನವನೇವೇಳ್ವೆನು

ಸುರಥನೂ ಸತ್ತು ಶಿವನ ರುಂಡಮಾಲೆ ಸೇರಿದ ಮೇಲೆ ಹಂಸಧ್ವಜನನ್ನು ಕೃಷ್ಣನು ಒಡಂಬಡಿಸಿ ಸಂಧಿ ಮಾಡಿಸುವನು. ಅರ್ಜುನನ ಕುದುರೆ ಮುಂದುವರೆಯಿತು.

ಪಾರ್ವತಿಯ ತಪೋವನದ ಪುಣ್ಯಭೂಮಿಯ ವೈಚಿತ್ರ್ಯಗಳನ್ನು ಕಂಡು ಅಲ್ಲಿಗೆ ಸಂಬಂಧಿಸಿದ ಐತಿಹ್ಯಗಳನ್ನು ಕೇಳಿದ ಮೇಲೆ ಅರ್ಜುನನು ಸ್ತ್ರೀರಾಜ್ಯದ ಪ್ರಮೀಳೆಯನ್ನೆದುರಿಸಬೇಕಾಗುತ್ತದೆ. ಈ ರಾಜ್ಯದ ಸ್ತ್ರೀಯರೆಲ್ಲಾ ವಿಷಕನ್ಯೆಯರು. ಅವರ ಅರಸಿಯಾದ ಪ್ರಮೀಳೆ ತನ್ನ ಸಖಿಯರೊಡನೆ ಯುದ್ಧಭೂಮಿಗೆ ಬಂದ ಚಿತ್ರ, ಅವರ ವೇಷಭೂಷಣಗಳನ್ನು ಕವಿ ಸ್ವಾರಸ್ಯವಾಗಿ ನಿರೂಪಿಸಿದ್ದಾನೆ :

ತೆಗೆದುಟ್ಟ ಚಲ್ಲಣದ ಬಿಗಿದ ಮೊಲೆಗಟ್ಟುಗಳ
ಪೊಗರುಗುವ ವೇಣಿಗಳ ಮೃಗಮದದ ಬೊಟ್ಟುಗಳ
ತಿಗುರಿದನುಲೇಪನದ ಮಗಮಗಿಪ ಕಂಪುಗಳ ಝುಗಝುಗಿಸುವಾಭರಣದ
ನಗೆಮೊಗದ ಮಿಂಚುಗಳ ದೃಗುಯುಗದ ಕಾಂತಿಗಳ
ಮಿಗೆ ತೊಳಗುವಂಘ್ರಿಗಳ ಸೊಗಯಿಸುವ ಬಾಹುಗಳ
ಬಗೆಬಗೆಯ ಕೈದುಗಳ ವಿಗಡೆಯರ್ ನೆರೆದು ಕಾಳಗಕೆ ಮುಂಕೊಳುತಿರ್ದರು

ಹೆಂಗಸರ ಮೇಲೆ ಯುದ್ಧಮಾಡಲು ಮೊದಲು ಹಿಂಜರಿದರೂ, ಬಳಿಕ ದಾರಿ ಕಾಣದೆ ಅರ್ಜುನ ಯುದ್ಧ ಸನ್ನದ್ಧನಾಗುತ್ತಾನೆ. ಆದರೆ ಅಶರೀರ-

ವಾಣಿಯೊಂದು ಮೊಳಗಿ ಅವಳನ್ನು ಮದುವೆಯಾಗಲು ಪ್ರೇರೇಪಿಸುತ್ತದೆ. ಅದರಂತೆ ಅರ್ಜುನನು ಅವಳನ್ನು ವಿವಾಹವಾಗಿ ಹಸ್ತಿನಾವತಿಗೆ ಕಳುಹಿಸುವನು. ದಿಗ್ವಿಜಯದಿಂದ ಹಿಂದಿರುಗಿದ ಮೇಲೆ ಶ್ರೀಕೃಷ್ಣನ ಅನುಗ್ರಹದಿಂದ ಅವಳ ವಿಷಕನ್ಯತ್ವವನ್ನು ಹೋಗಲಾಡಿಸಿ ಕೊಡುವನು.

ಕುದುರೆಯು ಅಲ್ಲಿಂದ ಹೊರಟು ಕೆಲವು ವಿಸ್ಮಯಕರ ಪ್ರದೇಶಗಳನ್ನು ಹಾಯ್ದು ಭೀಷಣನೆಂಬ ರಾಕ್ಷಸನ ರಾಜ್ಯವನ್ನು ಸೇರುವುದು. ಆತನ ಮಾಯಾಯುದ್ಧ ಅರ್ಜುನನನ್ನು ಸ್ವಲ್ಪಕಾಲ ದಿಕ್ಕುಗೆಡಿಸಿದರೂ ಕೊನೆಗೆ ಭೀಷಣನೇ ಸೋತು ಶರಣಾಗುವನು. ಅನಂತರ ಕುದುರೆಯು ಮಣಿ ಪುರವನ್ನು ಸೇರಿತು.

'ಜೈಮಿನಿ ಭಾರತ'ದಲ್ಲಿ ಬರುವ ಬಭ್ರುವಾಹನನ ಕಥೆ ವೀರ, ಕರುಣರಸ ಗಳ ಸಂಗಮ. ಲವಕುಶರ ಪ್ರಸಂಗದ ಕಥನಕ್ಕೂ ಕಾರಣವಾಗುವ ಈ ಸನ್ನಿವೇಶವನ್ನು ಕವಿ ಬಹು ಸಮರ್ಥವಾಗಿ ನಿರೂಪಿಸಿದ್ದಾನೆ.

ಮಣಿಪುರದಲ್ಲಿ ಬಭ್ರುವಾಹನನು ಕುದುರೆಯನ್ನು ಕಟ್ಟಿದಾಗಲೇ ತನ್ನ ಸಂಗಡಿಗರಿಂದ ಅರ್ಜುನನಿಗೆ ಅವನ ಗುಣಶೀಲಗಳೂ, ಪರಾಕ್ರಮವೂ ಗೊತ್ತಾಗುವುದು. ಬಭ್ರುವಾಹನನು ಯುದ್ಧಕ್ಕೆ ದುಡುಕದೆ ಮಂತ್ರಿ ಗಳೊಡನೆ ಸಮಾಲೋಚಿಸುವನು. ತಾಯಿಯಾದ ಚಿತ್ರಾಂಗದೆಗೆ ಸುದ್ದಿ ತಿಳಿದಾಗ ಅವಳು ಸ್ಪಷ್ಟವಾಗಿ ವಿರೋಧಿಸಿ ಯುದ್ಧವನ್ನು ನಿಲ್ಲಿಸುವಳು. ಅರ್ಜುನನು ತನ್ನ ಪತಿಯೆಂದೂ, ತಂದೆಗೆ ದ್ರೋಹಮಾಡದೆ ಸರ್ವಸ್ವವನ್ನೂ ಅರ್ಪಿಸಿ ಅವನ ಪ್ರೀತಿಯನ್ನು ಸಂಪಾದಿಸೆಂದೂ ಬಭ್ರುವಾಹನನಿಗೆ ಉಪ ದೇಶಿಸುವಳು. ಆತನೂ ತಾಯಿಯ ಮಾತನ್ನು ಒಪ್ಪಿ ಅರ್ಜುನನಿದ್ದಲ್ಲಿಗೆ ಬಂದು ತನ್ನ ವಿನಯವನ್ನು ಪ್ರಕಟಿಸಿದನು :

ತಾತ ಚಿತ್ತೈಸು ನಿನ್ನಾತ್ಮಜಂ ತಾನೆನ್ನ
ಮಾತೆ ಚಿತ್ರಾಂಗದೆ ಸಲಹಿದವಳುಲೂಪಿ ಸಂ
ಪ್ರೀತಿಯಿಂದಿವರಾದರರಸಿಯರ್ ನೀನಂದು ತೀರ್ಥಯಾತ್ರೆಗೆ ಬಂದಿರೆ
ಜಾತನಾದೆಂ ಬಭ್ರುವಾಹನಂ ತಾನೀಗ
ಳೀ ತುರುಗಮಂ ಪಿಡಿದು ಕಟ್ಟಿ ತಪ್ಪಿದೆ ಗುಣಾ
ತೀತಮಂ ಕ್ಷಮಿಸೆಂದು ಮುಗುಳೆರಗಿದಂ ಪಾರ್ಥನಡಿಗಮಂ ಭೀತಿಯಿಂದೆ

ಹಿಂದಿನ ಕಥೆಯನ್ನೆಲ್ಲಾ ನಿರೂಪಿಸಿ ತನ್ನ ಪರಿಚಯವನ್ನು ಮಾಡಿಕೊಳ್ಳುವ ಬಭ್ರುವಾಹನನ ವಿನಯ ಅರ್ಜುನನಿಗೆ ರುಚಿಸಲಿಲ್ಲ. ಗೌರವ, ಭಕ್ತಿಗಳನ್ನು ಹೇಡಿತನವೆಂದು ಭಾವಿಸಿದ. ಗಂಗೆಯ ಶಾಪವೇ ಅರ್ಜುನನನ್ನು ಹೀಗೆ ತಪ್ಪುಹಾದಿಗೆ ಎಳೆಯಲು ಪ್ರೇರೇಪಿಸಿತೋ ಏನೋ ? ಯಾರಿಗೆ ಗೊತ್ತು ! ಅಂತೂ ಅರ್ಜುನನು ಬಭ್ರುವಾಹನನನ್ನು ಒಪ್ಪಿಕೊಳ್ಳದೆ ಹೀಗಳೆದು ಮಾತಾಡಿದನು. ಚಿತ್ರಾಂಗದೆಯನ್ನು ವೇಶ್ಯೆಯೆಂದು ಜರೆದು ಬಭ್ರುವಾಹನನು ತನ್ನ ಮಗನಾಗಿರಲು ಸಾಧ್ಯವೇ ಇಲ್ಲ, ಎಂದನು. ಅಭಿಮನ್ಯುವಿನಂತಹ ವೀರ ತನ್ನ ಮಗನೇ ಹೊರತು ಕುದುರೆಯನ್ನು ಕಟ್ಟಿ ಕಾದಲಾರದೆ ಕಪಟದ ಮಾತುಗಳನ್ನಾಡುತ್ತಿರುವವನು ಹೇಗೆ ತಾನೇ ತನ್ನ ಮಗನಾಗಲು ಸಾಧ್ಯ ? ಇದು ಅರ್ಜುನನ ತರ್ಕ. ಇದರಿಂದ ಬಭ್ರುವಾಹನನು ನಖಶಿಖಾಂತ ಕೋಪದಿಂದ ಉರಿದೇಳುವನು. ತನ್ನ ತಾಯಿಗೆ ಅಪಮಾನಿಸಿ ತನ್ನನ್ನು ತೇಜೋವಧೆ ಮಾಡಿದ ಅರ್ಜುನನನ್ನು ಕೊಲ್ಲದೇ ಬಿಡೆನೆಂದು ಶಪಥ ಮಾಡಿ ಯುದ್ಧ ಸನ್ನದ್ಧನಾಗುವನು. ರಣಮುಖದಲ್ಲಿ ಅರ್ಜುನನಿಗೆ ಅಪಶಕುನಗಳಾದವು. ಮುಂದಾಗುವುದನ್ನು ಸೂಚಿಸುವ ಈ ಉತ್ಪಾತಗಳನ್ನು ಕಂಡು ಅರ್ಜುನನು ಬೆದರಿದ :

ಪದ್ದುಗ ಕುಳ್ಳಿರ್ದುದರ್ಜುನನ ಮಕುಟಾಗ್ರದೊಳ
ಪದ್ದುಗ ಗೂಡಿಕ್ಕಿದುವು ರಥದೊಳ್ ಕಪೋತಂಗ
ಳಿರ್ದುದು ತನುಚ್ಛಾಯೆ ತಲೆಯಿಲ್ಲದಿನಿತುಮಂ ಕಂಡುಬೆರಗಾಗಿ ನರನು
ಪೊರ್ದದಿರದಪಜಯಂ ತನಗಿನ್ನು ಧರ್ಮಜಂ
ನಿರ್ದೈವನಹನಲಾ ಶಿವ ಮಹಾದೇವ ಮುರ
ಮರ್ದನಂ ತುರಗಮೇಧವನೆಂತು ಮಾಡಿಪನೊ ಕರ್ಣಸುತ ಹೇಳೆಂದನು

ಭಾರತೀಯ ಕಥಾಸಾಹಿತ್ಯದಲ್ಲಿ ಪ್ರಸಿದ್ಧವಾಗಿರುವ ಕೆಲವೇ ತಂದೆ ಮಕ್ಕಳ ಕಾಳಗಗಳಲ್ಲಿ ಅರ್ಜುನ-ಬಭ್ರುವಾಹನ ಕಾಳಗ ಒಂದು. ಇಂಥ ಕಡೆಗಳಲ್ಲೆಲ್ಲಾ ಸಾಮಾನ್ಯವಾಗಿ ಮಕ್ಕಳು ತಂದೆಯನ್ನು ಗೆಲ್ಲುತ್ತಾರೆ. ಆದರೆ ಬಭ್ರುವಾಹನನ ಗೆಲುವಿಗೆ ಕಾರಣವನ್ನು ಕವಿ ಜ್ವಾಲೆಯ ಕಥೆಯಲ್ಲೇ ಕಲ್ಪಿಸಿದ್ದಾನೆ. ಗಂಗೆಯು ಅರ್ಜುನನಿಗಿತ್ತ ಶಾಪದಫಲವಾಗಿ ಮತ್ತು ಸ್ವತಃ ಜ್ವಾಲೆಯೇ ಅಂಬಾಗಿ ಬಭ್ರುವಾಹನನ ಬತ್ತಳಿಕೆಯನ್ನು ಸೇರಿ ಛಲ ತೀರಿಸಿಕೊಂಡಳೆಂಬ ಕಲ್ಪನೆ ಇಲ್ಲಿದೆ. ಆದ್ದರಿಂದ ಬಭ್ರುವಾಹನನ ಗೆಲುವು ಕೇವಲ ಭಾವುಕ ಆಶಯವಾಗಿ ಪರಿಣಮಿಸದೆ ತರ್ಕಬದ್ಧವಾಗಿ ಕಂಡುಬರುತ್ತದೆ.

ಬಭ್ರುವಾಹನನ ಪರಾಕ್ರಮ ಶೌರ್ಯಗಳು ಕಡಿಮೆಯಲ್ಲ. ಹಂಸಧ್ವಜನಿಂದ ಈ ವಿಚಾರವನ್ನು ಅರ್ಜುನನು ಈಗಾಗಲೇ ಕೇಳಿ ತಿಳಿದುಕೊಂಡಿದ್ದಾನೆ. ಯುದ್ಧದಲ್ಲಿ ಕರ್ಣಸುತ ವೃಷಕೇತುವನ್ನು ಕೊಂದು ಅರ್ಜುನನ ಬಲವನ್ನೆಲ್ಲಾ ಕಂಗೆಡಿಸಿ ತಂದೆಯನ್ನು ಮಾತಿನಿಂದ ಚುಚ್ಚಿ ಇರಿಯುತ್ತಾನೆ. ಆತನ ಬಾಣಗಳಿಗಿಂತ ಮೂದಲೆಗಳು ಅರ್ಜುನನನ್ನು ಹೆಚ್ಚು ಗಾಸಿಪಡಿಸುತ್ತವೆ. ವೃಷಕೇತುವಿನ ಶಿರವನ್ನು ತಬ್ಬಿ ಅಳುತ್ತಿರುವ ಅರ್ಜುನನಿಗೆ ಬಭ್ರುವಾಹನನಾಡುವ ಮಾತುಗಳು ಶೂಲದಂತೆ ಪರಿಣಮಿಸುತ್ತವೆ :

ಎಲೆ ಪಾರ್ಥ ವೈಶ್ಯಸಂಭವರಾವಹೆವು ನಿಮ್ಮ
ಬಲಸಮಾಜದೊಳಂಬುಗಳ ಪಸರಮಂ ಹರಹಿ
ಗೆಲವಿನಗ್ಗದ ಲಾಭಮಂ ಪಡೆವೆವದಟರ ಶಿರಂಗಳಂ ಕೊಂಡೆವರಸಿ
ಕಲಿಗಳೈತಂದು ಜೀವಕೆ ಸಂಚಕಾರಮಂ
ಸಲೆ ಬೇಡಿದೊಡೆ ಕೊಟ್ಟೆವಿಚ್ಛೆಯುಳ್ಳೊಡೆ ನಿನ್ನ
ತಲೆಯ ಬೆಲೆಗಿದೆ ಸಾಹಸದ್ರವ್ಯಮೆನ್ನೊಳೆಂದಾರ್ಜುನಿ ಪಚಾರಿಸಿದನು

ಈ ಮಾತಿನಿಂದ ಕೆರಳಿದ ಅರ್ಜುನನು ಕೋಪದಿಂದ ನೆತ್ತರುಗಣ್ಣನವನಾಗಿ ಬಭ್ರುವಾಹನನ ಮೇಲೆ ಬಾಣದ ಮಳೆಯನ್ನೇ ಸುರಿಸುವನು. ಬಭ್ರುವಾಹನನು ವೀರಾವೇಶದಿಂದ ಉತ್ತರಕೊಟ್ಟು ಅರ್ಜುನನ ಸಾರಥಿಯನ್ನು ಕೊಂದು ಬಾವುಟದಲ್ಲಿದ್ದ ಹನುಮಂತನನ್ನು ಚೀರಿಸಿದನು. ಅಸ್ತ್ರರೂಪದಲ್ಲಿದ್ದ ಜ್ವಾಲೆ ಬಭ್ರುವಾಹನನಿಂದ ಪ್ರಯೋಗಿಸಲ್ಪಟ್ಟು ಅರ್ಜುನನ ಶಿರವನ್ನು ಕತ್ತರಿಸುವಳು. ಕೇಶವಾ, ಕೃಷ್ಣಾ ಎಂದು ಚೀರುತ್ತಾ ಅರ್ಜುನನ ತಲೆ ವೃಷಕೇತುವಿನ ಶಿರದ ಹತ್ತಿರ ಬೀಳುವುದು.

ಚಿತ್ರಾಂಗದೆ, ಉಲೂಪಿಯರಿಗೆ ಸುದ್ದಿ ತಿಳಿದಾಗ ಅವರ ದುಃಖ ಮೇರೆ ಮೀರಿತು. ಹಸ್ತಿನಾವತಿಯಲ್ಲಿ ಕುಂತಿಗೆ ಬಿದ್ದ ದುಃಸ್ವಪ್ನದಿಂದ ಸಂಗತಿ ತಿಳಿದು ಕೃಷ್ಣನು ಯುದ್ಧಭೂಮಿಗೆ ಧಾವಿಸುವನು. ಅಷ್ಟರಲ್ಲಿ ಎಲ್ಲ ಮುಗಿದಿರುತ್ತದೆ. ಬಭ್ರುವಾಹನನು ಪಿತೃವಧೆಯ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಅಗ್ನಿಪ್ರವೇಶಕ್ಕೆಳಸುವನು. ಉಲೂಪಿಯ ಸಲಹೆಗೆ ಬಭ್ರುವಾಹನನ ಶೌರ್ಯವೂ ಸೇರಿ ಪಾತಾಳದ ಸಂಜೀವಕ ಮಣಿಯನ್ನು ಆದಿಶೇಷನು ಕೊಡುವನು. ಇಷ್ಟರಲ್ಲಿ ಅರ್ಜುನನ ತಲೆ ಧೃತರಾಷ್ಟ್ರಪುತ್ರನಿಂದ ಕಳವಾಗಿರುತ್ತದೆ. ಶ್ರೀಕೃಷ್ಣನು ಸಂಕಲ್ಪ ಮಾತ್ರದಿಂದ ಅರ್ಜುನನ ತಲೆಯನ್ನು ಇದ್ದಲ್ಲಿಗೇ ತರಿಸಿ ವೃಷಕೇತು ಸಹಿತ ಅರ್ಜುನನನ್ನೂ ಸಂಜೀವಕ ಮಣಿಯಿಂದ

ಬದುಕಿಸುವನು. ಬಭ್ರುವಾಹನನನ್ನೂ ಅರ್ಜುನ ಮನ್ನಿಸಿ, ಕೆಲವು ದಿನ ಮಣಿಪುರದಲ್ಲಿ ಕೃಷ್ಣಸಹಿತ ಕಳೆದು ಮುಂದೆ ಸಾಗುತ್ತಾನೆ.

3

ಬಭ್ರುವಾಹನ - ಅರ್ಜುನರ ಕಾಳಗದ ಕಥೆಯನ್ನು ಆಲಿಸುತ್ತಿದ್ದ ಜನಮೇಜಯನು ಹೋಲಿಕೆಯಾಗಿ ಬಂದ ಕುಶ–ಲವರ ಮತ್ತು ಶ್ರೀರಾಮ ಚಂದ್ರನ ಕಾಳಗವನ್ನು ಕೇಳಲು ತವಕಿಸುತ್ತಾನೆ. ಈ ನೆವದಲ್ಲಿ ಕವಿ ಸೀತಾ ವನವಾಸದ ಕಥೆಯನ್ನು ಬಣ್ಣಿಸುವನು. ಹಿನ್ನೆಲೆಯಾಗಿ ರಾಮಾಯಣದ ಕಥೆಯನ್ನೆಲ್ಲಾ ಹತ್ತು ಪದ್ಯಗಳಲ್ಲಿ ಸಂಗ್ರಹಿಸಿದ್ದಾನೆ.

ಲಕ್ಷ್ಮೀಶನ 'ಜೈಮಿನಿ ಭಾರತ' ಪ್ರಧಾನವಾಗಿ ಕಾಳಗಗಳ ಕಥೆ. ವೀರದ ಹೊರತು ಇನ್ನುಳಿದ ರಸಕ್ಕೆ ಅಲ್ಲಿ ನ್ಯಾಯವಾಗಿ ಪ್ರವೇಶವಿಲ್ಲ. ಇದು ಸ ಕಷ್ಟು ನೀರಸವಾಗುವ ಸಂಭವವೂ ಇದೆ. ಆದುದರಿಂದಲೇ ಕವಿ ಎಚ್ಚರಿಕೆ ವಹಿಸಿ ಅಲ್ಲಿನ ಉಪಕಥೆಗಳಲ್ಲಿ ಲಲಿತವಾದ ಮಾನವೀಯ ಭಾವನೆಗಳನ್ನು ಉದ್ದೀಪಿಸಿ ಆನಂದ ಕೊಡಬಲ್ಲ ಪ್ರಸಂಗಗಳನ್ನು ಕಲ್ಪಿಸಿಕೊಂಡಿದ್ದಾನೆ. ಸೀತಾ ವನವಾಸ, ಚಂದ್ರಹಾಸನ ಬಾಲ್ಯ ಇಂತಹ ಕರುಣ ರಮ್ಯ ಪ್ರಸಂಗಗಳೇ 'ಜೈಮಿನಿ ಭಾರತ'ದ ಶ್ರೇಷ್ಠ ಭಾಗಗಳೆಂದು ಹೆಸರಾಗಿವೆ. ಕಾಳಗಪ್ರಿಯ ರೇನೋ 'ಜೈಮಿನಿ ಭಾರತ'ದಿಂದ ಸ್ಫೂರ್ತಿಪಡೆದು ಸುಧನ್ವನ ಕಾಳಗ, ಬಭ್ರುವಾಹನನ ಕಾಳಗ, ತಾಮ್ರಧ್ವಜನ ಕಾಳಗ ಮುಂತಾದ ಯಕ್ಷಗಾನ ಪ್ರಸಂಗಗಳನ್ನೂ ರಚಿಸಿ, ಆಡಿ ಕುಣಿದಿದ್ದಾರೆ. ಆದರೆ ಸಹೃದಯರಿಗೆ ಪ್ರಿಯ ವಾಗಿರುವ ಭಾಗಗಳಲ್ಲಿ ಸೀತಾವನವಾಸಕ್ಕೆ ಅಗ್ರಸ್ಥಾನ ದೊರೆಯುತ್ತದೆ. 'ಜೈಮಿನಿ ಭಾರತ'ದಿಂದ ಪ್ರತ್ಯೇಕಿಸಿದರೂ ಸ್ವತಂತ್ರವಾದ ಕಾವ್ಯದಂತೆ ಕಂಗೊಳಿಸಬಲ್ಲ ಪೂರ್ಣತೆ ಇಲ್ಲಿ ಬರುವ 'ಉತ್ತರರಾಮಾಯಣ'ಕ್ಕಿದೆ.

ರಾವಣನನ್ನು ಸಂಹರಿಸಿ ಅಯೋಧ್ಯೆಗೆ ಹಿಂದಿರುಗಿದ ರಾಮನಿಗೆ ಪಟ್ಟಾಭಿಷೇಕವಾಗುತ್ತದೆ. ಮಕ್ಕಳಿಲ್ಲವಲ್ಲಾ ಎಂಬ ಕೊರತೆಯೂ ನೀಗು ವಂತೆ ಕೆಲಕಾಲದಲ್ಲಿಯೇ ಸೀತೆಯೂ ಗರ್ಭವತಿಯಾಗುತ್ತಾಳೆ. ಎಲ್ಲವೂ ಸರಿಯಾಗಿದೆ ಎನ್ನುವಾಗಲೇ ಕಷ್ಟದ ಕಾರ್ಮೋಡಗಳು ಕವಿಯುತ್ತವೆ. ಸೀತೆ ಯನ್ನು ಕುರಿತ ಸಲ್ಲದ ಪಿಸುಮಾತೊಂದನ್ನು ಗೂಢಚಾರರು ರಾಮನಿಗೆ ವರದಿ ಮಾಡುತ್ತಾರೆ. ಇದರ ಪರಿಣಾಮವಾಗಿ ಬಂದೊದಗುವ ಸೀತಾ

ವನವಾಸಕ್ಕೆ ಪೀಠಿಕೆಯಾಗಿ ಕವಿ ರಾಮನ ಕನಸಿನ ಪ್ರಸಂಗವೊಂದನ್ನು ಸೃಷ್ಟಿಸಿದ್ದಾನೆ. ಮುಂದಾಗುವ ಘಟನೆಗಳು ಮೊದಲೇ ಸೂಚನೆ ಕೊಡುತ್ತವೆ. ಎಂಬಂತೆ ಸೀತೆ ತನ್ನ ಗಂಡನಲ್ಲಿ ಆಸೆಯೊಂದನ್ನು ಬಿನ್ನವಿಸಿದ್ದಾಳೆ. ಕಾಡಿನಲ್ಲಿ ಋಷಿಪತ್ನಿಯರೊಡನೆ ಕೆಲವು ಕಾಲ ಕಳೆಯಬೇಕೆಂಬುದು ಅವಳ ಆಸೆ. ರಾಮನಿಗೆ ಒಂದು ಕನಸು ಬೀಳುತ್ತದೆ. ಅದರಲ್ಲಿ ಸೀತೆ ಅನಾಥಳಾಗಿ ಗಂಗಾತೀರದ ಕಾಡಿನಲ್ಲಿ ಸುತ್ತುತ್ತಿರುತ್ತಾಳೆ. ವಸಿಷ್ಠನು ದುಃಸ್ವಪ್ನಕ್ಕೆ ಶಾಂತಿಯನ್ನು ಮಾಡಿಸುತ್ತಾನೆ. ಆದರೂ ಸೀತೆಯ ದುರ್ವಿಧಿ ತೊಲಗಲಿಲ್ಲ. ಗೂಢಚಾರರು ಬಂದು ಅಗಸನೊಬ್ಬನ ತಲೆಹರಟೆಯನ್ನು ಶ್ರೀರಾಮಚಂದ್ರನಿಗೆ ಹೇಳಿದರು. ಮನೆಬಿಟ್ಟು ಹೋಗಿದ್ದ ಹೆಂಡತಿ ಮರಳಿ ಬಂದಾಗ ಅಗಸನು 'ಬಿಟ್ಟ ಹೆಂಡತಿ ಕಟ್ಟಿಕೊಳ್ಳಲು ನಾನು ಶ್ರೀರಾಮನಲ್ಲ' ಎಂದನಂತೆ. ಇದನ್ನು ಕೇಳಿದ ರಾಘವನು ನಿಡಿದಾಗಿ ಉಸಿರುಬಿಟ್ಟನು. ದೀರ್ಘವಾದ ಯೋಚನೆಗೆ ಒಳಗಾದನು. ಸೀತೆ ಪವಿತ್ರಳೆಂದೂ ಅಗ್ನಿಸಿದ್ಧವಾಗಿ ಗೊತ್ತಾಗಿದೆ. ದಶರಥನೇ ಸ್ವರ್ಗದಿಂದಿಳಿದು ಸಾಕ್ಷಿ ಹೇಳಿದ್ದಾನೆ. ಆದರೂ ರಾಜನಾಗಿ ತನ್ನ ಮೇಲ್ಪಂಕ್ತಿ ಜನಕ್ಕೆ ಮಾದರಿಯಾಗಬೇಕೆಂದು ರಾಮನು ಬಯಸುತ್ತಾನೆ. ತಮ್ಮಂದಿರನ್ನು ಕರೆಸಿ ತನ್ನ ನಿರ್ಧಾರವನ್ನು ತಿಳಿಸುತ್ತಾನೆ :

ಕಲಿಯುಗದ ವಿಪ್ರರಾಚಾರಮಂ ಬಿಡುವಂತೆ
ಹಲವು ಮಾತೇನಿನ್ನು ಸೀತೆಯಂ ಬಿಟ್ಟೆನೆನೆ
ಬಲುಗರಮಿದೆತ್ತಣದೊ ಕಾರುಣ್ಯನಿಧಿಗೆನುತೆ ಡನಡುಗಿ ಭೀತಿಯಿಂದೆ
ನೆಲೆಗೊಂಡ ವೇದಮಂ ಧರೆಯ ಪಾಷಂಡಿಗಳ್
ಸಲೆ ನಿಂದಿಸಿದೊಡಂ ಮಾಣ್ಬರೇ ದ್ವಿಜರಕಟ
ಕುಲವರ್ಧಿನಿಯನೆಂತು ಬಿಡುವೆ ನೀಂ ಪೇಳೆಂದರನುಜಾತರಗ್ರಜಂಗೆ

ಸೀತೆ ದೋಷರಹಿತಳೆಂಬ ತಮ್ಮಂದಿರ ವಾದವನ್ನು ರಾಮನು ಒಪ್ಪಿಕೊಳ್ಳುತ್ತಾನಾದರೂ ಅವಳನ್ನು ತ್ಯಜಿಸಬೇಕೆನ್ನುವ ಪೂರ್ವ ನಿರ್ಧಾರವನ್ನು ಬದಲಿಸುವುದಿಲ್ಲ.

ಅರಸ ಕೇಳನುಜರಾಡಿದ ನುಡಿಗೆ ತಲೆವಾಗಿ
ತರಣಿಕುಲತಿಲಕನೊಯ್ಯನೆ ದೈನ್ಯ ಭಾವದಿಂ
ತರಹರಿಸಬಾರದಪವಾದಹೃಚ್ಛೂಲಮಂ ತನಗೆ ಜಾನಕಿಯನುಳಿದು
ಪೆರೆಯುರ್ಚಿದುರಗನಂತಿರ್ದಪೆಂ ಸಾಕು ನಿಮ
ಗೊರೆದೊಡೇನಹುದೆಂದು ಬೇಸರೊಳ್ ಮನೆಗಳ್ಗೆ
ಭರತ ಶತ್ರುಘ್ನರಂ ಕಳುಹುತೇಕಾಂತದೊಳ್ ಸೌಮಿತ್ರಿಗಿಂತೆಂದನು

ಸೀತೆ ಈಗಾಗಲೇ ತಾನು ಋಷಿಪತ್ನಿಯರನ್ನು ನೋಡುವ ಬಯಕೆಯನ್ನು ವ್ಯಕ್ತಪಡಿಸಿದ್ದಾಳೆ. ಈ ನೆಪದಿಂದ ಅವಳನ್ನೊಯ್ದು ಕಾಡಿಗೆ ಬಿಟ್ಟುಬರಲು ಲಕ್ಷ್ಮಣನಿಗೆ ರಾಮನು ಅಪ್ಪಣೆ ಮಾಡುತ್ತಾನೆ. ಅಣ್ಣನ ಅಪ್ಪಣೆ ಮೀರಿದರೆ ರೌರವ ನರಕ. ತಾಯಿಸಮಾನಳಾದ ಸೀತೆಗೆ ದ್ರೋಹ ಬಗೆದರೂ ಮಹಾಪಾಪ. ಆಯ್ಕೆ ಕಷ್ಟವಾದರೂ ಮಹಾದುಃಖದಿಂದ ಸೀತೆಯನ್ನು ಅರಣ್ಯಕ್ಕೆ ಕರೆದೊಯ್ಯಲು ಲಕ್ಷ್ಮಣನು ಮನಸ್ಸನ್ನು ದೃಢಪಡಿಸಿಕೊಳ್ಳುತ್ತಾನೆ.

ಸೀತಾಪರಿತ್ಯಾಗವನ್ನು ಮಾಡಿದ ರಾಮನ ನಡವಳಿಕೆ ತುಂಬಾ ಚರ್ಚೆಗೊಳಗಾಗಿರುವ ವಿಚಾರ. ಇದರಲ್ಲಿ ಸರಿ-ತಪ್ಪುಗಳೇನೇ ಇರಲಿ ಈ ಸಂದರ್ಭದಲ್ಲಿ ರಾಮನ ಮಾತುಗಳು ವಿರೋಧಾಭಾಸಕರವಾಗಿವೆ. ಅವನ ಮನಸ್ಸಿನಲ್ಲಿ ಏಳಬಹುದಾದ ತಳಮಳವನ್ನು ಕವಿ ಇನ್ನೂ ಪರಿಣಾಮಕಾರಿಯಾಗಿ ಚಿತ್ರಿಸಬಹುದಿತ್ತೆಂಬ ಆಲೋಚನೆ ಓದುಗರಿಗೆ ಬರದಿರದು. ಹಾವು ಪರೆಯನ್ನು ಕಳೆದು ಸುಖದಿಂದಿರುವಂತೆ ಸೀತೆಯನ್ನು ತ್ಯಜಿಸಿ ತಾನು ಬದುಕುವೆನೆಂಬ ಮಾತನ್ನು ಶ್ರೀರಾಮಚಂದ್ರನಿಂದ ಕವಿ ಹೇಳಿಸಿ ಅಲ್ಲಿನ ಪಾತ್ರ ಘನತೆಗೆ ಅಪಚಾರವೆಸಗಿದ್ದಾನೆ. ಒಟ್ಟಾರೆ ಸೀತಾಪರಿತ್ಯಾಗದ ಕಥೆ ಮತ್ತು ಅದನ್ನು ನಮ್ಮ ಕವಿಗಳು ನಿರ್ವಹಿಸಿರುವ ರೀತಿ ಒಂದು ಅಂಶವನ್ನು ಸ್ಪಷ್ಟಪಡಿಸುತ್ತವೆ. ನಮ್ಮ ಪ್ರಾಚೀನ ಸಂಸ್ಕೃತಿಯಲ್ಲಿ ಹೆಣ್ಣಿಗೆ ಉನ್ನತ ಸ್ಥಾನವಿತ್ತೆಂಬ ಮಾತು ಕೇವಲ ಢೋಂಗಿ. ನಿಜವಾಗಿ ಹೆಣ್ಣು ಕೇವಲ ಗಂಡಿನ ಆಟದ ಬೊಂಬೆಯಾಗಿದ್ದಳು. ಹಿತವಾದಾಗ ಹತ್ತಿರ ಇಟ್ಟುಕೊಂಡು ಬೇಡವಾದಾಗ ಎಸೆಯುವ ಸ್ವಾತಂತ್ರ್ಯ ಗಂಡಿಗೆ ಇತ್ತು. ಒಂದು ಹೆಣ್ಣು ಇದೇ ರೀತಿಯಲ್ಲಿ ತನ್ನ ಗಂಡನನ್ನು ನಡೆಸಿಕೊಳ್ಳುವ ಪ್ರಸಂಗವನ್ನು ಕಲ್ಪಿಸಿಕೊಳ್ಳುವಂತೆಯೂ ಇಲ್ಲ. ಹಾಗಿದ್ದರೆ ಅವಳನ್ನು ಪತಿತೆ, ಜಾರೆ ಎಂದು ಹೆಸರಿಟ್ಟು ನೂಕಿಬಿಡುತ್ತಿದ್ದರು. 'ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ, ಹೆಣ್ಣಾಗಿ ಸಂಭವಿಸಿ ಒಡಲಂ ಪೊರೆವ ಎನ್ನೊಳ್ ಅಪರಾಧಮುಂಟು' ಎಂಬ ಸೀತೆಯ ಮಾತುಗಳು ನಮ್ಮ ಸಮಾಜದಲ್ಲಿ ಎಲ್ಲ ಕಾಲದಲ್ಲಿಯೂ ನಡೆಯುತ್ತಿರುವ ಹೆಣ್ಣಿನ ಶೋಷಣೆಗೆ ಪ್ರತೀಕದಂತಿದೆ. ನಮ್ಮ ಸಂಸ್ಕೃತಿಯ ಹಿರಿಮೆಯನ್ನು ಹೊಗಳುವವರಿಗೆ ಈ ಮಾತು ಹೆಣ್ಣಿನ ಕ್ಷಮಾಗುಣಕ್ಕೆ ಸಂಕೇತವಾಗಿ ಕಂಡುಬಂದಿದೆ. ಇಂಥ ಅಭಿಪ್ರಾಯಗಳು ವಸ್ತುಸ್ಥಿತಿಯನ್ನು ತಪ್ಪುದಾರಿಗೆ ಎಳೆಯುತ್ತವೆ, ಅಷ್ಟೆ.

ಲಕ್ಷ್ಮಣನು ಸೀತೆಯನ್ನು ಅರಣ್ಯ ಪ್ರದೇಶಕ್ಕೆ ತಂದು ಬಿಟ್ಟು ಹೊರಡುವ ಸನ್ನಿವೇಶವನ್ನು ಕವಿ ಅತ್ಯಂತ ಆರ್ದ್ರ ಹೃದಯನಾಗಿ ಚಿತ್ರಿಸಿದ್ದಾನೆ. ಅಲ್ಲಿನ ಸಂಭಾಷಣೆ ಪ್ರಕೃತಿ ವರ್ಣನೆ ಎಲ್ಲವೂ ಕರುಣಕ್ಕೆ ಪೋಷಕವಾಗಿದೆ. ಘೋರ ಅಡವಿಗೆ ತಂದು, ರಥದಿಂದಿಳಿದು ಸೀತೆಗೆ ಸಂಗತಿಯನ್ನು ತಿಳಿಸಿದ ಕೂಡಲೇ ಬರಸಿಡಿಲೆರಗಿದಂತಾಗುತ್ತದೆ. ಋಷಿಪತ್ನಿಯರನ್ನು ನೋಡಲು ಹೋಗುತ್ತಿರುವೆನೆಂದು ಭಾವಿಸಿದವಳಿಗೆ ಚಿರವನವಾಸದ ಸುದ್ದಿ—ಅದೂ ತಾನು ಕಳಂಕಿತಳೆಂಬ ಅಪವಾದದೊಡನೆ—ಗೊತ್ತಾದಾಗ ಹೇಗಾಗಿರಬೇಡ ! ನಿಂತಲ್ಲಿಯೇ ಕುಸಿದು ಬೀಳುವಳು :

ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ
ಮುರಿದಿಳೆಗೊರಗುವಂತೆ ಲಕ್ಷ್ಮಣನ ಮಾತು ಕಿವಿ
ದೆರೆಗೆ ಬೀಳದ ಮುನ್ನ ಹಮ್ಮೈಸಿ ಬಿದ್ದಳಂಗನೆಧರೆಗೆ ನಡುನಡುಗುತ
ಮರೆದಳಂಗೋಪಾಂಗಮಂ ಬಳಿಕ ಸೌಮಿತ್ರಿ
ಮರುಗಿ ತಣ್ಣೀರ್ದಳೆದು ಪತ್ರದೊಳ್ ಕೊಡೆವಿಡಿದು
ಸೆರಗಿಂದೆ ಬೀಸಿ ರಾಮನ ಸೇವೆ ಸಂದುದೇ ತನಗೆಂದು ರೋದಿಸಿದನು

* * *

ಒಯ್ಯನೆರಗಳಿಗೆಯೊಳ್ ಕಣ್ದೆರೆದು ದೈನ್ಯದಿಂ
ಸುಯ್ಯೆಲರನುರೆ ಸೂಸಿ ಸೌಮಿತ್ರಿಯಂ ನೋಡಿ
ಕೊಯ್ಯಲೊಲ್ಲದೆ ಕೊರಳನಿಂತು ತನ್ನಂ ಬಿಡಲ್ ಮಾಡಿದಪರಾಧಮುಂಟೆ
ಕೈಯಾರೆ ಖಡ್ಗಮಂ ಕೊಟ್ಟು ತನ್ನರಸಿಯಂ
ಪೊಯ್ಯೆಂದು ಪೇಳದಡವಿಗೆ ಕಳುಹಿ ಬಾಯೆಂದ
ನಯ್ಯಯ್ಯೊ ರಾಘವಂ ಕಾರುಣ್ಯನಿಧಿಯೆಂದಳಲ್ದಳಂಭೋಜನೇತ್ರೆ

ಸೀತೆಯನ್ನು ಬಿಟ್ಟುಹೋಗುವ ಮುನ್ನ ಲಕ್ಷ್ಮಣನು ಕಾಡಿನಲ್ಲಿದ್ದ ಗಿಡಮರಗಳು, ಮೃಗಪಕ್ಷಿಗಳಿಗೆಲ್ಲಾ ಬೇಡಿಕೊಳ್ಳುತ್ತಾನೆ; ಸೀತೆಯನ್ನು ನೋಡಿಕೊಳ್ಳುವಂತೆ. ವನದೇವಿಗೆ ಅವಳ ರಕ್ಷಣೆಯ ಭಾರವನ್ನು ಒಪ್ಪಿಸುತ್ತಾನೆ. ಜಾಹ್ನವಿ, ಧರ್ಮದೇವತೆ ಮತ್ತು ಸೀತೆಯ ತಾಯಿಯಾದ ಭೂದೇವಿಯನ್ನು ಪ್ರಾರ್ಥಿಸಿ ತುಂಬು ಗರ್ಭಿಣಿಯನ್ನು ಅವರ ಕರುಣಾರಕ್ಷೆಗೆ ಒಪ್ಪಿಸಿ ಹಿಂದಿರುಗುವನು. ಲಕ್ಷ್ಮಣ ಅತ್ತ ಹೋಗುತ್ತಲೇ ಸೀತೆ ಚರಾಚರವೆಲ್ಲಾ ಕರಗುವಂತೆ ದುಃಖಿಸಿ ಮತ್ತೆ ಮೂರ್ಛೆ ಹೋದಳು. ಸೀತೆಯನ್ನು ಬಿಟ್ಟುಹೋದ ಲಕ್ಷ್ಮಣನ ದುಗುಡ, ಇತ್ತ ಅವನು ಹೋದಮೇಲೆ ಸೀತೆ—ಆಧಾರ ತಪ್ಪಿ

ಅನಾಥಳಾಗಿ ಭೂಮಿಗೆ ಬಿದ್ದುದನ್ನು ಕವಿ ಕರುಣರಮ್ಯವಾಗುವಂತೆ ಚಿತ್ರಿಸಿದ್ದಾನೆ :

ತಾಯನೆಳಗರು ಬಿಟ್ಟುವಂತೊಯ್ಯನೊಯ್ಯನ
ತ್ಯಾಯಾಸದಿಂದಗಲ್ದುಮರ ನದಿಯಂ ದಾಂಟಿ
ರಾಯ ಕೇಳ್ ದುಃಖಾರ್ತನಾಗಿ ಸೌಮಿತ್ರಿ ಸಾಗಿದನತ್ತಲಿವಳಿತ್ತಲು
ಬಾಯಾರಿ ಕಂಗೆಟ್ಟು ಲಕ್ಷ್ಮಣನ ತಲೆಮಸುಳ
ಲಾಯೆಂದೊರಲ್ದು ಭಯಶೋಕದಿಂದಸವಳಿದು
ಕಾಯಮಂ ಮರೆದವನಿಗೊರಗಿದಳ್ ಮೂಲಮಂ ಕೊಯ್ದೆಳೆಯ ಬಳ್ಳಿಯಂತೆ

* * *

ಅರಸ ಕೇಳಲ್ಲಿಯ ಪಕ್ಷಿ ಮೃಗ ಜಂತುಗಳ್
ಧರಣಿ ಸುತೆಯಂ ಬಳಸಿ ನಿಂದು ಮೈಯುಡುಗಿ ಜೋ
ಲ್ದಿರದೆ ಕಂಬನಿಗರೆದು ನಿಜವೈರಮಂ ಮರೆದು ಪುಲ್ಮೇವುಗಳನೆತೊರೆದು
ಕೊರಗುತಿರ್ದುವು ಕೂಡೆ ವೃಕ್ಷಲತೆಗಳ್ ಬಾಡಿ
ಸೊರಗುತಿರ್ದುವು ಶೋಕಭಾರದಿಂ ಕಲ್ಗಳುಂ
ಕರಗುತಿರ್ದುವು ಜಗದೊಳುತ್ತಮರ ಹಾನಿಯಂ ಕಂಡು ಸೈರಿಸುವರುಂಟೆ

ಸೀತೆ ಹೀಗೆ ದುಃಸ್ಥಿತಿಯಲ್ಲಿರುವಾಗಲೇ ವಾಲ್ಮೀಕಿ ಮಹರ್ಷಿಗಳ ಆಗಮನ ಆಗುವುದು. ಅವಳ ಗುರುತುಹಿಡಿದು ಅಭಯವನ್ನಿತ್ತು, ತಮ್ಮ ಆಶ್ರಮಕ್ಕೆ ಕರೆದೊಯ್ಯುವರು. ಅಲ್ಲಿ ಕುಶಲವರೆಂಬ ಅವಳಿ ಮಕ್ಕಳಿಗೆ ಆಕೆ ಜನ್ಮವೀಯು ವಳು. ವಾಲ್ಮೀಕಿಯ ಪ್ರೀತಿಯ ರಕ್ಷೆಯಲ್ಲಿ ಮಕ್ಕಳು ಬೆಳೆದು ದೊಡ್ಡವ ರಾಗುವರು. ರಾಮಾಯಣವನ್ನು ರಾಗವಾಗಿ ಓದುವುದರಲ್ಲಿ ಮತ್ತು ಬಿಲ್ವಿ ದ್ಯೆಯಲ್ಲಿ ಅವರನ್ನು ಮೀರಿಸುವವರು ಇನ್ನಿಲ್ಲ ಎಂಬಂತಿರುವ ಕುಶಲವರು ತಮ್ಮ ತಂದೆಯನ್ನು ಮೊದಲು ಭೇಟಿಯಾಗುವುದು ಯುದ್ಧರಂಗದಲ್ಲಿ.

ರಾವಣವಧೆಯಿಂದಾದ ಪಾಪ ಪರಿಹಾರಕ್ಕಾಗಿ ಅಶ್ವಮೇಧವನ್ನು ಸುವರ್ಣ ಸೀತಾಸಮೇತ ಮಾಡಲುದ್ಯೋಗಿಸಿದ ರಾಘವನ ಯಾಗಾಶ್ವ ವಾಲ್ಮೀಕಿಯ ಆಶ್ರಮದ ಹತ್ತಿರ ಬಂದಿತು. ಕುದುರೆಯ ಹಣೆಯ ಅಕ್ಷರವನ್ನು ಓದಿ ಕೇಳಿದ ಲವ ಅದನ್ನು ಕಟ್ಟಿಬಿಟ್ಟ. ಮುಂದೆ ಶತ್ರುಘ್ನನಿಗೂ ಅವನಿಗೂ ನಡೆದ ಯುದ್ಧದಲ್ಲಿ ಶತ್ರುಘ್ನನು ಲವನನ್ನು ಮೂರ್ಛೆಗೊಳಿಸುವನು. ರೂಪ ದಲ್ಲಿ ರಾಮನನ್ನು ಹೋಲುವ ಈ ಮಗುವನ್ನು ಶತ್ರುಘ್ನನು ರಥದಲ್ಲಿರಿಸಿ ಕೊಂಡು ಹೊರಟುಹೋಗುವನು. ಸಂಗತಿ ತಿಳಿದ ಕುಶನು ಶತ್ರುಘ್ನನನ್ನು

ಹಿಂಬಾಲಿಸಿ ತಮ್ಮನನ್ನು ಬಿಡಿಸುವನು. ಯುದ್ಧದಲ್ಲಿ ಶತ್ರುಘ್ನ ಸೋತು ಮೂರ್ಛೆ ಹೋಗುವನು. ಈ ಸೋಲಿನ ಪರಂಪರೆ ಲಕ್ಷ್ಮಣ, ಭರತ, ಹನುಮಂತಾದಿಗಳಿಗೂ ವಿಸ್ತರಿಸುವುದು. ಸಾಕ್ಷಾತ್ ಶ್ರೀರಾಮಚಂದ್ರನೇ ಸುದ್ದಿ ತಿಳಿದು ರಣರಂಗಕ್ಕೆ ಧಾವಿಸುತ್ತಾನೆ. ತನ್ನ ಪ್ರತಿರೂಪದಂತಿರುವ ಅವಳಿ ಮಕ್ಕಳನ್ನು ನೋಯಿಸಲು ಇಷ್ಟವಿಲ್ಲದೆ ಪ್ರೀತಿಯಿಂದ ಮಾತನಾಡಿಸಿದನು. ಆದರೆ ಲವಕುಶರ ರೂಪದಂತೆ ಬಾಣಗಳು ಲಲಿತವಾಗಿಲ್ಲವೆಂಬುದು ಕೂಡಲೇ ಮನದಟ್ಟಾಯಿತು. ತಂದೆ ಮಕ್ಕಳ ನಡುವೆ ನಡೆದ ಮಹಾಘೋರ ಕಾಳಗದಲ್ಲಿ ಶ್ರೀರಾಮ ಸೋತು ಮೂರ್ಛೆ ಹೋಗುವನು.

"ಶ್ರೀರಾಮನ ತಪ್ಪಿಗೆ ಆತನು ತನ್ನ ಮಕ್ಕಳಿಂದ ಪರಾಜಯ ಹೊಂದುವುದೇ ಲೌಕಿಕಉತ್ತರಾರ್ಹವಾದ ಪ್ರಾಯಶ್ಚಿತ್ತ, ಯಾರಾದರೇನು, ಧರ್ಮಕ್ಕೆ ಹೊರತಲ್ಲ. ಸೀತೆಯನ್ನು ಪುನಃ ರಾಮನು ಇನ್ನಾವ ರೀತಿಯಿಂದ ಸ್ವೀಕರಿಸಿದರೂ ಇಷ್ಟು ರಸಭರಿತವಾಗುತ್ತಿರಲಿಲ್ಲ. ಒಂದು ವೇಳೆ ವಾಲ್ಮೀಕಿಯೇ ಸೀತೆಯನ್ನು ಆಕೆಯ ಮಕ್ಕಳೊಡನೆ ಪುನಃ ರಾಮನ ಬಳಿಗೆ ಕರೆದುಕೊಂಡು ಹೋಗಿದ್ದರೆ ಧರ್ಮಕ್ಕೆ ಸಂಪೂರ್ಣ ಜಯವಾಗುತ್ತಿರಲಿಲ್ಲ. ರಾಮಚಂದ್ರನೇ ಆಶ್ರಮಕ್ಕೆ ಬಂದು ತನ್ನ ಸುತರಿಂದ ಸೋತು, ತರುವಾಯ ವಾಲ್ಮೀಕಿಯ ಮಾತಿನಂತೆ ತಾಯಿ ಮಕ್ಕಳನ್ನು ಸ್ವೀಕರಿಸುವುದು ಧರ್ಮ ಸಾಮ್ರಾಜ್ಯದ ಅಸ್ತಿತ್ವವನ್ನು ಬಿಚ್ಚಿ ತೋರಿಸುತ್ತದೆ."[1]

ತಂದೆ ಮಕ್ಕಳ ಕಾಳಗ ನಡೆದ ದಿನ ವಾಲ್ಮೀಕಿಗಳು ಆಶ್ರಮದಲ್ಲಿರಲಿಲ್ಲ. ಕುಶಲವರು ಜಾಂಬವ, ಹನುಮಂತಾದಿ ಪ್ರತಿ ವೀರರನ್ನು ಹಿಂಗಟ್ಟು ಕಟ್ಟಿ ಎಳೆದು ತರುವರು. ನಡೆದ ಘಟನೆಗಳನ್ನೆಲ್ಲಾ ಕೇಳಿದ ಸೀತೆ ಆಶ್ರಮದಲ್ಲಿ ಭೂತಹಿಂಸೆಯಾಯಿತೆಂದು ಅಂಜುವಳು. ಸಮಯಕ್ಕೆ ಸರಿಯಾಗಿ ದೇವಲೋಕದಿಂದ ಹಿಂದಿರುಗಿದ ವಾಲ್ಮೀಕಿಗಳು ಎಲ್ಲರನ್ನೂ ಸಂತೈಸಿ ರಾಮ, ಲಕ್ಷ್ಮಣ, ಭರತ ಮತ್ತು ಶತ್ರುಘ್ನರೊಡನೆ ಅಖಿಲ ಸೈನ್ಯವನ್ನೂ ಎಚ್ಚರಿಸಿ ಅನುಗ್ರಹಿಸುವರು. ಕುಶಲವರನ್ನು ಸೀತೆಯೊಡನೆ ರಾಘವನಿಗೆ ಒಪ್ಪಿಸುವರು. ರಾಮಾಯಣವನ್ನು ಮಕ್ಕಳು ತಂದೆಯೆದುರು ಹಾಡಿ ಅವನನ್ನು ಸಂತಸಗೊಳಿಸುವುದರೊಂದಿಗೆ ಈ ಪ್ರಸಂಗ ಮುಕ್ತಾಯವಾಗುತ್ತದೆ.

4

ಬಭ್ರುವಾಹನನ ಮಣಿಪುರದಿಂದ ಹೊರಟ ಕುದುರೆಯು ರತ್ನಪುರಕ್ಕೆ ಹೋಗುವುದು. ರತ್ನಪುರದ ಅರಸು ಮಯೂರಧ್ವಜನು ಏಳು ಅಶ್ವಮೇಧ ಯಾಗಗಳನ್ನು ಮಾಡಿ ಎಂಟನೆಯದಕ್ಕೆ ತೊಡಗಿದ್ದನು. ಮಹಾ ವಿಷ್ಣು ಭಕ್ತ, ಪರಾಕ್ರಮಿ. ಆತನ ಮಗ ತಾಮ್ರಧ್ವಜನು ಶೂರ. ಪಾಂಡವರ ಅಶ್ವಮೇಧದ ಕುದುರೆ ತಾಮ್ರಧ್ವಜನ ಕುದುರೆಯನ್ನು ತಾಗಿದಾಗ ಆತ ಸಂತೋಷಪಟ್ಟ. ಎಂಟನೆಯ ಅಶ್ವಮೇಧಯಾಗವಾದರೂ ಕೃಷ್ಣ ಸಹಿತ ವಾಗಲೆಂದು ಕುದುರೆಯನ್ನು ಕಟ್ಟಿದ. ತಾಮ್ರಧ್ವಜನೊಡನೆ ಕೃಷ್ಣಾರ್ಜುನ ರಿಬ್ಬರೂ ಕಾದುವರು. ಆದರೂ ಧೈರ್ಯಗುಂದದ ತಾಮ್ರಧ್ವಜನು ಇಬ್ಬ ರನ್ನೂ ಏಕಕಾಲದಲ್ಲಿ ಹಿಡಿದು ಕಟ್ಟಿಹಾಕಿದನಂತೆ. ಶ್ರೀಕೃಷ್ಣನಿಗೆ ನಮಸ್ಕರಿಸಿ ತಂದೆಯ ಬಳಿಗೆ ಹೋದ ತಾಮ್ರಧ್ವಜನು ಸಂಗತಿಯನ್ನು ತಿಳಿಸಿದಾಗ ಮಯೂರಧ್ವಜನು ತನ್ನ ಯಾಗವನ್ನು ನಿಲ್ಲಿಸಿ ಶ್ರೀಕೃಷ್ಣ ಸಂದರ್ಶನಾರ್ಥ ಹೊರಡುವುದರಲ್ಲಿದ್ದನು. ಅಷ್ಟರಲ್ಲಿಯೇ ಶ್ರೀಕೃಷ್ಣನು ಅರ್ಜುನನನ್ನು ಜೊತೆಗೆ ಕರೆದುಕೊಂಡು ಬ್ರಾಹ್ಮಣ ವೇಷಧಾರಿಯಾಗಿ ಮಯೂರಧ್ವಜನಲ್ಲಿಗೆ ಹೋಗುವನು. ತಾವಿಬ್ಬರೂ ಗುರುಶಿಷ್ಯರೆಂದು ಪರಿಚಯ ಮಾಡಿಕೊಳ್ಳು ವನು. ಬರುವಾಗ ದಾರಿಯಲ್ಲಿ ತನ್ನ ಮಗನನ್ನು ಸಿಂಹವೊಂದು ಹಿಡಿಯಿ ತೆಂದು ಹೇಳಿ, 'ನಿನ್ನ ದೇಹದ ಅರ್ಧಭಾಗವನ್ನು ಸೀಳಿಕೊಟ್ಟರೆ ಅದು ನನ್ನ ಮಗನನ್ನು ಬಿಡುವುದಂತೆ' ಎಂದು ಬೇಡಿದನು. ಪರೋಪಕಾರಕ್ಕಾಗಿ ಮಯೂರಧ್ವಜನು ತನ್ನ ದೇಹವನ್ನೇ ಸೀಳಿಸುವನು. ಶ್ರೀಕೃಷ್ಣನು ತನ್ನ ನಿಜಸ್ವರೂಪವನ್ನು ತೋರಿಸಿ ಮಯೂರಧ್ವಜ, ತಾಮ್ರಧ್ವಜರ ಭಕ್ತಿಯನ್ನು ಸ್ವೀಕರಿಸುವನು. ಮಯೂರಧ್ವಜನು ಸರ್ವಸ್ವವನ್ನೂ ಕೃಷ್ಣಾರ್ಜುನರಿ ಗರ್ಪಿಸಿಬಿಟ್ಟಮೇಲೆ ಕುದುರೆಯು ಸಾರಸ್ವತ ಪುರವನ್ನು ಸೇರುವುದು.

ಸಾರಸ್ವತ ಪುರದ ಅರಸು ವೀರವರ್ಮ. ಅಗ್ನಿ–ಯಮರಿಬ್ಬರೂ ಆತನ ಅಳಿಯಂದಿರು. ಶ್ರೀಕೃಷ್ಣ ದರ್ಶನವಿಲ್ಲದೇ ಆತನಿಗೆ ಮರಣವಿಲ್ಲ ಎಂಬ ಒಂದು ವರವನ್ನು ಪಡೆದಿದ್ದವನು. ವೀರವರ್ಮನೊಂದಿಗೆ ನಡೆದ ಯುದ್ಧ ದಲ್ಲಿ ಹನುಮಂತ, ಅರ್ಜುನ, ಕೃಷ್ಣ ಮೂವರೂ ಹೋರಾಡುತ್ತಾರೆ. ಶ್ರೀಕೃಷ್ಣನು ವೀರವರ್ಮನನ್ನು ಕಾಲಿನಿಂದ ಒದೆಯುತ್ತಾನೆ. ಇದರಿಂದ ವೀರವರ್ಮ ಆನಂದಪಟ್ಟನು. ಕೃಷ್ಣ ಪಾದಸ್ಪರ್ಶವಾದಮೇಲೆ ತಾನು

ಸತ್ತರೂ ಚಿಂತೆಯಿಲ್ಲವೆಂದನು. ಬಳಿಕ ಶ್ರೀಕೃಷ್ಣನು ಅವನನ್ನು ಅನುಗ್ರಹಿಸಿ ಪರಸ್ಪರರ ಒಡಂಬಡಿಕೆಯಾದ ಮೇಲೆ ಕುದುರೆ ಕುಂತಳನಗರಕ್ಕೆ ಬರುವುದು. ಅರ್ಜುನನಿಗೆ ಕುಂತಳನಗರದ ಅರಸು ಚಂದ್ರಹಾಸನ ಕಥೆಯನ್ನು ಆ ಸಮಯಕ್ಕೆ ಬಂದ ನಾರದರು ಹೇಳುವರು.

ಭಾಗವತ ಪರಂಪರೆಯಲ್ಲಿ ಚಂದ್ರಹಾಸನ ಕಥೆಗೆ ಮನ್ನಣೆಯ ಸ್ಥಾನವಿದೆ. ಭಾರತೀಯ ಕಥಾ ಸಾಹಿತ್ಯದ ಅದ್ಭುತ ರಮ್ಯ ಕಥೆಗಳಲ್ಲಿಯೂ ಚಂದ್ರಹಾಸನ ಕಥೆ ವಿಶಿಷ್ಟವಾದುದು. ವೀರ, ಅದ್ಭುತ, ಕರುಣ, ಶೃಂಗಾರಗಳೇ ಮುಂತಾಗಿ ಎಲ್ಲ ರಸಪ್ರತಿಪಾದನೆಗೂ ಕವಿ ಇಲ್ಲಿ ಅವಕಾಶಮಾಡಿಕೊಂಡಿದ್ದಾನೆ. ಚಂದ್ರಹಾಸನ ಕಥೆ ಭಾರತೀಯ ಜನಮನದಲ್ಲಿ ಬೇರೂರಿರುವುದು ಮುಖ್ಯವಾಗಿ ಅದರ ಭಕ್ತಿ ಪ್ರತಿಪಾದನೆಯ ಮಹತ್ವದಿಂದ. ಇನ್ನುಳಿದ ರಸಗಳೆಲ್ಲಾ ಇಲ್ಲಿ ಆನುಷಂಗಿಕವಾಗಿವೆ. 'ದೈವ ಭಕ್ತನಿಗೆ ಎಂದೂ ಕಷ್ಟವಿಲ್ಲ' ಎಂಬ ತತ್ತ್ವವನ್ನೇ ಎತ್ತಿ ಹಿಡಿಯುವ ಈ ಕಥೆಯ ನಾಯಕನಾದ ಚಂದ್ರಹಾಸ, ಹುಟ್ಟಿನಿಂದಲೇ ಪರಮ ವಿಷ್ಣುಭಕ್ತ. ಪ್ರಸಿದ್ಧ ಬಾಲಭಕ್ತರಾದ ಪ್ರಹ್ಲಾದ, ಧ್ರುವರ ಸಾಲಿಗೆ ಸೇರುವವನು. "ಸುರಥ-ಸುಧನ್ವರ ವೀರಭಕ್ತಿ, ಬಭ್ರುವಾಹನನ ಜೀವನದ ದುರ್ವಿಲಾಸ, ತಾಮ್ರಧ್ವಜನ ಉಗ್ರಭಕ್ತಿ, ಲವಕುಶರ ಸ್ವಾಭಾವಿಕ ಧೀರತೆ ಇವೆಲ್ಲವೂ ಒಂದೊಂದು ಎಳೆಯಿಂದ ನಮ್ಮ ಮನವನ್ನು ಸೆಳೆದರೆ ಚಂದ್ರಹಾಸನ ಜೀವನವು ನಮ್ಮನ್ನು ಹತ್ತು ಎಳೆಗಳಿಂದ ಸೆಳೆಯುತ್ತದೆ. ಚಂದ್ರಹಾಸನ ಜೀವನಕ್ಕಿಂತ ಅದ್ಭುತರಮ್ಯ ಕಥೆಯಿಲ್ಲ, ಪ್ರಣಯ ಕಥಾನಕವಿಲ್ಲ, ರೌದ್ರ ಕಾರುಣ್ಯದ ಬೇರೆ ನಿರೂಪಣೆಯಿಲ್ಲ. ಹೀಗಾಗಿ ಎಲ್ಲ ರುಚಿಗಳಿಗೂ ತೃಪ್ತಿ ಕೊಡುವ ಸಾಮರ್ಥ್ಯವು ಕಥೆಯಲ್ಲಿದೆ"[2]

ಕೇರಳ ದೇಶದ ಅರಸನಿಗೆ ಮೂಲಾನಕ್ಷತ್ರವೆಂಬ ಅನಿಷ್ಟ ನಕ್ಷತ್ರದಲ್ಲಿ ಒಬ್ಬ ಮಗ ಹುಟ್ಟಿದ. ಕೆಲವೇ ದಿನಗಳಲ್ಲಿ ಶತ್ರುರಾಜರು ಮುತ್ತಿ ರಾಜನನ್ನು ಕೊಂದರು. ರಾಣಿ ಅಗ್ನಿಪ್ರವೇಶಮಾಡಿದಳು. ಸರ್ವ ರಾಜ್ಯವೂ ಶತ್ರುವಶವಾಗುವುದು. ದಾದಿಯೊಬ್ಬಳು ರಾಜಕುಮಾರನನ್ನು ಅಡಗಿಸಿಟ್ಟುಕೊಂಡು ಕುಂತಳ ನಗರವನ್ನು ಸೇರುವಳು. ಕೆಲ ದಿನಗಳಲ್ಲಿ ಈ ದಾದಿಯೂ ಸತ್ತು ಹೋಗಲು ಮಗು ಅನಾಥವಾಯಿತು. ಸುಂದರವಾದ ಈ ಮುಗ್ಧ ಶಿಶುವನ್ನು ಪಟ್ಟಣದ ಜನರೆಲ್ಲ ಮುದ್ದಿಸಿ ಬೆಳೆಸಿದರು. ಆಡುವ ಎಳೆಮಕ್ಕಳೊಡನೆ ಆಡುತ್ತಾ ಪರಪುಟ್ಟನಾಗಿ ಈ ಮಗು ಬೆಳೆಯುತ್ತಿರುತ್ತದೆ. ಒಮ್ಮೆ ಸಾಲಿಗ್ರಾಮ

ಶಿಲೆಯೊಂದು ಈ ಮಗುವಿಗೆ ಸಿಕ್ಕಿತು. ಅದನ್ನಿಡಲು ಮನೆಯಿಲ್ಲವಾಗಿ ಯಾವಾಗಲೂ ಬಾಯೊಳಗಡೆ ಇಟ್ಟುಕೊಂಡು ಮಗು ಆಟಪಾಠಗಳಲ್ಲಿ ಮಗ್ನ ವಾಗಿರುತ್ತಿದ್ದ.

ಕುಂತಳ ನಗರದ ಅರಸನಿಗೆ ಮಕ್ಕಳಿರಲಿಲ್ಲ. ಮಂತ್ರಿಯಾದ ದುಷ್ಟಬುದ್ಧಿ ಹೆಸರಿಗೆ ತಕ್ಕಂತೆ ಶೋಭಿಸುತ್ತಿದ್ದವನು. ಒಮ್ಮೆ ಆತನ ಮನೆಯಲ್ಲಿ ಬ್ರಾಹ್ಮಣ ಸಂತರ್ಪಣೆ ನಡೆಯುತ್ತಿದ್ದಾಗ ಈ ಮಗು ಅಲ್ಲಿಗೆ ಹೋಯಿತು. ರಾಜ ಲಕ್ಷಣ ಗಳಿಂದ ಕೂಡಿದ್ದ ಮಗುವನ್ನು ವಿಪ್ರರು ನೋಡಿದರು. ಈ ದೇಶಕ್ಕೆ ಮುಂದೆ ಈತನು ಅರಸನಾಗುವನೆಂದು ಭವಿಷ್ಯ ಹೇಳಿದರು. ಮಗುವನ್ನು ರಕ್ಷಿಸಲು ಮಂತ್ರಿಯನ್ನು ಕೇಳಿಕೊಂಡರು. ದುಷ್ಟಬುದ್ಧಿಗಾದರೋ ಕರುಳಿನಲ್ಲಿ ಮುಳ್ಳು ಚುಚ್ಚಿದಂತಾಯಿತು. ಮಕ್ಕಳಿಲ್ಲದ ಅರಸನ ಸಿಂಹಾಸನವನ್ನು ಯಾವಾಗ ಹಾರಿಸಲೆಂದು ಹಂಚಿಕೆ ಹಾಕುತ್ತಿದ್ದ ಅವನಿಗೆ ಈ ಅನಾಥ ಶಿಶು ಕಾಲ್ತೊಡರಿ ನಂತೆ ಕಂಡಿರಬೇಕು. ಬಹಿರಂಗದಲ್ಲಿ ವಿಪ್ರರ ಮಾತನ್ನು ಒಪ್ಪಿದಂತೆ ನಟಿಸಿ ಅಂತರಂಗದಲ್ಲಿ ಈ ಶಿಶುವನ್ನು ನಿವಾರಿಸುವ ಹಂಚಿಕೆಯನ್ನು ಯೋಚಿಸಿದನು. ಅವನ ಧೂರ್ತ ವಿನಯವನ್ನು ಕವಿ ಸೊಗಸಾದ ಉಪಮೆಯೊಂದರ ಮೂಲಕ ವಿವರಿಸಿದ್ದಾನೆ :

> ಕ್ರೂರನಕ್ರಾಕುಲದೊಳಿಡಿದಿರ್ದ ಪೆರ್ಮಡು ಗ
> ಭೀರ ನಿರ್ಮಲ ಜಲದೊಳೆಸೆವಂತೆ ಮನದೊಳ್ ಕ
> ಠೋರತರ ಭಾವಮಂ ತಳೆದು ಬಹಿರಂಗದೊಳ್ ವಿನಯಮುಳ್ಳಾತನಾಗಿ
> ಚಾರುಲಕ್ಷಣದ ಶಿಶುವಂ ನೋಡಿ ಧರೆಯ ವೃಂ
> ದಾರಕರ ನುಡಿಗೊಪ್ಪಿದವೊಲಿರ್ದು ಬಳಿಕ ಸ
> ತ್ಕಾರದಿಂದಾ ವಿಪ್ರರಂ ಕಳುಹಿದಂ ದುಷ್ಟಬುದ್ಧಿ ನಿಜಭವನದಿಂದ

ಚಾಂಡಾಲರನ್ನು ಕರೆಸಿ ಮಗುವನ್ನು ಕೊಂದು ಹಾಕಿ ಬರಲು ಕಾಡಿಗೆ ಕಳುಹಿಸಿಕೊಡುತ್ತಾನೆ. ಕೊಂದು ಕುರುಹನ್ನು ತಂದು ತೋರಿಸಬೇಕೆಂದು ಅಪ್ಪಣೆಮಾಡುವನು. ಚಾಂಡಾಲರು ಮಗುವನ್ನು ಎಳೆದೊಯ್ಯುವರು. ಕಾಗೆಗಳ ಧಾಳಿಗೆ ಸಿಕ್ಕ ಕೋಗಿಲೆಯ ಮರಿಯಂತೆ ಮಗು ಚಡಪಡಿಸುತ್ತಿತ್ತು. ಬಾಯಿಯಲ್ಲಿ ಸಾಲಿಗ್ರಾಮ ಶಿಲೆಯಿತ್ತು. ಕೃಷ್ಣನಾಮವನ್ನು ಎಡೆಬಿಡದೆ ಜಪಿಸುತ್ತಿತ್ತು. ಕಟುಕರಿಗೂ ಈ ಭಕ್ತ ಶಿಶುವಿನ ಸ್ಥಿತಿ ಕನಿಕರ ತರಿಸಿತು. ಮಗುವನ್ನು ಕೊಲ್ಲದೆ ಕೇವಲ ಅದರ ಕಾಲಿನ ಆರನೆಯ ಬೆರಳೊಂದನ್ನು ಕತ್ತರಿಸಿಕೊಂಡು ಹೋಗಿ ದುಷ್ಟಬುದ್ಧಿಗೆ ತೋರಿಸಿ ಕೊಂದೆವೆಂದು ಸುಳ್ಳು

ಹೇಳಿದರು. ಘೋರವಾದ ಅಡವಿಯಲ್ಲಿ ಮಗು ಒದರುತ್ತಿತ್ತು. ಕಾಲಿನಿಂದ ರಕ್ತ ಧಾರೆಯಾಗಿ ಸುರಿದು ಹೋಗುತ್ತಿರುವಾಗ ಅಡವಿಯ ಪಶುಪಕ್ಷಿಗಳೆಲ್ಲಾ ಅವನನ್ನು ಉಪಚರಿಸಿದವಂತೆ. ಈ ಅದ್ಭುತರಮ್ಯ ದೃಶ್ಯ ವರ್ಣನೆಯನ್ನು ಕವಿಯ ಮಾತಿನಲ್ಲಿಯೇ ಕೇಳಬೇಕು :

ಗರಿಗೆದರಿ ಕೊಡೆವಿಡಿದು ನಿಂದುವು ಬಿಸಿಲ್ಗೆ ನವಿ
ಲಿರಕೆಯಂ ಬೀಸಿ ಬಿಜ್ಜಣವಿಕ್ಕಿತಂಚೆ ತುಂ
ತುರನುದಿರ್ಚಿತು ಸಾರಸಂ ಸಲಿಲದೊಳ್ನೆನೆದ ಪಕ್ಕಂಗಳಂ ಬಿದಿರ್ಚಿ
ಮರುಗಿ ಮೆಲ್ನುಡಿಯೊಳುಪಚರಿಸಿದುವು ಗಿಳಿಗಳ
ಕ್ಕರೊಳಳಿಗಳರ್ಭಕನ ರೋದನದ ಕೂಡಳುವ
ತೆರದೊಳ್ಮೊರೆದುವಲ್ಲಿ ಕರುಬರಿದ್ದೂರಿಂದ ಕಾಡೊಳ್ಳಿತೆನಿಸುವಂತೆ

ಇಡೀ ಚಿತ್ರಕ್ಕೆ ಕಳಸವಿಟ್ಟಂತೆ ಮೇಲಿನ ಪದ್ಯದಲ್ಲಿ ಕೊನೆಯ ಸಾಲು ಬರುತ್ತದೆ. ವಾಸ್ತವ ಲೋಕದಲ್ಲಿರುವ ನಮಗೂ ಸಹ ಮನುಷ್ಯನ ಕ್ರೌರ್ಯ ವನ್ನು ನೆನಸಿಕೊಂಡಾಗ ಪಶುಪಕ್ಷಿಗಳೇ ಎಷ್ಟೋ ಮೇಲು ಎಂದು ಒಮ್ಮೊಮ್ಮೆ ಅನಿಸುವುದುಂಟು. ಅಷ್ಟರಲ್ಲಿ ಬೇಡಪಡೆಯೊಂದು ಮನವನ್ನು ಮುತ್ತುವುದು. ಅವರ ನಾಯಕನಾದ ಕುಳಿಂದನೆಂಬ ಅರಸು ಮಗುವನ್ನು ನೋಡಿದ. ಮಕ್ಕಳಿಲ್ಲದ ಅವನಿಗೆ ಅತ್ಯಾನಂದವಾಯಿತು. ಒಯ್ದು ಹೆಂಡತಿಗೆ ಕೊಟ್ಟ. ಚಂದ್ರಹಾಸನೆಂದು ನಾಮಕರಣವಾಗಿ ಮಗು ಕುಳಿಂದನ ಅರಮನೆಯಲ್ಲಿ ವರ್ಧಿಸಿತು. ದಂಪತಿಗಳ ಹರ್ಷಕ್ಕೆ ಎಣೆಯಿರಲಿಲ್ಲ :

ಕತ್ತಲೆಯ ಮನೆಗೆ ಮಣಿದೀಪಮಾದಂತೆ ಸಲೆ
ಬತ್ತಿದ ಸರೋವರಕೆ ನವಜಲಮೊದವಿದಂತೆ
ಬಿತ್ತರದ ಕಾವ್ಯರಚನೆಗೆ ದೇವತಾಸ್ತುತಿ ನೆಗಳ್ದಂತೆ ಭೂತಳದೊಳು
ಮತ್ತೆ ಸಂತಾನಮಿಲ್ಲದ ಕುಳಿಂದನ ಬಾಳ್ಕೆ
ಗುತ್ತಮ ಕುಮಾರನಾದಂ ಚಂದ್ರಹಾಸನೆನ
ಲುತ್ತರೋತ್ತರಮಪ್ಪುದಚ್ಚರಿಯೆ ಸುರಪುರದ ಲಕ್ಷ್ಮೀವರನ ಶರಣರ್ಗೆ

ಚಿಕ್ಕ ವಯಸ್ಸಿನಿಂದಲೂ ಪರಮ ಭಾಗವತ ಶಿರೋಮಣಿಯಂತೆ ಬೆಳೆಯುವ ಚಂದ್ರಹಾಸನು ಹದಿನಾರನೆಯ ವಯಸ್ಸಿಗೆ ಕಾಲಿಟ್ಟನು. ದುಷ್ಟ ಬುದ್ಧಿಯು ಮಂತ್ರಿಯಾಗಿದ್ದ ಅರಸನಿಗೆ ಚಂದ್ರಹಾಸನ ಸಾಕುತಂದೆ ಕುಳಿಂದನು ಸಾಮಂತ. ಮಗನ ಕೈಯಲ್ಲಿ ಮಂತ್ರಿಗೆ ಕಪ್ಪ ಕಾಣಿಕೆಗಳನ್ನು ಕಳಿಸುವನು. ಚಂದ್ರಹಾಸನೊಡನೆ ಬಂದಿದ್ದ ಇತರರಿಂದ ಕುಳಿಂದನ ಹೊಸ ಸಾಕುಮಗನ

ವಿವರವನ್ನು ದುಷ್ಟಬುದ್ಧಿ ಸಂಗ್ರಹಿಸುವನು. ಸಂದೇಹ ಹುಟ್ಟುವುದು. ತಾನೇ ಸ್ವತಃ ಕುಳಿಂದನ ಊರಾದ ಚಂದ್ರಾವತಿಗೆ ಹೋಗುವನು. ಅಲ್ಲೆಲ್ಲ ಸಾಕಷ್ಟು ಸಮೃದ್ಧಿ ಇರುತ್ತದೆ. ಚಂದ್ರಹಾಸನು ಬೇರಾರೂ ಆಗಿರದೆ ತಾನು ಕೊಲ್ಲಲೆಳಸಿದ ಮಗುವೇ ಎಂಬುದು ಆತನಿಗೆ ಗೊತ್ತಾಗುವುದು. ಈ ಸಾರಿ ಮತ್ತೊಂದು ಉಪಾಯವನ್ನು ಆಲೋಚಿಸುತ್ತಾನೆ. ಚಂದ್ರಹಾಸನ ಕೈಯಲ್ಲಿ ತನ್ನ ಮಗನಿಗೆ ಪತ್ರವೊಂದನ್ನು ಕಳಿಸುತ್ತಾನೆ. 'ಈ ಪತ್ರವನ್ನು ತಂದವನನ್ನು ವಿಷವೂಡಿಸಿ ಕೊಲ್ಲು' ಎಂಬ ಒಕ್ಕಣೆ ಆ ಪತ್ರದಲ್ಲಿರುತ್ತದೆ. ಚಂದ್ರಹಾಸನು ಪತ್ರದೊಡನೆ ಕುಂತಳನಗರದತ್ತ ಪಯಣಿಸಿದನು. ನಗರ ಸಮೀಪಿಸಿದಾಗ ಅದರ ಉಪವನದಲ್ಲಿ ವಿಶ್ರಮಿಸಿಕೊಳ್ಳಲು ಕುದುರೆಯನ್ನು ನಿಲ್ಲಿಸಿ ಮಲಗಿಬಿಟ್ಟನು. ದುಷ್ಟಬುದ್ಧಿಯ ಮುದ್ದುಕುವರಿಯಾದ ವಿಷಯೆ, ತನ್ನ ಗೆಳತಿಯರೊಡನೆ ಅಲ್ಲಿಗೆ ಬಂದು ರೂಪವಂತನಾದ ಚಂದ್ರಹಾಸನನ್ನು ಕದ್ದು ನೋಡಿದಳು. ಅವನು ತಂದಿರುವ ಪತ್ರವನ್ನು ಕದ್ದು ಓದಿದಳು. ಅವನ ರೂಪದಿಂದ ಆಕರ್ಷಿತಳಾಗಿ ಅವನು ತಂದಿರುವ ಪತ್ರದಲ್ಲಿ ಮರೆತು ಒಕ್ಕಣೆ ತಪ್ಪಾಗಿರಬಹುದೆಂದು ತಿದ್ದಿಬಿಟ್ಟಳು. 'ವಿಷವ ಮೋಹಿಸುವಂತೆ ಕೊಡುವುದೀತಂಗೆ' ಎಂಬ ಮಾತಿನಲ್ಲಿ ಒಂದು ಅಕ್ಷರವನ್ನು ತಿದ್ದಿದಳು 'ವ' ಎಂಬ ಅಕ್ಷರದ ಸ್ಥಾನದಲ್ಲಿ 'ಯೆ' ಬಂದಿತು. ತಂದೆಯ ಮಾತನ್ನು ಮಗ ಪಾಲಿಸಿದನು. ವಿಷಯೆಯೊಡನೆ ಚಂದ್ರಹಾಸನ ಮದುವೆ ಅದ್ಧೂರಿಯಿಂದ ನಡೆದೇ ಹೋಯಿತು.

ಕುಂತಳ ನಗರಕ್ಕೆ ಬಂದ ದುಷ್ಟಬುದ್ಧಿಗೆ ಆಗಿರುವ ಅನಾಹುತ ಗೊತ್ತಾಗಿ ತಲೆಚಚ್ಚಿಕೊಂಡ. ಆದರೂ ಅವನಿಗೆ ಸುಬುದ್ಧಿ ಬರಲಿಲ್ಲ. ಕೊನೆಯ ಉಪಾಯವನ್ನು ಹೂಡಿದ. ಮನೆಯ ಅಳಿಯನು ಊರ ಹೊರಗಿನ ಕಾಳಿಕಾದೇವಿಯನ್ನು ಕತ್ತಲೆಯಾದ ಮೇಲೆ ಹೋಗಿ ಅರ್ಚಿಸಿ ಬರಬೇಕೆಂಬ ಪದ್ಧತಿಯ ನೆಪ ಹೇಳಿ ಚಂದ್ರಹಾಸನನ್ನು ಕಳಿಸಿದ. ಅಲ್ಲಿ ಚಂಡಾಲರು ಅವನನ್ನು ಕೊಲ್ಲಲು ದುಷ್ಟಬುದ್ಧಿಯಿಂದ ಪ್ರೇರಿತರಾಗಿ ಕುಳಿತಿದ್ದರು. ಭಗವಂತನು ಚಂದ್ರಹಾಸನ ಬೆನ್ನ ಹಿಂದಿದ್ದ. ಆದುದರಿಂದಲೇ ಈ ಕುತ್ತ ದಿಂದಲೂ ಆತ ಪಾರಾದ. ಜ್ಯೋತಿಷಿಗಳಿಂದ ತನ್ನ ಏಕಮಾತ್ರ ಪುತ್ರಿಗೆ ತಕ್ಕ ವರ ಚಂದ್ರಹಾಸನೇ ಎಂದು ಕೇಳಿದ ರಾಜ ಅವನನ್ನು ಕೂಡಲೇ ಕರೆತರಲು ಮಂತ್ರಿಯ ಮಗನನ್ನು ಕಳಿಸಿದ. ತನ್ನ ಮೈದುನನಿಗೆ ಕಾಳಿಕಾ

ಮಂದಿರದ ದಾರಿಯಲ್ಲಿಯೇ ಸುದ್ದಿ ತಿಳಿಸಿ ಅವನ ಪರವಾಗಿ ಪೂಜೆಗೆ ತಾನು ಹೋದ. ರಾಜನ ಮನೆಯು ಸಂಭ್ರಮದಿಂದ ಚಂದ್ರಹಾಸನು ರಾಜಕುಮಾರಿಯ ಕೈಹಿಡಿದ ವಾರ್ತೆ ತಿಳಿದು ದುಷ್ಟಬುದ್ಧಿ ಕಾಳಿಕಾದೇವಾಲಯದತ್ತ ಧಾವಿಸಿದರೆ ಎಲ್ಲ ಕೆಲಸವೂ ಮುಗಿದು ಹೋಗಿತ್ತು. ಮಗನ ಮರಣದಿಂದ ಹುಚ್ಚ ನಂತಾಗಿ ತನ್ನ ತಲೆಯನ್ನು ಕತ್ತರಿಸಿಕೊಂಡುಬಿಟ್ಟ. ಮುಂದೆ ಚಂದ್ರಹಾಸನು ದೇವಿಯನ್ನು ಒಲಿಸಿ ಅವರಿಬ್ಬರನ್ನೂ ಬದುಕಿಸಿದನು. ಪ್ರತ್ಯಕ್ಷಳಾದ ಪಾರ್ವತಿ ಭಾಗವತ ಶಿರೋಮಣಿ ಚಂದ್ರಹಾಸನನ್ನು ಹರಸಿ ಹೀಗೆ ಹೇಳಿದಳು :

ಜಗದೊಳಾರಚ್ಯುತ ಪ್ರೀತಿಯಂ ಮಾಡುವರ್
ಮಗನೆ ತನಗಿಷ್ಟರವರಾ ಬಾಲ್ಯದಿಂದ ನೀ
ನಗಧರಧ್ಯಾನಪರನಾಗಿರ್ಪೆ ನಿನ್ನ ಚರಿತವನೋದಿ ಕೇಳ್ವವರ್ಗೆ
ಮಿಗೆ ವರ್ಧಿಪುದು ಮುಕುಂದಾಭಿರತಿ ಮುಂದೆ ಕಲಿ
ಯುಗದೊಳೆನ್ನಾಜ್ಞೆಯಿದು ಹರಿಭಕ್ತಿ ನಿನಗೆ ಬೆಳ
ವಿಗೆಯಾಗದಿರ್ದಪುದೆ ನಿನ್ನ ವಾಂಛಿತಕೆ ಕಡೆಯಿಲ್ಲ ಕೊಟ್ಟಪೆನೆಂದಳು

ಹರಿಭಕ್ತಿಯ ಮಹತ್ವವನ್ನು ಎತ್ತಿಹಿಡಿಯುವುದೇ ಕವಿಯ ಉದ್ದೇಶ ವಾಗಿದೆ. ನೀತಿ ಪ್ರತಿಪಾದನೆಯಂತೂ ಒಡೆದುಕಾಣುತ್ತಿದೆ. ಹೀಗಿದ್ದೂ ಈ ಕಥೆ ನೀರಸವಾಗದೆ ಭಾರತೀಯ ಸಾಹಿತ್ಯದಲ್ಲಿ ಒಂದು ಅಪರೂಪದ ಕಥಾನ ಕವಾಗಿ ಪರಿಣಮಿಸಿರುವುದು ಆಶ್ಚರ್ಯದ ಸಂಗತಿ. ದೈವಭಕ್ತರಲ್ಲದವರೂ ಕೇವಲ ಕಥೆಯ ಸಲುವಾಗಿ ಓದಿದರೂ ಇಲ್ಲಿರುವ ಅದ್ಭುತ ರಮ್ಯತೆಗೆ ಬೆರಗಾ ಗದೇ ಇರರು. ಇಂಥ ಕಥೆಯನ್ನು ಚೊಕ್ಕವಾಗಿ ಕನ್ನಡಕ್ಕೆ ತಂದಿರುವ ಲಕ್ಷ್ಮೀಶನು ಸುಲಭವಾಗಿ ಜನಮನದಿಂದ ಮರೆಯಾಗುತ್ತಾನೆಯೇ ? ಕೇವಲ ಸೀತಾವನವಾಸ ಮತ್ತು ಚಂದ್ರಹಾಸ ಕಥೆಗಳು ಎರಡೇ ಸಾಕು, ಆತನ ಪ್ರಥಮ ತರಗತಿಯ ಕಥನ ಕೌಶಲವನ್ನು ತೋರಿಸುತ್ತವೆ. ಸಂಸ್ಕೃತದಿಂದ ಕನ್ನಡಕ್ಕೆ ಮಹಾಕೃತಿಗಳನ್ನು ಅನುವಾದಿಸಿದವರೆಲ್ಲಾ ಶ್ರೇಷ್ಠ ಕವಿಗಳಾಗುವುದಿದ್ದರೆ ತೊರವೆ ನರಹರಿಯೂ ಮಹಾಕವಿಯಾಗಿ ಮೆರೆಯಬಹುದಿತ್ತು. ಜೈಮಿನಿಯ ಅನುವಾದವೆಂದು ಕನ್ನಡ ಜೈಮಿನಿ ಭಾರತವನ್ನು ಎತ್ತಿ ಆಡುವ ವಿದ್ವಾಂಸರು ತೊರವೆ ನರಹರಿಯನ್ನು ಓದಿರಲೇಬೇಕು. ವಾಲ್ಮೀಕಿ ಮಹಾಕವಿಯ ಮಹತ್ತಿನ ನೂರರಲ್ಲಿ ಒಂದು ಪಾಲನ್ನೂ ನರಹರಿ ಏಕೆ ದಕ್ಕಿಸಿಕೊಳ್ಳಲಿಲ್ಲ ? ಎಂಬುದಕ್ಕೆ ಅವರು ಉತ್ತರ ಹೇಳಬೇಕು. ಕಥನ ಕಲೆಯ ದೃಷ್ಟಿಯಿಂದ

ಮೂಲಕೃತಿಯನ್ನು ಕನ್ನಡ ಜೈಮಿನಿಭಾರತ ಮರೆಸುತ್ತದೆ ಎಂದರೆ ಅದು ಸ್ವತಂತ್ರಕೃತಿಯೇ ಎಂದರೂ ತಪ್ಪಲ್ಲ.

ಧರ್ಮರಾಜನ ಯಾಗದ ಕುದುರೆಯು ಕುಂತಳ ನಗರಕ್ಕೆ ಬಂದಾಗ ಚಂದ್ರಹಾಸನು ವೃದ್ಧನಾಗಿರುತ್ತಾನೆ. ಆತನ ಮಕ್ಕಳು ಕುದುರೆಯನ್ನು ಕಟ್ಟಿ ಹಾಕಿ ಯುದ್ಧಕ್ಕೆ ತವಕಿಸಿದಾಗ ಚಂದ್ರಹಾಸನೇ ಅವರನ್ನು ತಡೆಯುವನು. ಬಾಲ್ಯದಿಂದಲೂ ತಾನು ಕೃಷ್ಣಭಕ್ತನಾಗಿದ್ದು ಈಗ ಶ್ರೀಕೃಷ್ಣನೇ ತನ್ನ ಮನೆಯ ಬಾಗಿಲಿಗೆ ಬಂದಾಗ ಯುದ್ಧ ಮಾಡುವುದು ಸರಿಯಲ್ಲವೆಂದು ಹೇಳಿ ಅರ್ಜುನನೊಂದಿಗೆ ಸಂಧಾನಮಾಡಿಕೊಳ್ಳುವನು. ಶ್ರೀಕೃಷ್ಣನನ್ನು ಚಂದ್ರಹಾಸನು ಭಕ್ತಿಯಿಂದ ನಮಿಸಿ ಧರ್ಮರಾಯನ ಅಶ್ವಮೇಧಕ್ಕೆ ಬೆಂಬಲವಾಗಿ ನಿಲ್ಲುವನು. ಕುಂತಳ ನಗರದಿಂದ ಹೊರಟ ಕುದುರೆ ಸಮುದ್ರತೀರಕ್ಕೆ ಬರುತ್ತದೆ. ಅಲ್ಲಿ ಅರ್ಜುನಾದಿಗಳಿಗೆ ಬಕದಾಲ್ಭ್ಯನ ದರ್ಶನ ಸಿಗುವುದು. ಸತ್ಯಲೋಕವನ್ನು ಆಳಿದ ಇಪ್ಪತ್ತು ಬ್ರಹ್ಮರ ಕಾಲದಿಂದಲೂ ಸಾಕ್ಷಿಯಂತೆ ಇರುವ ಈ ಮಹಾಮುನಿಯಿಂದ ಅರ್ಜುನ ಮುಂತಾದವರು ನಾಲ್ಕು, ಎಂಟು, ಹದಿನಾರು, ಮುವತ್ತೆರಡು—ಹೀಗೆ ಇಮ್ಮಡಿಯಾಗುತ್ತಾ ಸಾವಿರ ಮುಖದ ಪರಮೇಷ್ಠಿಯವರೆಗಿನ ಕಥೆಯ ಅದ್ಭುತವನ್ನು ಕೇಳುತ್ತಾರೆ. ಸಾವಿರ ಮುಖದ ಪರಮೇಷ್ಠಿ ಅಹಂಕಾರ ರಹಿತನಾಗಿದ್ದರೆ, ಉಳಿದವರೆಲ್ಲಾ ತಮ್ಮ ಪ್ರಭುತ್ವ ಶಕ್ತಿಯ ಹೆಮ್ಮೆಯಿಂದ ಬೀಗುತ್ತಿದ್ದರಂತೆ. ಸಹಸ್ರ ಮುಖದವನನ್ನು ಕಂಡ ಮೇಲೆ ಅವರೆಲ್ಲರ ಅಹಂಕಾರವು ನೀರಗುಳ್ಳೆಯಂತೆ ಒಡೆದುಹೋಗುತ್ತದೆ. ಆತನೇ ಈಗ ಶ್ರೀಕೃಷ್ಣನಾಗಿ ಅವತರಿಸಿರುವನು ಎಂದು ಭಗದಾಲ್ಭ್ಯನು ಹೇಳಿದನು. ಈ ಕಥೆ ಭವ್ಯವಾದ ಒಂದು ರೂಪಕದಂತಿದೆ. ಸಹಸ್ರಾರು ಬ್ರಹ್ಮಾಂಡಗಳ ಯಾವುದೋ ಒಂದು ಕಿರಿಮನೆಯಲ್ಲಿರುವ ಮಾನವನ ಅಹಂಕಾರವು, ಈ ಕಥೆಯನ್ನು ಓದಿದರೆ ನುಚ್ಚುನೂರಾಗುತ್ತದೆ. ಧರ್ಮರಾಜನ ಅಶ್ವಮೇಧಕ್ಕೆ ಭಗದಾಲ್ಭ್ಯನನ್ನು ಶ್ರೀಕೃಷ್ಣನೇ ಕರೆತರುವನು. ಅಲ್ಲಿಂದ ಹೊರಟ ಯಾಗಾಶ್ವವು ಸಿಂಧೂದೇಶವನ್ನು ತಲುಪುವುದು. ದುರ್ಯೋಧನನ ತಂಗಿಯಾದ ದುಶ್ಶಳೆಯನ್ನು ಅರ್ಜುನ ಕೃಷ್ಣರು ಪ್ರೀತಿಯಿಂದ ಕಂಡು ಅವಳನ್ನು ಪುತ್ರಸಹಿತ ಯಾಗಕ್ಕೆ ಕರೆತರುವರು.

ಒಂದು ವರ್ಷ ಮುಗಿದುಹೋಗಿದ್ದುದ್ದರಿಂದ ಅಶ್ವವು ಮರಳಿ ಧರ್ಮರಾಜನಿದ್ದಲ್ಲಿಗೆ ಬರುವುದು. ಶ್ರೀಕೃಷ್ಣನ ಮಾರ್ಗ ದರ್ಶನದಲ್ಲಿ ಧರ್ಮರಾಯನು

ಯಜಮಾನನಾಗಿ ಭಗದಾಲಭ್ಯ, ವೇದವ್ಯಾಸ, ವಾಮದೇವ, ವಸಿಷ್ಠ ಮುಂತಾದ ಮಹಾಮುನಿಗಳ ಹಿರಿತನದಲ್ಲಿ ಯಾಗವು ಸಾಂಗವಾಗಿ ನೆರವೇರುವುದು. ದೇವತೆಗಳೆಲ್ಲಾ ತೃಪ್ತಿಪಡುವರು.

ಯಾಗದ ಕುದುರೆ ಹೋದ ಹೋದೆಡೆಯೆಲ್ಲಾ ಕೃಷ್ಣ ಭಕ್ತರಾದ ಮಹಾವೀರರು ಋಷಿಗಳು ಎಲ್ಲರೂ ಒಂದೇ ಪ್ರಶ್ನೆಯನ್ನು ಕೇಳುತ್ತಿದ್ದರು; ಮನೆಯಲ್ಲಿ ಕೃಷ್ಣನೇ ಇರುವಾಗ ಪ್ರತ್ಯೇಕ ಅಶ್ವಮೇಧ ಏಕೆ ? ಎಂದು. ಧರ್ಮರಾಯನೇನೋ ತನ್ನ ಮನಸ್ಸಿನ ಸಮಧಾನಕ್ಕೆ ಶ್ರೀಕೃಷ್ಣ ಕೃಪೆಯಿಂದಲೇ ಯಾಗ ಮಾಡಿದ. ಕೊನೆಗೆ ಯಾಗಫಲವನ್ನೂ ಶ್ರೀಕೃಷ್ಣನಿಗೆಯೇ ಸಮರ್ಪಿಸಿದ.

5

ಪ್ರಾಚೀನ ಕವಿಗಳು ರಸಪ್ರತಿಪಾದನೆಗೆ ಮಹತ್ವ ಕೊಡುತ್ತಿದ್ದರು. ಆದುದರಿಂದ ಹಳಗನ್ನಡ ಕಾವ್ಯಗಳನ್ನು ಪರಿಚಯಿಸುವಾಗ ಸಹಜವಾಗಿಯೇ ಈ ದೃಷ್ಟಿಯಿಂದಲೂ ನೋಡಬೇಕಾಗುತ್ತದೆ. ಜೈಮಿನಿ ಭಾರತದಲ್ಲಿ ಪ್ರಧಾನವಾಗಿ ವೀರ, ಕರುಣ, ಶೃಂಗಾರಗಳನ್ನು ಕಾಣಬಹುದು. ಭೀಮ–ಕೃಷ್ಣರ, ಸತ್ಯಭಾಮೆ–ದ್ರೌಪದಿ, ಕೃಷ್ಣ–ಸತ್ಯಭಾಮೆಯರ ಸಂವಾದ ಚಾತುರ್ಯದಲ್ಲಿ ಕವಿ ತನ್ನ ಹಾಸ್ಯಪರ ಮನೋಭಾವವನ್ನು ಪ್ರಕಟಿಸುತ್ತಾನೆ. ಆದರೆ ಇವು ಕಥಾರಚನೆಯಲ್ಲಿ ಹಾಸುಹೊಕ್ಕಾದ ಸಂಬಂಧವನ್ನು ಪಡೆಯದೆ ಬಿಡಿಯಾದ ಭಾಗಗಳಂತಿವೆ. ಕುಮಾರವ್ಯಾಸನ ಉತ್ತರ ಕುಮಾರನ ಪ್ರಸಂಗದಂತಹ ಸಹಜ ನಿರೂಪಣೆ ಇಲ್ಲಿ ಕಂಡುಬರುವುದಿಲ್ಲ. ಕುಮಾರವ್ಯಾಸನಲ್ಲಿ ಮಾತಿನ ಜಾಣ್ಮೆಯಿಂದ ಮಾತ್ರ ಹಾಸ್ಯಕ್ಕೆ ಅವಕಾಶವಾಗದೆ ಸನ್ನಿವೇಶ ಕಲ್ಪನೆ, ಪಾತ್ರ ರಚನೆ, ಸಂವಾದ ಎಲ್ಲವೂ ಹಾಸ್ಯಮಯವಾಗಿವೆ. ಲಕ್ಷ್ಮೀಶನ ಬಹುಪಾಲು ಹಾಸ್ಯಪರ ಸನ್ನಿವೇಶಗಳಲ್ಲಿ ಕೇವಲ ಮಾತಿನ ಜಾಣ್ಮೆಯಿದೆ.

ಅಶ್ವಮೇಧವೆಂದರೆ ಕಾಳಗ ಜೈಮಿನಿ ಭಾರತದ ತುಂಬ ಯುದ್ಧಗಳೇನೋ ಸಾಕಷ್ಟಿವೆ. ಸಹಜವಾದ ಯುದ್ಧವರ್ಣನೆಗಳನ್ನು ಕಾಣಬಹುದು. ಸುಧನ್ವ, ಸುರಥ, ತಾಮ್ರಧ್ವಜ, ಬಭ್ರುವಾಹನನಂತಹ ಮಹಾವೀರರ ಪರಾಕ್ರಮ ವರ್ಣನೆಗಳಲ್ಲಿ ಆತನ ಹುಮ್ಮಸ್ಸು ಮುಗಿಲು ಮುಟ್ಟುತ್ತದೆ. ಯುದ್ಧದ ಅಬ್ಬರ, ಆರ್ಭಟ ಮತ್ತು ಕೋಲಾಹಲದ ಅಸ್ತವ್ಯಸ್ತ ಸ್ಥಿತಿಯನ್ನು ಚೆನ್ನಾಗಿ ಕಣ್ಣಮುಂದೆ ತರುವ ಕೆಲವು ಪದ್ಯಗಳನ್ನು ಇಲ್ಲಿ ಗಮನಿಸಬಹುದು :

ಮುಗ್ಗಿದರ್ ಮಸಗಿದಂಬುಧಿಯ ತೆರೆಯಂತೆ ಸಲೆ
ಮುಗ್ಗಿದರ್ ಮುಗಿಲ ಮೊಗ್ಗರದಂತೆ ಭೋಂಕರಿಸು
ತೊಗ್ಗಿದರ್ ಕವಿದು ಜೇನ್ಸೊಣದಂತೆ ಪೊಯ್ದಾಡಿ ರಿಪುಸೈನ್ಯಕಾನನವನು
ನೆಗ್ಗಿದರ್ ನೆಲಗೆಡಿಸಿ ಬಿರುಗಾಳಿಯಂತೈದೆ
ನುಗ್ಗಿದರ್ ನುಚ್ಚುನುರಿಯಾಗೆ ಬರ ಸಿಡಿಲಂತೆ
ಹಿಗ್ಗಿದರ್ ಪೆಚ್ಚಿ ವೀರಾವೇಶದಿಂದೆ ಪಟುಭಟರಾಗಳಾಹವದೊಳು

ಮೇಲಿನ ಪದ್ಯದಲ್ಲಿ ಬರುವ ಮಾಲೋಪಮೆಗಳು ಒಗ್ಗೂಡಿ ಸೈನಿಕರ ನುಗ್ಗಾಟ ಮತ್ತು ವೀರಾವೇಶಗಳನ್ನು ಒಂದು ಚಿತ್ರದಲ್ಲಿ ಕಣ್ಣಮುಂದೆ ತರುತ್ತವೆ. ಕೆಳಗಿನ ಪದ್ಯಭಾಗ ಹೋರಾಟದ ಮತ್ತೊಂದು ಮುಖ :

ತಲೆ ಬೀಳಲಟ್ಟೆಗಳು ಕಾದುವುವು ಮೇಣಟ್ಟೆ
ನೆಲಕುರುಳೆ ತಲೆಗಳೆದ್ದಾಡುವುವು ಕೈದುಗಳ
ನಿಲುಕುವುವು ಖಂಡಿಸಿದ ತೋಳ್ಗಳ್ ಉರೆಕಡಿದ ಕಾಲ್ಗಳ್ ಮುಂದಕಡಿಯಿಡುವುವು

ಈ ವರ್ಣನೆಯಂತೂ ರುದ್ರರಮ್ಯವಾಗಿದ್ದು ಓದಿದವರ ಮೈ ಬೆವರುವಂತಿದೆ. ವೀರನೊಬ್ಬನು ಯುದ್ಧದಲ್ಲಿ ಕೈಗಳೆರಡನ್ನೂ ಕತ್ತರಿಸಿದಾಗ ಕಾಲಿನಲ್ಲಿಯೇ ಮುಂದುವರೆದನಂತೆ. ಕಾಲುಗಳನ್ನೂ ಕತ್ತರಿಸಿದ ಮೇಲೆ ಉಳಿದ ಖಂಡ ದೇಹದಿಂದಲೇ ಎದುರಾಳಿಯನ್ನು ಘಾತಿಸಿದನಂತೆ. ಯುದ್ಧಭೂಮಿಯಲ್ಲಿ ಲಕ್ಷ್ಮೀಶನ ವೀರರ ಪರಸ್ಪರ ಮೂದಲೆಗಳು ಅದ್ವಿತೀಯವಾಗಿವೆ. ಬಭ್ರುವಾಹನ ಅರ್ಜುನರ ಮೂದಲೆಗಳಲ್ಲಿ ಕೆಲವನ್ನು ಈಗಾಗಲೇ ಉಲ್ಲೇಖಿಸಿರುವುದರಿಂದ, ಅನುಸಾಲ್ವನು ಕೃಷ್ಣನನ್ನು ಧಿಕ್ಕರಿಸಿ ಆಡಿದ ಮಾತುಗಳನ್ನು ಮಾತ್ರ ಕೇಳಬಹುದಾಗಿದೆ. ಕೃಷ್ಣನ ಪರಾಕ್ರಮ ಮಹಿಮಾತಿಶಯಗಳನ್ನೆಲ್ಲ ಎಷ್ಟು ಕುಗ್ಗಿಸಿ ಹೀನಾಯವಾಗಿ ಬೈಯುತ್ತಾನೆಂದರೆ ಅದನ್ನು ಕೇಳಿದ ಯಾವ ವೈರಿಯೂ ಸುಮ್ಮನಿರಲಾರ :

ಹೆಂಗುಸಂ ಕೊಂದದಟತನದಿಂದೆ ಬಂಡಿಯಂ
ಭಂಗಿಸಿದ ಬಲ್ಪಿಂದಲೆತ್ತು ಕತ್ತೆಯನಿರಿದ
ತುಂಗವಿಕ್ರಮದಿಂದೆ ಹಕ್ಕಿ ಹಾವಂ ಸವೆದ ಸಾಹಸದೆ ಬೆರೆತಿರ್ದೊಡೆ
ಸಂಗರದೊಳಾಳಹನೆ ಗೋಪನವನಂ ಯುದ್ಧ
ರಂಗದೊಳ್ ತೊಲಗಿಪುದೆನಗೆ ಪರಾಕ್ರಮವೆ ನಿ
ನ್ನಂಗವಣೆಯಾವುದೆಮ್ಮೊಡನೆ ಸೆಣಸಿದೆ ಯೆನುತೆ ತೆಗೆದೆಚ್ಚನನುಸಾಲ್ವನು

ಕನ್ನಡನಾಡಿನ ಯಕ್ಷಗಾನ ಪ್ರಸಂಗಗಳಲ್ಲಿ ಬರುವ ಬಹುಪಾಲು ಕಾಳಗದ ಕಥೆಗಳೆಲ್ಲ ಲಕ್ಷ್ಮೀಶನ ಜೈಮಿನಿಭಾರತದಿಂದ ಉಪಕೃತವಾಗಿದೆ. ಬಭ್ರುವಾಹನ ಕಾಳಗ, ಸುಧನ್ವನ ಕಾಳಗ, ತಾಮ್ರಧ್ವಜನ ಕಥೆ ಮುಂತಾದವು ಸಾಕಷ್ಟು ಪ್ರಸಿದ್ಧ ಯಕ್ಷಗಾನ ಪ್ರಸಂಗಗಳು. ಅರ್ಜುನನ ಪ್ರತಿಪಕ್ಷದ ವೀರರೆಲ್ಲಾ ಕೃಷ್ಣಭಕ್ತರು. ಆದುದರಿಂದ ಪಾತ್ರಗಳಲ್ಲಿ ಸಂಘರ್ಷವೇ ಕಂಡು ಬರುವುದಿಲ್ಲ. ಅಷ್ಟನ್ನು ಬಿಟ್ಟರೆ ಅವರ ಪರಾಕ್ರಮ ಶೌರ್ಯ ಸಾಹಸಗಳಿಗೆ ಕೊರತೆಯೇನೂ ಇಲ್ಲ.

ಸೀತಾವನವಾಸ ಮತ್ತು ಚಂದ್ರಹಾಸನ ಕಥೆಗಳು ಜೈಮಿನಿ ಭಾರತದ ಶ್ರೇಷ್ಠಭಾಗಗಳೆಂದು ಸಹೃದಯರೆಲ್ಲಾ ಒಪ್ಪಿದ್ದಾರೆ. ಅಲ್ಲಿ ಬರುವ ಕರುಣ ರಮ್ಯ ವರ್ಣನೆಗಳನ್ನು ಈಗಾಗಲೆ ಸವಿವರವಾಗಿ ಪರಿಚಯಿಸಿರುವುದರಿಂದ ಆತನ ಶೃಂಗಾರ ವರ್ಣನೆಗಳನ್ನು ಸ್ವಲ್ಪ ಗಮನಿಸಬಹುದಾಗಿದೆ. ಶೃಂಗಾರವು ಲೋಕಪ್ರಿಯರಸವೆಂಬ ಕಾರಣದಿಂದಲೋ ಅಥವಾ ತನ್ನ ಕಾಲಗಳ ಕಥೆ ನೀರಸವಾಗದಿರಲೆಂದೋ ಕವಿ ಉಚಿತಾನುಚಿತ ವಿವೇಕವಿಲ್ಲದೆ ಇಂಥ ವರ್ಣನೆಗಳನ್ನು ಮಾಡಿದ್ದಾನೆ; ಸನ್ನಿವೇಶಗಳನ್ನು ಕಲ್ಪಿಸಿಕೊಂಡಿದ್ದಾನೆ. ಹೆಣ್ಣಿನ ಅಂಗೋಪಾಂಗ ವರ್ಣನೆಯಲ್ಲಿ ಆತ ಸಿದ್ಧಹಸ್ತನೆಂದು, ರಸಿಕನ ಕಣ್ಣು ಆತನಿಗಿದೆಯೆಂದೂ ಒಪ್ಪಬಹುದು. ಆದರೆ ಹೆಣ್ಣು ಗಂಡಿನ ಪ್ರಣಯಕ್ಕೆ ಕಾಮದ ಚಪಲಕ್ಕೆ ಕೆಲವು ಸಾಮಾಜಿಕ ರೂಢಿನಿಯಮಗಳಿವೆ; ಕಟ್ಟುಕಟ್ಟಳೆಗಳಿವೆ. ಲಕ್ಷ್ಮೀಶನು ಹಲವು ಬಾರಿ ಇವೆಲ್ಲವನ್ನೂ ಗಾಳಿಗೆ ತೂರಿದ್ದಾನೆಂಬುದನ್ನು ಜೈಮಿನಿ ಭಾರತದಲ್ಲಿ ಕಾಣಬಹುದಾಗಿದೆ. ಸಂಸ್ಕೃತದ ಮೂಲಕ್ಕಿಂತ ಕನ್ನಡ ಜೈಮಿನಿ ಭಾರತದಲ್ಲಿ ಇಂಥ ಪ್ರಸಂಗಗಳನ್ನು ಹೆಚ್ಚು ವಿಸ್ತರಿಸಲಾಗಿದೆಯೆಂಬ ವಿದ್ವಾಂಸರ ಮಾತನ್ನು ಒಪ್ಪುವುದಾದರೆ ಇಲ್ಲಿ ಸಂಭವಿಸಿರುವ ಅನೌಚಿತ್ಯಕ್ಕೆ ಲಕ್ಷ್ಮೀಶನೇ ಹೊಣೆಗಾರನಾಗಬೇಕಾಗುತ್ತದೆ. ಸುಧನ್ವನು ಯುದ್ಧಕ್ಕೆ ಹೊರಟು ನಿಂತಾಗ ಅವನ ಪತ್ನಿ ಪ್ರಭಾವತಿ ಪ್ರಣಯಕಾತರೆಯಾಗಿ ಬರುತ್ತಾಳೆ. ಇದು ಉಚಿತ ಸಮಯವಲ್ಲವೆಂದ ಗಂಡನಿಗೆ ಪುತ್ರಸಂತಾನಾಪೇಕ್ಷೆಯ ನೆಪವನ್ನು ಮುಂದೊಡ್ಡುತ್ತಾಳೆ. ಹೆಣ್ಣು ಹೀಗೆ ತರುಬಿನಿಂತರೆ ಗಂಡು ನಿವಾರಿಸಿ ಹೋಗಲು ಸಾಧ್ಯವಿಲ್ಲ :

ಅಂಗಮಿಲ್ಲದನ ಸಮರಂಗಮಂ ಪುಗಲಂಜಿ
ತುಂಗವಿಕ್ರಮ ವಿಜಯಸಂಗರಕೆಳಸುವೆನೆಂ
ಬಂಗವಣೆಯೆಂತುಂಟೆಂದಂಗನೆ ಬಲಾತ್ಕಾರದಿಂ ಗುರುಕುಚದ್ವಯವನು

ಸಂಗಡಿಸುವಂತಾರ್ಪಿನಿಂ ಗಾಢತರದೊಳಾ
ಲಿಂಗನಂಗೈದು ಕುಡಿಗಂಗಳಿಂದವನ ಮೊಗ
ದಿಂಗಿತವನಾರೈವ ಶೃಂಗಾರಚೇಷ್ಟೆಯ ಬೆಡಂಗದನೇವೇಳ್ವೆನು

ಈ ಅಸಭ್ಯ ಪ್ರಸಂಗಕ್ಕೆ ಹತ್ತಾರು ಪದ್ಯಗಳನ್ನು ಮೀಸಲಿಟ್ಟು ಕವಿ ವರ್ಣಿಸುತ್ತಿರುವುದು ಅವನಿಗಿರುವ ಸುಲಭ ಜನರಂಜನೆಯ ಆಸಕ್ತಿಯನ್ನು ಎತ್ತಿ ತೋರಿಸುತ್ತದೆ. ಪ್ರಭಾವತಿಯಂತೆಯೇ ಅವನು ಕಲ್ಪಿಸಿಕೊಂಡಿರುವ ಮತ್ತೊಂದು ಲಜ್ಜೆಗೆಟ್ಟ ಹೆಣ್ಣೆಂದರೆ ಪ್ರಮೀಳೆ. ಅವಳು ಅರ್ಜುನನಿದಿರು ಯುದ್ಧರಂಗದಲ್ಲಿ ನಿಂತು ಸಮರಕ್ಕೆ ಆಹ್ವಾನಿಸುತ್ತಾಳೆ. ಆಗ ಅರ್ಜುನನು ಅಶ್ಲೀಲ ಅನೌಚಿತ್ಯಗಳ ಮೇರೆ ಮೀರಿ ಮಾತಾಡುವನು. ಅವನಿಗೆ ಉತ್ತರ ಕೊಡುವ ಪ್ರಮೀಳೆಯಂತೂ ಅದಕ್ಕೂ ಮಿಗಿಲಾಗಿ ಅಸಭ್ಯತೆಯನ್ನು ಪ್ರದರ್ಶಿಸುವಳು :

ನಾರಿಯೊಳ್ ಕಾಳಗವೆ ತನಗಕಟ ಕಡುಗಿ ಮದ
ನಾರಿಯೊಳ್ ಕಾದಿದುಗ್ಗಡದ ನಿಜಕಾರ್ಮುಕದ
ನಾರಿಯೊಳ್ ಕಣೆಯಂ ತುಡುವೆನೆಂತೊ ಶಿವಶಿವಾ ಪರ್ಯಂಕಮಂ ಸಾರ್ದೊಡೆ
ನೀರಜಶರಾಹವದೊಳೊದಗುವೊಡೆ ಕಡು ಚದುರೆ
ನೀ ರಣದೊಳಾಳ್ತನವನೆನ್ನೊಡನೆ ತೋರಿದೊಡೆ
ನೀರಸವೆನಿಸದೆ ಪೇಳೆಂದು ಕುಂತೀಸುತಂ ನುಡಿದೊಡವಳಿಂತೆಂದಳು

ಪರಿಯಂಕಮಂ ಸಾರ್ದೊಡಂಗಜಾಹವದೊಳಗ
ಪರಿಮಿತಸುಖಾವಹದ ಸುರತ ತಂತ್ರದ ಕಲೆಯ
ಪರಿವಿಡಿಗಳಂ ತೋರಿಸುವೆನೀಗಳೆನ್ನಂ ವರಿಸುವುದಲ್ಲದೊಡೆ ನಿನ್ನ
ತುರಗಮಂ ಬಿಡುವುದಿಲ್ಲದಟಿಂದೆ ಕಾದುವಾ
ತುರಮುಳ್ಳೊಡಿದಿರಾಗಿ ನೋಡು ಸಾಕೆನ್ನೊಳೆನು
ತುರವಣಿಸುತವಳೆಚ್ಚೊಡರ್ಜುನಂ ಸೈರಿಸುತ್ತೆಳನಗೆಯೊಳಿಂತೆಂದನು

ಇಂಥ ವರ್ಣನೆಗಳು ತೀರಾ ವಾಚ್ಯವಾಗಿದ್ದು ಶೃಂಗಾರದ ಪ್ರಸನ್ನವಾದ ಮೋಹಕ ಗುಣವನ್ನೇ ನಾಶಮಾಡಿಬಿಡುತ್ತವೆ, ಇಲ್ಲಿಯ ಪ್ರಣಯಿಗಳ ವಿನೋದಕ್ಕೂ ಯುದ್ಧವೀರರ ಕಾದಾಟಕ್ಕೂ ಮೂಲಭೂತವಾದ ವ್ಯತ್ಯಾಸ ವೇನೂ ಇಲ್ಲ. ಎರಡೂ ಒರಟುತನವನ್ನೇ ಆದರ್ಶವಾಗಿಟ್ಟುಕೊಂಡಿವೆ. ವೀರಕ್ಕೆ ಒರಟುತನ ಶೋಭೆ ತರುತ್ತದೆ. ಶೃಂಗಾರಕ್ಕೆ ಲಕ್ಷ್ಮೀಶನಂತಹವನಲ್ಲಿ ಮಾತ್ರ ಇದರಿಂದ ಶೋಭೆ ಬರಬೇಕು. ಹದಿನೆಂಟು ವರ್ಣನೆಗಳು ಮುಂತಾದ ಸಾಂಪ್ರದಾಯಿಕ ತೊಡಕುಗಳಿಂದ ಲಕ್ಷ್ಮೀಶ ಬಿಡಿಸಿಕೊಳ್ಳದಿದ್ದ ಕಾರಣವಾಗಿ

ಮತ್ತು ತನ್ನ ರಸಿಕತೆಯ ಧಾರಾಳತನವನ್ನು ಹೆಚ್ಚು ಪ್ರದರ್ಶಿಸುವ ಹವ್ಯಾಸಕ್ಕೆ ಸಿಕ್ಕುಬಿದ್ದು ಜೈಮಿನಿ ಭಾರತದಲ್ಲಿ ಹಲವು ವೇಶ್ಯಾವಾಟಿಕೆಗಳ ವರ್ಣನೆಗಳು ಬರುತ್ತವೆ. ತಾಮ್ರಧ್ವಜನಿಂದ ಒದೆಸಿಕೊಂಡು ಮೂರ್ಛೆಬಿದ್ದ ಕೃಷ್ಣಾರ್ಜುನರು ಎಚ್ಚೆತ್ತಾಗ ಸಮರ ಮುಗಿದಿತ್ತು. ಶ್ರೀಕೃಷ್ಣನು ಒಂದು ತಮಾಷೆ ತೋರಿಸುತ್ತೇನೆಂದು ಅರ್ಜುನನನ್ನು ತಾಮ್ರಧ್ವಜನಪುರಕ್ಕೆ ರಾತ್ರಿಯಹೊತ್ತು ಕರೆದೊಯ್ಯುತ್ತಾನೆ. ಅಲ್ಲಿ ವೇಶ್ಯೆಯರ ಬೀದಿಬೀದಿಗಳನ್ನೇ ಅವರು ಸುತ್ತುವರು. ಯುದ್ಧದಲ್ಲಿ ಸೋತು ಸಿನಿಕತನದಿಂದ ಅವರು ಈ ಮಟ್ಟಕ್ಕೆ ಇಳಿದರೇ ? ಎಂದು ಒಂದು ಕ್ಷಣ ಸಂದೇಹವಾಗುತ್ತದೆ. ಆದರೆ ಕವಿಯ ವ್ಯಾಖ್ಯಾನವೇ ಬೇರೆಯಿದೆ. ತಾಮ್ರಧ್ವಜನ ಪಟ್ಟಣದ ವೇಶ್ಯಾಸ್ತ್ರೀಯರೆಲ್ಲ ಶ್ರೀಕೃಷ್ಣ ನಾಮಸ್ಮರಣೆ ಮಾಡುತ್ತಿದ್ದರಂತೆ.

ಲಕ್ಷ್ಮೀಶನನ್ನು ಸೇರಿಸಿಕೊಂಡು ಬಹುಪಾಲು ನಮ್ಮ ಪ್ರಾಚೀನ ಸಾಹಿತ್ಯವನ್ನೋದಿದಾಗ ಕಂಡುಬರುವ ಈ ಬಗೆಯ ಲಘು ಶೃಂಗಾರವರ್ಣನೆಯನ್ನು ಸೂಕ್ಷ್ಮಮತಿಗಳು ದ್ವೇಷಿಸಲು ಒಂದು ಬಲವತ್ತರವಾದ ಕಾರಣವಿದೆ. ನಮ್ಮ ಪ್ರಾಚೀನರು ಸಾಮಾಜಿಕವಾಗಿ ಹೆಣ್ಣನ್ನು ಕೇವಲ ಭೋಗದ ಸಾಧನವೆಂದೇ ಭಾವಿಸಿದ್ದರು. ಹಾಸಿಗೆ, ತಲೆದಿಂಬು, ಮಂಚಗಳಿಗಿಂತ ಪ್ರತ್ಯೇಕ ಅಸ್ತಿತ್ವ ಸಾಧಾರಣವಾಗಿ ಹೆಣ್ಣಿಗಿರಲಿಲ್ಲ. ಕವಿಗಳದೇನೂ ತಪ್ಪಿಲ್ಲ. ತಾವು ಬದುಕಿದ್ದ ಸಮಾಜವನ್ನು ಅವರು ಪ್ರತಿಬಿಂಬಿಸಿದ್ದಾರೆ. ನಿರೂಪಣೆಯಲ್ಲಿ ಕಂಡುಬರುವ ಅಮಾನವೀಯತೆ ಮಾತ್ರ ಸಂಕಟ ತರಿಸುತ್ತದೆ.

ಶೃಂಗಾರ ವರ್ಣನೆಯಲ್ಲಿ ಕವಿಯ ಅರಕೆಗಳೇನೇ ಇರಲಿ, ಹೆಣ್ಣುಗಂಡಿನ ದೇಹ ಸೌಂದರ್ಯವನ್ನು ನೋಡಿ ತಿಳಿಯುವ ಕಣ್ಣು ಲಕ್ಷ್ಮೀಶನಿಗಿದೆ. ಪ್ರಭಾವತಿಯ ರೂಪ, ಮುಂದಹಾಸ ಮತ್ತು ಅಲಂಕಾರಗಳನ್ನು ಎರಡು ಪದ್ಯಗಳಲ್ಲಿ ಮನಮೋಹಕವಾಗಿ ಬಣ್ಣಿಸಿದ್ದಾನೆ :

ಸ್ಫುರಿಸುವೊಳ್ದೊಡೆಯ ಬೆಡಗಿನ ನಡೆಯ ಸಿರಿಯ ಸಿಂ
ಗರದುಡೆಯ ತೆಳ್ವಾದಸಿಯ ಪೊಡೆಯ ಚೆಲ್ವುದಳೆ
ದುರದೆಡೆಯ ನಿಂಬುಗೊಂಡಿಟ್ಟೆಡೆಯ ಬಲ್ಮೊಲೆಯ ಪೊಳೆವ ಕಣ್ಮಲರ ಕಡೆಯ
ತ್ವರಿಪ ಭುಜವಲ್ಲರಿಯ ತೊಡವುಗಳ ಮೈಸಿರಿಯ
ಬಿರಿಮುಗುಳ ಕಬರಿಯ ಕಲೆಗಳಿಡಿದ ಸೌಂದರಿಯ
ದರಸಿ ನಿಜಪತಿಯ ಮುಂದಚ್ಚರಿಯ ಬಗೆಗೊಂಡಳೆಂದು ಬೇರೊಂದು ಪರಿಯ

ಮುಡಿಯ ಪೊಸಮಲ್ಲಿಗೆಯ ಸೂಸುವೆಳನಗೆಯ ಸವಿ
ನುಡಿಯ ಬಾಯ್ದೆರೆಯ ಹೊಳೆಹೊಳೆವ ದಶನದ ಮಿಸುಪ
ಕಡೆಗಣ್ಣ ತೊಳಗುವ ನಖಾವಳಿಯ ಥಳಥಳಿಪ ಕಂಠಮಾಲೆಯ ಮುತ್ತಿನ
ತೊಡವುಗಳ ಘನಸಾರದನುಲೇಪನದ ಸಣ್ಣ
ಮಡಿದುಕೂಲದ ಬೆಳ್ವೊಗರ್ ಕೋಮಲಾಂಗದೊಳ್
ಬಿಡದೆ ಪಸರಿಸೆ ಚಂದ್ರಕಾಂತದಿಂ ನಿರ್ಮಿಸಿದ ಪುತ್ತಳಿವೊಲವಳೆಸೆವಳು

ಭಾಗವತ ಕವಿಯಾದ ಲಕ್ಷ್ಮೀಶನಿಗೆ ಶ್ರೀಕೃಷ್ಣನನ್ನು ವರ್ಣನೆ ಮಾಡುವುದೆಂದರೆ ಎಲ್ಲಿಲ್ಲದ ಹಿಗ್ಗು. ಕಾವ್ಯದಲ್ಲಿ ಬರುವ ಭಕ್ತರ ಮೂಲಕ ತಾನೇ ಮೈದುಂಬಿ ಮುಕ್ತ ಚೇತನದಿಂದ ಹಾಡಿ ದಣಿಯುತ್ತಾನೆ:

ಅತಸೀಕುಸುಮಗಾತ್ರನಂ ಕಮಲನೇತ್ರನಂ
ಸ್ಮಿತರುಚಿರಶುಭರದನನಂ ಚಾರುವದನನಂ
ಕೃತಮೃಗಮದೋಲ್ಲಸತ್ ಸುಲಲಾಟನಂ ಮಣಿಕಿರೀಟನಂ ಕಂಬುಗಳದಾ
ಅತುಲ ತುಲಸೀಮಾಲನಂ ರಮಾಲೋಲನಂ
ಧೃತ ಕೌಸ್ತುಭೋದ್ಭಾಸನಂ ಪೀತವಾಸನಂ
ನುತಸಮಸ್ತಾಭರಣನಂ ಪುಣ್ಯಚರಣನಂ ಕಲಿಸುಧನ್ವಂ ಕಂಡನು

ಪ್ರಕೃತಿಯ ಸುಂದರ ದೃಶ್ಯಗಳನ್ನು, ಬೆಳಗು ಬೈಗುಗಳನ್ನು ಬಹು ಸುಂದರವಾಗಿ ಕವಿ ವರ್ಣಿಸಿದ್ದಾನೆ. ಎಲ್ಲ ಕವಿಗಳಂತೆಯೇ ಪ್ರಕೃತಿಗೆ ಚೇತನತ್ವವನ್ನು ಆರೋಪಿಸಿ ಚಿತ್ರಿಸಿದರೂ ಅಲ್ಲಿ ಅವನ ಸ್ವಂತಿಕೆ ಇದೆ. ಬೆಳಗಿನ ಒಂದು ವರ್ಣನೆ ಹೀಗಿದೆ:

ಮೂಡದೆಸೆಯೊಳ್ ಕೆಂಪು ದೊರೆಯೆ ತಾರಗೆ ಪರಿಯೆ
ಕೂಡೆ ತಂಗಾಳಿ ಮುಂಬರಿಯೆ ಕಮಲಂ ಬಿರಿಯೆ
ಪಾಡುವೆಳದುಂಬಿಗಳ್ ಮೊರೆಯೆ ಚಕ್ರಂ ನೆರೆಯೆ ನೈದಿಲೆಯ ಸೊಂಪು ಮುರಿಯೆ
ಬೀಡುಗೊಂಡಿರ್ದ ಕತ್ತಲೆಯ ಪಾಳೆಯಮೆತ್ತ
ಲೋಡಿದುದೋ ನೋಡಿದಪೆನೆಂದು ಪೂರ್ವಾಚಲದ
ಕೋಡುಗಲ್ಲಂ ಪತ್ತುವಂತೆ ಮೆರೆದಂ ಪ್ರಭೆಯೊಳಾನುತ್ಯನಾದಿತ್ಯನು

ಕವಿಸಮಯಗಳ ನೆರವಿನಲ್ಲಿಯೇ ಸೂರ್ಯೋದಯದ ಅರ್ಥಚಿತ್ರವನ್ನು ಬಿಡಿಸಿ ಉಳಿದರ್ಥವನ್ನು ತನ್ನ ಸ್ವಂತ ಪ್ರತಿಭೆಯಿಂದ ಸ್ಫುಟಗೊಳಿಸಿದ್ದಾನೆ. ಕವಿಯ ಸೃಷ್ಟಿಯೇ ಇಲ್ಲಿ ಹೆಚ್ಚು ಸ್ವಾರಸ್ಯಕರವಾಗಿದೆ. ಲಕ್ಷ್ಮೀಶನ ಗಂಗಾನದಿಯ ವರ್ಣನೆಯಂತೂ ಸುಪ್ರಸಿದ್ಧವಾದುದು. ಶಬ್ದಗಳು ಅಲ್ಲಿ ನರ್ತಿಸುತ್ತಿವೆ. ಬರಿಯ ಶ್ರವ್ಯಾನುಭವದಿಂದಲೇ ಒಂದು ಚಿತ್ರವನ್ನು ಅಲ್ಲಿ

ಆತ ಕಟ್ಟಿಕೊಡುತ್ತಾನೆ. ದೃಶ್ಯಾನುಭವವೇನಿದ್ದರೂ ಗೌಣವಾಗಿ ಉಳಿಯುತ್ತದೆ :

ತೆರತೆರದ ಕಲ್ಲೋಲ ಮಾಲೆಗಳ ಲೀಲೆಗಳ
ಬೆರೆಬೆರೆವ ರಾಜಹಂಸಾಳಿಗಳ ಕೇಳಿಗಳ
ಪರಿಪರಿಯ ನೀರ್ವನಿಗಳಾಕರದ ಶೀಕರದ ನೊರೆಯ ಬೊಬ್ಬುಳಿಯ ಸುಳಿಯ
ಮೊರೆಮೊರೆದು ಘೂರ್ಮಿಸುವ ಪರಿವುಗಳ ಮುರಿವುಗಳ
ತಿರುತಿರುಗಿ ಸುಳಿವ ಜಲಜಂತುಗಳ ಗೊಂತುಗಳ
ನೆರೆನೆರೆದು ಮುನಿಜನಂ ಸೇವಿಸುವ ಭಾವಿಸುವ ಗಂಗೆಗವನಿಜೆ ಬಂದಳು

ಲಕ್ಷ್ಮಣನು ಹಿಂದಿರುಗಿದ ಬಳಿಕ ದುಃಖವನ್ನು ತಾಳಲಾರದೆ ಸೀತೆ ಮೂರ್ಛಿತಳಾದಾಗ ಪ್ರಕೃತಿಸಮಸ್ತವೂ ಅವಳನ್ನು ಉಪಚರಿಸುತ್ತವೆ. ಸೀತೆಯನ್ನು ಎಚ್ಚರಿಸಲು ಗಾಳಿ ಬೀಸಿತೆಂದು ಹೇಳುವುದನ್ನು ಕವಿ ಹೀಗೆ ಅಲಂಕಾರಿಕವಾಗಿ ವರ್ಣಿಸಿದ್ದಾನೆ :

ಸುರನದಿಯ ತೆರೆತೆರೆಯ ನಡುನಡುವೆ ಬಿದ್ದೆದ್ದು
ಬರಲಾರದಿರ್ದೊಡಂ ಮತ್ತೆ ಗಂಗೆಯೊಳಲ
ರ್ದರವಿಂದಗಂಧದತಿ ಭಾರವಂ ಪೊರಲಾರದಿರ್ದೊಡಂ ಧರಣಿಸುತೆಯ
ಪರಿತಾಪಮಂ ತವಿಸದಿರಬಾರದೆಂದು ತರ
ಹರದೊಳೊಯ್ಯೊಯ್ಯನೈತಂದು ಬೀಸಿತು ಸುಖ
ಸ್ಪರುಶವಾತಂ ಜಗದೊಳುಪಕಾರಿಯಾದವಂ ತನ್ನ ನೋವಂ ನೋಳ್ಪನೆ

ಕೊನೆಯ ಸಾಲು ಇಡೀ ಪದ್ಯದ ವ್ಯಾಖ್ಯಾನದಂತೆ ಬರುತ್ತದೆ. ನದಿಯ ನೀರಿನ ತೆರೆಗಳಮೇಲೆ ಬೀಸಿಬಂದ ಗಾಳಿಯನ್ನು ಇಷ್ಟೊಂದು ತನ್ಮಯವಾಗಿ ಚಿತ್ರಿಸುವ ಕಲೆಗಾರಿಕೆಯನ್ನು ಮೆಚ್ಚದಿರಲು ಹೇಗೆ ತಾನೆ ಸಾಧ್ಯ ?

## 6

ಜೈಮಿನಿ ಭಾರತ, ಉಪಮೆಗಳ ವೈವಿಧ್ಯಕ್ಕೆ ಹೆಸರಾದುದು. ಮೂಲ ಕೃತಿಯಲ್ಲಿಯೇ ಇಲ್ಲಿ ಬರುವ ಬಹುಪಾಲು ಉಪಮೆಗಳಿವೆಯಂತೆ. ಲಕ್ಷ್ಮೀಶನ ಸ್ವತಂತ್ರ ಉಪಮೆಗಳು ಸುಂದರವಾಗಿವೆ. ಮಾನವನ ನಿತ್ಯವ್ಯವಹಾರದಿಂದ, ಪ್ರಕೃತಿ ಜಗತ್ತಿನಿಂದ, ಪುರಾಣ ಪ್ರಪಂಚದಿಂದ–ಹೀಗೆ ಹಲವು ಹನ್ನೊಂದು ಮೂಲಗಳಿಂದ ಆತ ಉಪಮೆಗಳನ್ನು ಹೆಕ್ಕಿಕೊಂಡಿದ್ದಾನೆ ; ತಾನು ವರ್ಣಿಸುವ ಸನ್ನಿವೇಶಗಳಿಗೆ ವ್ಯಕ್ತಿಗಳಿಗೆ ಅವುಗಳನ್ನು ಅಪೂರ್ವವಾದ ಮಾದರಿಯಲ್ಲಿ ಹೊಂದಿಸಿದ್ದಾನೆ. "ಲಕ್ಷ್ಮೀಶನ ಉಪಮಾನಗಳೆಂದರೆ

ಮೂಡುವ ಸೂರ್ಯನ ಎಳಬಿಸಿಲಿನ ಹೊಂಬೆಳಗಿನಲ್ಲಿ ನಳನಳಿಸಿ, ತಣ್ಣನೆ ಬೀಡುವ ತೆಳುಗಾಳಿಗೆ ತಲೆದೊಲೆದು ನಲಿದಾಡುವ ಹಚ್ಚನೆಯ ಹೊಸ ಹಸುರಿನಲ್ಲಿ, ಗರಿಗೆದರಿ, ಮಳೆಬಿಲ್ಲಿನ ಮರಿಗಳಂತೆ ಮನೋಹರವಾಗಿ ನರ್ತಿಸುವ ಮಯೂರಗಳು. ಅವುಗಳ ಸೊಬಗಿಗೆ ಸೆರೆಸಿಕ್ಕ ಪ್ರೇಕ್ಷಕನು ವನವಿಹಾರವನ್ನೆಲ್ಲ ಮರೆಯುತ್ತಾನೆ. ಸೀಗೆಯ ಮೆಳೆಗಳಲ್ಲಿ ನುಗ್ಗಿ ಮೈಹರಿದುಕೊಂಡುದನ್ನು ಲಕ್ಷಿಸುವುದಿಲ್ಲ. ಅಷ್ಟೇ ಅಲ್ಲ. ಮಯೂರನರ್ತನವನ್ನು ನೋಡಲೆಂದು ಎಷ್ಟು ಸೀಗೆಯ ಮೆಳೆಗಳನ್ನಾದರೂ ನುಗ್ಗಲು ಸಾಹಸಮಾಡುತ್ತಾನೆ. ಎಂದರೆ ಲಕ್ಷ್ಮೀಶನ ಉಪಮೆಗಳೆಲ್ಲವೂ ನರ್ತಿಸುವ ಮಯೂರಗಳೆಂದು ಯಾರೂ ಭಾವಿಸಬಾರದು. ಅವುಗಳಲ್ಲಿ ಕೆಲವು ಕೆಂಬೂತಗಳಂತೆ ಜಿಗುಪ್ಸೆ ಹುಟ್ಟಿಸುತ್ತವೆ. ಚರ್ವಿತಚರ್ವಣ ಲಬ್ಧವಾದ ಕವಿಸಮಯಗಳೂ ಬೇಕಾದಷ್ಟಿವೆ.''[3]

ಹಲವು ಬಾರಿ ಪದ್ಯದ ತುಂಬ ಬರೀ ಉಪಮೆಗಳನ್ನು ತುಂಬಿ ವರ್ಣಿಸುವ ಲಕ್ಷ್ಮೀಶ ತನ್ನ ಉಪಮಾನಕ್ಕೂ ಉಪಮೇಯಕ್ಕೂ ಹೊಂದಾಣಿಕೆಯನ್ನೆಲ್ಲ ಕಲ್ಪಿಸದಿರುವುದೂ ಉಂಟು. ಕಲ್ಪಿಸಿದರೂ ಅವುಗಳ ಸಂಬಂಧ ತೀರಾ ತೆಳುವಾಗಿರುತ್ತದೆ ; ಅಸ್ಪಷ್ಟವಾಗಿರುತ್ತದೆ. ತುಂಬಾ ಗಹನವಾಗಿದ್ದು ರಮಣೀಯವಾಗುವುದಿಲ್ಲ. ದುಷ್ಟಬುದ್ಧಿಯ ಅಪ್ಪಣೆಯಂತೆ ಚಂಡಾಲರು ಶಿಶು ಚಂದ್ರಹಾಸನನ್ನು ವಧಿಸಲು ಎತ್ತಿಕೊಂಡು ಹೋಗುತ್ತಿದ್ದ ಸನ್ನಿವೇಶದ ಪ್ರಸಿದ್ಧ ಪದ್ಯವನ್ನೇ ಗಮನಿಸಬಹುದು :

ಪಾತಕಿಗಳೊಡಲೊಳಿಹ ಪರಮಾತ್ಮನಂತೆ ಯಮ
ದೂತರೆಳತಂದಜಾಮಿಳನಂತೆ ಕಾಕ ಸಂ
ಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮರಿಯಂತೆ ನುಲುಗಿ ಕತ್ತಲೆಯೊಳಿರ್ದ
ಶೀತಳ ಮರೀಚಿ ಲಾಂಛನದಂತೆ ಬಹಳ ಕೋ
ಪಾತಿಶಯದೊಳಗಿಹ ವಿವೇಕದಂತಾಗ ಪಶು
ಘಾತಕಿಗಳೆತ್ತಿಕೊಂಡೊಯ್ವ ಬಾಲಕನಿರ್ದನವರೆಡೆಯೊಳಂಜುತಳುತ

ಮೇಲಿನ ಪದ್ಯದ ಮೊದಲ ಮೂರು ಸಾಲುಗಳಲ್ಲಿ ಸಾರ್ಥಕವಾದ ಉಪಮೆಗಳಿವೆ. ಉಳಿದ ಸಾಲುಗಳಲ್ಲಿ ದೂರಾನ್ವಯವಿದೆ. ಕೊನೆಯ ಉಪಮೆಯಂತೂ ಪ್ರಸ್ತುತವೆನ್ನಿಸುವುದೇ ಇಲ್ಲ. ಆದರೂ ಜೈಮಿನಿಭಾರತದ ಅತ್ಯುತ್ತಮ ಉಪಮೆಗಳಲ್ಲಿ ಕವಿಯ ಪ್ರತಿಭೆಯೂ ಲೋಕಾನುಭವ ಮತ್ತು ಕಾವ್ಯ ಶಾಸ್ತ್ರಾನುಭವಗಳು ಸಾರ್ಥಕವಾದ ರೀತಿಯಲ್ಲಿ ಕಂಗೊಳಿಸುತ್ತಿವೆ. ಸೋದರ ವಧೆಯಿಂದ ಸಂತಪ್ತನಾದ ಧರ್ಮರಾಯ, 'ಅನಿಲಸಂಚಾರ

ಪೊಂದಿನಿಸಿಲ್ಲದುರಿವ ಕಡುವೇಸಗೆಯು ಬಿಸಿಲಿನಿಂದ ಬಸವಳಿದ ಕೋಮಲ ರಸಾಲ'ದುಂತಿದ್ದನಂತೆ. ಕುದುರೆಯು ಸಿಕ್ಕದಿದ್ದಾಗ ಭೀಮನು, 'ಕಲಹದೊಳ್ಮುನಿದ ಕಾಂತೆಯು ಕುಪಿತ ವದನಾರವಿಂದದೊಳ್ ಮಿಸುಗುವ ಎಳನಗೆ ತೋರುವನ್ನೆಗಂ ಚಿತ್ತದೊಳ್ ಕುದಿವ ನಾಗರಿಕನಂತೆ' ಪರಿತಪಿಸಿದನಂತೆ. ಜ್ವಾಲೆಯು ಗಂಗಾದೇವಿಗೆ ಕೋಪವನ್ನು ಉದ್ರೇಕಿಸಿದ ವಿಚಾರ, 'ಪಚ್ಚೆಲೆಯ ತರುವನ್ ಒಣಗಿದ ಮರದ ಪೊರೆಯ ಕಾಳ್ಕಿಚ್ಚು ಕೊಂಡರಿವವೊಲ್' ಕಾಣಿಸುತ್ತದೆ. ಶ್ರೀರಾಮನ ಕಠೋರ ಆಜ್ಞೆಯನ್ನು ಲಕ್ಷ್ಮಣನು ತಿಳಿಸಿದಾಗ ಗರ್ಭಿಣಿ ಸೀತೆ, ಮೂರ್ಛಿತಳಾಗಿ ನೆಲದ ಮೇಲೆ ಬಿದ್ದದ್ದನ್ನು, 'ಬಿರುಗಾಳಿ ಪೊಡೆಯಲ್ಕೆ ಕಂಪಿಸಿ ಫಲಿತ ಕದಳಿ ಮುರಿದಿಳೆಗೊರಗುವಂತೆ' ಎಂದು ಬಣ್ಣಿಸಿದ್ದಾನೆ. 'ಮಮತೆಯಂ ಮಹಾಯೋಗಿ ಬಿಡುವಂತೆ; 'ಕಲಿಯುಗದ ವಿಪ್ರರಾಚಾರಮಂ ಬಿಡುವಂತೆ' ಶ್ರೀರಾಮನು ಸೀತೆಯನ್ನು ತ್ಯಜಿಸಲು ನಿರ್ಧರಿಸಿದ. ಚಂಡಿಯೊಡನೆ ಸಂಸಾರ, 'ಮುಳ್ಳಿಡಿದ ಮರನೇರಿದಂತಾದುದು.' ಸೀತೆಯನ್ನು ಅಡವಿಯಲ್ಲಿ ಬಿಡಲು ಹೊರಟ ಲಕ್ಷ್ಮಣನ ರಥದ ಪತಾಕೆ ಗಾಳಿಗೆ ಬೀಸುತ್ತಿದ್ದರೆ ಕವಿಗೆ ಅದು ಕಾಣಿಸಿರುವ ರೀತಿ ಹೀಗಿದೆ; 'ರಥಾಗ್ರದೊಳ್ ಚಲಿಸುವ ಪತಾಕೆ ರಘುವರನಂಗನೆಯನುಳಿದನಹಹಯೆಂದಡಿಗಡಿಗೆ ತಲೆಗೊಡಹುವಂತಿರಲ್ಕೆ.'

ಲಕ್ಷ್ಮೀಶನನ್ನು ನಾದಲೋಲನೆಂದು ಒಬ್ಬ ಹಿರಿಯ ಕವಿಗಳು ಕರೆದಿದ್ದಾರೆ. ಅವನ ಕಾವ್ಯದ ಸ್ವಂತಿಕೆಯೆಂದರೆ ಈ ನಾದಮಯತೆಯೆಂದೂ, ಕಾವ್ಯವನ್ನು ರಾಗವಾಗಿ ಓದುವ ಸಂಪ್ರದಾಯ ಹಿನ್ನೆಲೆಗೆ ಸರಿದಂತೆ ಲಕ್ಷ್ಮೀಶನ ಜನಪ್ರಿಯತೆ ಕುಗ್ಗಿತೆಂದೂ ನಂಬಿಕೆಯಿದೆ. "ಭಾವಾರ್ಥ ಜಿಜ್ಞಾಸೆಯನ್ನು ಬದಿಗೆ ತಳ್ಳಿ ಶಬ್ದಾಮೋದದ ಕಡೆಗೆ ನಮ್ಮ ಲಕ್ಷ್ಯವನ್ನು ತಿರುಗಿಸಿದರೆ ಪ್ರಸನ್ನ ಲಲಾಟದೊಡನೆ ಮುಕ್ತ ಹಸ್ತನಾಗುತ್ತಾನೆ ಲಕ್ಷ್ಮೀವರ. ಸಂಗೀತ ಸದೃಶವಾದ ಇಂಪು ಅವನ ಹುಟ್ಟುಗುಣ, ಅಸಾಧಾರಣ ಲಕ್ಷಣ, ಹಿರಿಯ ವರ್ಚಸ್ಸು ಅವನ ಪರಮ ಮಾಧುರ್ಯದ ಸಂತತ ಪ್ರವಾಹಕ್ಕೆ ಸಿಕ್ಕಿ, ಕೈಕಾಲು ಸೋತು, ಎಚ್ಚರ ತಪ್ಪಿ, ಕೊಚ್ಚಿಕೊಂಡು ಹೋಗದೆ ಈಚೆಗೆ ಈಸಿಬಂದು ನಿಂದು, ದಡದ ವಾಹಿನಿಯನ್ನು ಪರೀಕ್ಷಿಸುವ ಪ್ರಯತ್ನ ವಿಮರ್ಶೆಯಲ್ಲಿ ತಲೆನರೆತ ರಸಿಕನಿಗೂ ಪ್ರಯಾಸವೆ."[4]

ಅಡಿ ಟಿಪ್ಪಣಿಗಳು

1 ಕುವೆಂಪು, ಕಾವ್ಯವಿಹಾರ, ಪು. 19
2 ದ. ರಾ. ಬೇಂದ್ರೆ, ಚಂದ್ರಹಾಸ, ಪು. 3
3 ಕುವೆಂಪು, ಕವಿ ಲಕ್ಷ್ಮೀಶ, ಪು. 193
4 ಎಸ್. ವಿ. ರಂಗಣ್ಣ, ಶೈಲಿ-೨, ಪು. 128

## ಮುಕ್ತಾಯ

ಲಕ್ಷ್ಮೀಶನ ತರುವಾಯದ ಷಟ್ಪದಿ ಸಾಹಿತ್ಯವು ಕೂಳೆಬೆಳೆಯಿದ್ದಂತೆ. ಸಮೃದ್ಧ ಸಾಹಿತ್ಯವೇನಿದ್ದರೂ ಹಿಂದಿನ ಶತಮಾನಗಳಲ್ಲಿ. ಇಪ್ಪತ್ತನೇ ಶತಮಾನಕ್ಕೆ ಹಿಂದಿನ ಮೂರು ಶತಮಾನಗಳ ಕನ್ನಡ ಸಾಹಿತ್ಯದಲ್ಲಿ ಯಾವ ಪ್ರಕಾರಗಳಲ್ಲಿಯೂ ಕಣ್ಣು ಕುಕ್ಕುವಂತಹ ಸಾಧನೆ ಇಲ್ಲ. ಕನ್ನಡ ನಾಡಿನ ರಾಜಕೀಯ ಇತಿಹಾಸದಲ್ಲಿಯೂ ಹದಿನೆಂಟು ಹತ್ತೊಂಬತ್ತನೆ ಶತಮಾನಗಳು ಅತ್ಯಂತ ದುರ್ದೆಸೆಯ ದಿನಗಳು. ವಿದೇಶೀಯರ ಸಾಮ್ರಾಜ್ಯ ದಾಹಕ್ಕೆ ಕರ್ನಾಟಕದವರ ಪರಸ್ಪರ ಕಚ್ಚಾಟಗಳೇ ಅನುಕೂಲವನ್ನು ಕಲ್ಪಿಸಿಕೊಟ್ಟವು. ಜನಜೀವನದಲ್ಲಿದ್ದ ಈ ಅಸ್ಥಿರತೆ ಸಹಜವಾಗಿಯೇ ಅಂದಿನ ಸಾಹಿತ್ಯದಲ್ಲಿಯೂ ಪ್ರತಿಬಿಂಬಿಸಿದೆ. ಮೈಸೂರಿನ ಅರಸರು ಸಾಹಿತ್ಯ ಮತ್ತು ಕಲೆಗಳಿಗೆ ವಿಶೇಷ ಪ್ರೋತ್ಸಾಹ ಕೊಟ್ಟರೂ ಹೇಳಿಕೊಳ್ಳುವಂತಹ ಒಂದಾದರೂ ಮಹಾಕೃತಿ ಆಗ ಹುಟ್ಟಲಿಲ್ಲ. ಸಾಹಿತ್ಯ ರಚನೆಯ ಗುಣಮಟ್ಟಗಳೇನಿದ್ದರೂ ವಿಸ್ತಾರ ವೈವಿಧ್ಯಗಳಿಗೆ ಕೊರತೆಯಿರಲಿಲ್ಲ. ಸುಮಾರು ಮೂರು ಶತಮಾನಗಳಷ್ಟು ಅವಧಿಯಲ್ಲಿ ಬಂದ ಹಲವಾರು ಷಟ್ಪದಿಕಾರರಲ್ಲಿ ಕೆಲವರನ್ನು ಮಾತ್ರ ಇಲ್ಲಿ ಸಂಗ್ರಹವಾಗಿ ಪರಿಚಯಿಸಲಾಗುವುದು.

ವಿರೂಪಾಕ್ಷ ಪಂಡಿತನು ಹದಿನಾರನೇ ಶತಮಾನದ ಉತ್ತರಾರ್ಧದಲ್ಲಿ ಬದುಕಿದವನು. ತಂದೆ ತಾಯಿಗಳ ಹೆಸರನ್ನು ಹೇಳಿಕೊಂಡಿಲ್ಲ. ಗುರುಪರಂಪರೆಯನ್ನು ಮಾತ್ರ ಹೇಳಿದ್ದಾನೆ. ಮಳೆಯ ಮಲ್ಲೇಶನ ಪರಂಪರೆಯ ವಿಜಯನಗರದ ಹಿರಿಯ ಮಠದ ಸಿದ್ಧ ವೀರೇಶ್ವರನು ಈ ಕವಿಯ ಗುರು. ವಿರೂಪಾಕ್ಷ ಪಂಡಿತನೂ ವೀರಶೈವ ಮಠವೊಂದರ ಗುರುವಾಗಿದ್ದನಂತೆ. ಈತನ 'ಚೆನ್ನಬಸವಪುರಾಣ'ವು ವಾರ್ಧಕ ಷಟ್ಪದಿಯಲ್ಲಿರುವ ಬೃಹತ್ಕಾವ್ಯ. ಪ್ರೌಢಕಾವ್ಯ ಪರಂಪರೆಯಲ್ಲಿ ಇದಕ್ಕೆ ಗಣನೀಯ ಸ್ಥಾನವಿದೆ.

ಚೆನ್ನಬಸವೇಶ್ವರನು ಹನ್ನೆರಡನೆ ಶತಮಾನದ ಸುಪ್ರಸಿದ್ಧ ಶಿವಶರಣ ಮತ್ತು ವಚನಕಾರ. ವಾಸ್ತವವಾಗಿ ವಿರೂಪಾಕ್ಷ ಪಂಡಿತನ ಕಾವ್ಯದಲ್ಲಿ ಚೆನ್ನಬಸವೇಶ್ವರನ ಕಥೆಗಿಂತ ಶಿವತತ್ತ್ವ ನಿರೂಪಣೆಗೆ ಹೆಚ್ಚಿನ ಮಹತ್ವ ದೊರೆತಿದೆ. ಕಥಾನಾಯಕನ ವಿಚಾರವನ್ನು ಸಂಗ್ರಹವಾಗಿ ನಿರೂಪಿಸಲಾಗಿದೆ. ವೀರಶೈವ ಧರ್ಮದ ತತ್ತ್ವವಿಚಾರ, ಷಟ್ಸ್ಥಲ ಸಿದ್ಧಾಂತ, ಅರವತ್ತು ಮೂವರು ಪುರಾತನರು, ಅಮರಗಣಂಗಳು, ನೂರೊಂದು ವಿರಕ್ತರು–ಮುಂತಾದ ಪುರಾಣ ವಿಚಾರಗಳೆಲ್ಲವನ್ನೂ ವಿಸ್ತಾರವಾಗಿ ಪ್ರತಿಪಾದಿಸಲಾಗಿದೆ. ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳು ವೀರಶೈವ ಕವಿಗಳ ವಿಚಾರವೂ ಇಲ್ಲಿ ಬರುತ್ತದೆ. ಒಟ್ಟಿನಲ್ಲಿ ಇದೊಂದು ಆದರ್ಶ ವೀರಶೈವ ಪುರಾಣ. ಆದರೆ ವಿರೂಪಾಕ್ಷ ಪಂಡಿತನಿಗೆ ಮಹಾಕವಿ ಎನ್ನಿಸಿಕೊಳ್ಳಬೇಕೆಂಬ ಚಪಲ ಇದೆ. ಹದಿನೆಂಟು ವರ್ಣನೆಗಳು, ಒಂಬತ್ತು ರಸಗಳು, ಕವಿಸಮಯ ಗಳು ಮುಂತಾದ ಪರಂಪರೆಯ ಮಗ್ಗದಲ್ಲಿ ಸುಲಭವಾಗಿ ಶಾಸ್ತ್ರೀಯವಾದ ಮಹಾಕಾವ್ಯವೊಂದನ್ನು ಆತ ಹೊಸೆದಿದ್ದಾನೆ. ಲಕ್ಷ್ಮೀಶನಿಗೂ ವಿರೂಪಾಕ್ಷ ಪಂಡಿತನಿಗೂ ಹಲವೆಡೆಗಳಲ್ಲಿ ಹೋಲಿಕೆಯಿರುವುದನ್ನು ವಿದ್ವಾಂಸರು ತೋರಿಸಿದ್ದಾರೆ. ಜೈಮಿನಿ ಭಾರತ ಮತ್ತು ಚೆನ್ನಬಸವ ಪುರಾಣಗಳ ಪೀಠಿಕಾ ಸಂಧಿಗಳಲ್ಲಿ ಬರುವ ಪದ್ಯಗಳೆರಡನ್ನು ಹೋಲಿಸಿದರೆ ಲಕ್ಷ್ಮೀಶ ಮತ್ತು ವಿರೂಪಾಕ್ಷ ಪಂಡಿತರಿಬ್ಬರೂ ಪರಸ್ಪರ ಸ್ಪರ್ಧೆಯಿಂದ ಬರೆದಿರಬೇಕೆಂಬುದು ಗೊತ್ತಾಗುತ್ತದೆ.

ಜೈಮಿನಿ ಭಾರತದ ಮೊದಲ ಪ್ರಾರ್ಥನಾ ಪದ್ಯ ಹೀಗಿದೆ :

ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ಜಗಮೆ
ತೀವಲಮದಮಲ ಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೇರೆವರಿಯೆ
ಆವಗಂ ಸರಸ ಕರುಣಾಮೃತದ ಕಳೆಗಳಿಂ
ತೀವಿದೆಳನಗೆಯ ಬೆಳುದಿಂಗಳಂ ಪಸರಿಸುವ
ದೇವಪುರ ಲಕ್ಷ್ಮೀರಮಣನಾಸ್ಯ ಚಂದ್ರನಾನಂದಮಂ ನಮಗೀಯಲಿ

ವಿರೂಪಾಕ್ಷಪಂಡಿತನ ಚೆನ್ನಬಸವ ಪುರಾಣದ ಪ್ರಥಮ ಸಂಧಿಯಲ್ಲಿ ಬರುವ ಒಂದು ಪ್ರಾರ್ಥನಾ ಪದ್ಯ ಇದರೊಂದಿಗೆ ಹೋಲಿಕೆ ಪಡೆಯುತ್ತದೆ.

ಶ್ರೀ ಗಿರಿಜೆಯಾಸ್ಯ ಕಮಲದ ಸೊಂಪು ಪೊಳೆಯೆ ಏರಿ
ದಾಗಿ ಕುಚಚಕ್ರಯುಮಳದ ಪೆಂಪು ಬಳೆಯೆ ತಲೆ
ವಾಗಿ ಕಣ್ಣೈದಿಲಲರಿಕೆಯಿಂಪು ಕಳೆಯೆ ನಾಸಾನಿಲನ ಕಂಪು ಸುಳಿಯೆ
ಬೀಗೆ ಕುಂತಳ ತಮಂ ಸಾಗೆ ಚೆಂದುಟಿಗೆಂಪು
ಮೇಗೆ ಸೌಖ್ಯೋದಯದ ಬೆಳಗ ಪಸರಿಸಿ ನಿತ್ಯ
ನಾಗಸೆವ ಪಂಪಾ ವಿರೂಪಾಕ್ಷ ಸೂರ್ಯನಾನಂದಮಂ ನಮಗೀಯಲಿ

ಪಾಂಡಿತ್ಯ ಪ್ರೌಢಿಮೆಗಳಲ್ಲಿ ಇಬ್ಬರೂ ಸಮಾನರು. ಕಥನಕಾರನಾಗಿ ನಿಸ್ಸಂದೇಹವಾಗಿ ಲಕ್ಷ್ಮೀಶನು ವಿರೂಪಾಕ್ಷಪಂಡಿತನಿಗಿಂತ ಬಹು ದೊಡ್ಡ ಕವಿ. "ಲಕ್ಷ್ಮೀಶ ಮತ್ತು ವಿರೂಪಾಕ್ಷ ಪಂಡಿತ. ಇವರಿಬ್ಬರೂ ಅನೇಕ ಅಂಶಗಳಲ್ಲಿ ಭಿನ್ನ ಮನೋಧರ್ಮದವರಾದರೂ ದೇಸಿಗಬ್ಬಕ್ಕೆ ಮಾರ್ಗದ ಪಟ್ಟಕಟ್ಟುವ ವಿಚಾರದಲ್ಲಿ ಸಮಾನಶೀಲರು. ವಾರ್ಧಕ ಷಟ್ಪದಿಯನ್ನು ಅವರು ಬಳಸಿದ ಬಗೆ ಆಳವಾದ ಅಧ್ಯಯನ ಮತ್ತು ಆಸ್ವಾದಗಳಿಗೆ ಅರ್ಹವಾಗಿದೆ".[1]

ಹದಿನಾರನೆಯ ಶತಮಾನದ ಕೊನೆಯ ಭಾಗದ ಮತ್ತೊಬ್ಬ ಕವಿ ಗೋವಿಂದ. ಗೋಪಕವಿಯೆಂದೂ ಅವನಿಗೆ ಹೆಸರುಂಟು. ತಂದೆ ಕರಣಿಕ ಜ್ಯೋತಿ. ವಿಶ್ವಾಮಿತ್ರ ಗೋತ್ರದ ಬ್ರಾಹ್ಮಣ ಕವಿ. ಈತನ ಕೃತಿ 'ನಂದಿ ಮಹಾತ್ಮ್ಯೆ'. ವಾರ್ಧಕ ಷಟ್ಪದಿಯಲ್ಲಿದೆ. ಮದನಗೋಪಾಲನ ಭಕ್ತನಾದ ಈತನ ಶೈಲಿ ಸಂಸ್ಕೃತ ಭೂಯಿಷ್ಠವಾಗಿದೆ. ಜೈಮಿನಿಭಾರತದಿಂದ ಪ್ರಭಾವಿತವಾಗಿದೆ. ಕೂಷ್ಮಾಂಡನೆಂಬ ಗಣನಾಥನು ನಂದಿಗೆ ಶೈವಕ್ಷೇತ್ರಗಳ ಮಹಿಮೆಯನ್ನು ನಿರೂಪಿಸಿದನೆಂಬ ವಿಚಾರ ಈ ಕಾವ್ಯದಲ್ಲಿ ಬರುತ್ತದೆ. ನಂದಿಯ ಮಹಾತ್ಮೆಯನ್ನು ಎತ್ತಿತೋರಿಸುವ ಕಥಾಪ್ರಸಂಗವಿದೆ.

ನಾಗರಸನು ಭಗವದ್ಗೀತೆಯನ್ನು ಭಾಮಿನಿ ಷಟ್ಪದಿಯಲ್ಲಿ ಅನುವಾದಿಸಿದ್ದಾನೆ. ಪ್ರತಿ ಶ್ಲೋಕವನ್ನೂ ಒಂದೊಂದು ಷಟ್ಪದಿಯಲ್ಲಿ ಭಾಷಾಂತರಿಸಿರುವುದಾಗಿ ಹೇಳಿಕೊಂಡಿದ್ದಾನೆ. ಕ್ರಿ. ಶ. ಸುಮಾರು 1650 ರಲ್ಲಿದ್ದನೆಂದು ಕವಿಚರಿತೆಕಾರರು ಹೇಳಿರುವ ಈತನು ಬ್ರಾಹ್ಮಣ ಕವಿ. ಕಾಶ್ಯಪ ಗೋತ್ರದವನು. ವಿಶ್ವೇಶ್ವರನ ಮಗ. ಪಂಡರಾಪುರದ ವಿಟ್ಠಲನ ಭಕ್ತ. ಹರಿದಾಸ ಸಾಹಿತ್ಯದಿಂದ ಪ್ರಭಾವಿತನಾಗಿದ್ದಾನೆ.

ಕ್ರಿ.ಶ. 1750ರ ಚಿದಾನಂದಾವಧೂತನ 'ಜ್ಞಾನಸಿಂಧು' ರಂಗನಾಥನ 'ಅನುಭವಾಮೃತ'ವನ್ನು ಅನುಸರಿಸಿರುವ ಕೃತಿ. ಭಾಮಿನೀಷಟ್ಪದಿಯಲ್ಲಿದೆ.

ಅದ್ವೈತ ವೇದಾಂತವನ್ನು ವಿಸ್ತಾರವಾಗಿ ನಿರೂಪಿಸಲಾಗಿದೆ. ಬ್ರಾಹ್ಮಣ ಕವಿಯಾದ ಈತನ ಗುರು ಚಿದಾನಂದ. ಜ್ಞಾನಸಿಂಧುವಲ್ಲದೆ 'ದೇವಿಮಹಾತ್ಮ್ಯೆ' ವೆಂಬ ಒಂದು ಭಾಮಿನಿಷಟ್ಪದಿ ಕಾವ್ಯವು, ಇನ್ನಿತರ ಗದ್ಯಪದ್ಯ ಕೃತಿಗಳೂ ಈತನಿಂದ ರಚಿತವಾಗಿವೆ.

ಮುಪ್ಪಿನಷಡಕ್ಷರಿ ಹಾಡಿನ ಧಾಟಿಯಲ್ಲಿ ಎಲ್ಲ ಷಟ್ಪದಿ ರೂಪಗಳಲ್ಲಿಯೂ ಪದ್ಯಗಳನ್ನು ರಚಿಸಿದ್ದಾನೆ. ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿದ್ದ ಈತ ವೀರಶೈವ ಕವಿ. ಶಿವಸ್ತುತಿ ಮತ್ತು ತತ್ತ್ವಬೋಧಕವಾಗಿರುವ ಇವನ ಹಾಡುಗಳು ಜನಪ್ರಿಯವಾಗಿವೆ. ಲಲಿತ ಶೈಲಿಯನ್ನು ಈ ರಚನೆಗಳಲ್ಲಿ ಕಾಣಬಹುದು.

ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿದ್ದ ಮತ್ತೊಬ್ಬ ಕವಿ ಚಿಕ್ಕನಂಜೇಶನು 'ರಾಘವಾಂಕ ಚಾರಿತ್ರ,' 'ಗುರುರಾಜ ಚಾರಿತ್ರ' ಎಂಬ ಎರಡು ಕಾವ್ಯಗಳನ್ನು ರಚಿಸಿದ್ದಾನೆ. ವೀರಶೈವ ಕವಿಯಾದ ಈತನ ಎರಡು ಕೃತಿಗಳೂ ವಾರ್ಧಕ ಷಟ್ಪದಿಯಲ್ಲಿವೆ. ಕನ್ನಡ ಸಾಹಿತ್ಯ ಚರಿತ್ರೆಗೆ ಮುಖ್ಯ ವಾದ ಆಕರ ಗ್ರಂಥಗಳಾಗಿ ಪರಿಣಮಿಸಿವೆ. 'ರಾಘವಾಂಕ ಚರಿತೆ'ಯಲ್ಲಿ ಹರಿಹರ, ರಾಘವಾಂಕ, ಕೆರೆಯ ಪದ್ಮರಸರೇ ಮುಂತಾದವರ ಸಂಗತಿಯಿದೆ. ವೀರಶೈವ ಧರ್ಮದ ಸಾರವನ್ನೊಳಗೊಂಡಿದೆ. ಶಿವಭಕ್ತರ ಸತ್ಕಥೆಗಳು, ಲಿಂಗ ಜಂಗಮ ಮಹಾತ್ಮ್ಯೆ, ಪೌರಾಣಿಕ ಕಥೆಗಳು ಇಲ್ಲಿ ಬರುತ್ತವೆ. ಷಟ್ಪದಿ ಸಾಹಿತ್ಯದ ಪ್ರಥಮ ಮಹಾಕವಿಯೂ ಹರಿಹರನ ಶಿಷ್ಯನೂ ಆದ ರಾಘವಾಂಕನೇ ಕಥಾನಾಯಕ. 'ಗುರುರಾಜ ಚಾರಿತ್ರ'ದಲ್ಲಿಯೂ ಅನೇಕ ವೀರಶೈವ ಕವಿಗಳ ಸಂಗತಿಯಿರುವುದರಿಂದ ಸಾಹಿತ್ಯ ಚರಿತ್ರೆಯನ್ನು ಬರೆಯು ವವರಿಗೆ ಇದೂ ಒಂದು ಸಹಾಯಕ ಗ್ರಂಥವಾಗಿ ಪರಿಣಮಿಸಿದೆ.

ಕ್ರಿ.ಶ. 1580 ರಲ್ಲಿದ್ದವನೆಂದು ಕವಿಚರಿತೆಕಾರರು ಹೇಳಿರುವ ಅದೃಶ್ಯ ಕವಿಯ ಕೃತಿ 'ಪ್ರೌಢರಾಯನ ಕಾವ್ಯ' ವಾರ್ಧಕ ಷಟ್ಪದಿಯಲ್ಲಿದೆ. ಈತನ ಗುರು ಮಳೆಯ ಮಲ್ಲೇಶ. ತಂದೆ ಅಣ್ಣೇಂದ್ರ. 'ಪ್ರೌಢರಾಯನ ಕಾವ್ಯ'ದ ಕಥಾವಸ್ತು ಶಿವಶರಣರ ಕಥೆಗಳು. ಕಥೆ, ಉಪಕಥೆಗಳೆಲ್ಲಾ ಸೇರಿದರೆ ನೂರಾರು ಸಂಖ್ಯೆಯ ಕಥೆಗಳು ಅಲ್ಲಿವೆ. ಈ ಕಥೆಗಳನ್ನು ಜಕ್ಕಣಾರ್ಯನು ಪ್ರೌಢದೇವ ರಾಯನಿಗೆ ಹೇಳಿದಂತೆ ಕಲ್ಪನೆಯಿದೆ. ವಿಜಯನಗರದ ಅರಸು ಪ್ರೌಢದೇವ

ರಾಯ, ಆತನ ಪ್ರಧಾನಸಚಿವ ಲಕ್ಕಣ್ಣದಂಡೇಶ ಮುಂತಾದವರ ಸಂಗತಿಗಳೂ ಈ ಕಾವ್ಯದಲ್ಲಿ ಬರುತ್ತವೆ.

ಹದಿನೇಳನೆ ಶತಮಾನದ ಕೊನೆಯ ಭಾಗದಲ್ಲಿದ್ದ ರಂಗನಾಥಕವಿಯು ಮಹಲಿಂಗರಂಗನೆಂದೂ ಹೆಸರಾಗಿದ್ದಾನೆ. ಆತನ ತಂದೆ ಮಹಲಿಂಗದೇವ. ಗುರು ಸಹಜಾನಂದ. ಸಹವಾಸಿ ವಂಶದವನೆಂದು ಹೇಳಿಕೊಂಡಿರುವ ಈತ ಅದ್ವೈತಿಯಾದ ಬ್ರಾಹ್ಮಣಕವಿ. ಆತನ ಕೃತಿ 'ಅನುಭವಾಮೃತ' ಭಾಮಿನಿ ಷಟ್ಪದಿಯಲ್ಲಿದೆ. ಶಂಕರಾಚಾರ್ಯರ ಅದ್ವೈತ ತತ್ತ್ವವನ್ನು ಈ ಕೃತಿಯಲ್ಲಿ ಸರಳವಾಗಿ ನಿರೂಪಿಸುವುದು ಆತನ ಗುರಿ. 'ಅನುಭವಾಮೃತ'ದ ವೈಶಿಷ್ಟ್ಯ ವೆಂದರೆ ಅಲ್ಲಿನ ದೃಷ್ಟಾಂತಗಳು. ವಚನಸಾಹಿತ್ಯ, ತತ್ತ್ವವಿಚಾರಗ್ರಂಥಗಳು, ಉಪನಿಷತ್ತು, ಭಗವದ್ಗೀತೆ, ರಾಮಾಯಣ, ಮಹಾಭಾರತಗಳ ಅಭ್ಯಾಸದ ಜೊತೆಗೆ ಲೋಕಾನುಭವವೂ ಆತನಿಗಿರುವುದರಿಂದ ಈ ದೃಷ್ಟಾಂತಗಳು ವೈವಿಧ್ಯಮಯವಾಗಿವೆ.

ಎತ್ತು ತೆಂಗಿನ ಕಾಯ ಬಲ್ಲುದೆ
ಕತ್ತೆಯರಿವುದೇ ಕಸ್ತುರಿಯ ನೆರೆ
ಬುತ್ತಿಗಳ್ಳರಿಗೇಕೆ ಸತ್ಯವ್ರತ ಸದಾಚಾರ
ದತ್ತ ಪುತ್ರನಿಗೇತಕ್ಕೆ ಪಿತೃ
ಭಕ್ತಿ ಮಾಲ್ಯಸುಗಂಧವನಿತಾ
ಸಕ್ತರಿಗೆ ಪರತತ್ವ ಚಿಂತೆಯದೇಕೆ ಹೇಳೆಂದ

ಇಂಥ ಪದ್ಯಗಳಲ್ಲಿ ಒಂದು ವಿಚಾರವನ್ನು ಸ್ಪಷ್ಟಪಡಿಸಲು ಹಲವು ದೃಷ್ಟಾಂತಗಳು ಬರುತ್ತವೆ. ಒಮ್ಮೊಮ್ಮೆ ಒಂದೇ ದೃಷ್ಟಾಂತವು ಇಡೀ ಪದ್ಯವನ್ನು ಆವರಿಸುವುದುಂಟು.

ಊರದಾರಿಯು ನಡೆವ ಮನುಜರು
ನೀರಡಿಸುತರವಟಿಗೆಯನು ನೆರೆ
ಸಾರಿ ತೃಷೆಯನು ಕಳೆದು ಸಖ್ಯದಲೆಲ್ಲರೊಡಗೂಡಿ
ಬೇರೆ ಬೇರಿಹ ತಮ್ಮ ದಾರಿಯ
ಸಾರಿ ಹೋಹಂದದಲಿ ಸತಿಸುತ
ರಾರಿಗಾರು ? ಋಣಾನುಬಂಧವು ತೀರಲವರಿವರು

ಬಸವಣ್ಣನವರ ವಚನಗಳನ್ನು ತನ್ನ ಪದ್ಯಗಳಲ್ಲಿ ಸ್ವಲ್ಪವೂ ಬದಲಾಯಿಸದೆ ಮಹಲಿಂಗರಂಗನು ಧಾರಳವಾಗಿ ಬಳಸಿಕೊಂಡಿದ್ದಾನೆ. 'ಮೊದಲೆ

ಮರ್ಕಟ ಮೇಲೆ ಮದ್ಯದ ಮದವೆದೆಯೆ ಹಿಡಿದಿರಲು', 'ಹುತ್ತವ ಬಡಿದರೆ ಹಾವು ಸಾವುದೆ', 'ಹರಕೆಗೆಂದೇ ತಂದ ಕುರಿ ತಾನರಿಯದಕಟಾ ಕೊಲುವ ರೆಂಬುದ', ಮುಂತಾದ ಅನೇಕ ಹೇಳಿಕೆಗಳನ್ನು ಇದಕ್ಕೆ ನಿದರ್ಶನವಾಗಿ ಕೊಡ ಬಹುದು. ಮಹಲಿಂಗರಂಗನ ಕನ್ನಡಾಭಿಮಾನ ಕೇವಲ ಬಾಯಿಮಾತಿನದಲ್ಲ. ಅವನ ಶೈಲಿಯೇ ಅದನ್ನು ಸಾರುತ್ತದೆ.

ಸುಲಿದ ಬಾಳೆಯ ಹಣ್ಣಿನಂದದಿ
ಕಳೆದ ಸಿಗುರಿನ ಕಬ್ಬಿನಂದದಿ
ಅಳಿಸಿದುಷ್ಣದ ಹಾಲಿನಂದದಿ ಸುಲಭವಾಗಿರ್ಪ
ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೆ ಸಂಸ್ಕೃತದಲಿನ್ನೇನು

ಮೇಲಿನ ಪದ್ಯವನ್ನು ಕೇಳದ ಕನ್ನಡಾಭಿಮಾನಿಗಳು ವಿರಳವೇ ಎನ್ನ ಬೇಕು. ಅದ್ವೈತ ತತ್ತ್ವವನ್ನು ಈ ಕೃತಿ ಸರಳವಾಗಿ ಸಮರ್ಥವಾಗಿ ಕಾವ್ಯ ಮಯವಾಗಿ ವಿವರಿಸುತ್ತದೆ. ಆದರೆ 'ಅನುಭವಾಮೃತ'ದ ಕೆಲವು ಜೀವನ ವಿರೋಧಿನಿಲುವುಗಳು ಸಮಾಜದ ಹಿತಕ್ಕೆ ಸಹಕಾರಿಯಾದವುಗಳಲ್ಲವೆಂಬ ವಿಚಾರವನ್ನೂ ಇಲ್ಲಿ ಗಮನಿಸಬೇಕಾಗುತ್ತದೆ. ವಚನಕಾರರೂ ಮತ್ತು ಕೀರ್ತನಕಾರರಲ್ಲಿರುವ ಮಾನವೀಯತೆ ಇಲ್ಲಿಲ್ಲವೆನ್ನುವುದೇ ಇದರ ಪರಿಮಿತಿ.

ಮಹಲಿಂಗರಂಗನ ಸಮಕಾಲೀನನೇ ಆದ ಜಗನ್ನಾಥದಾಸನು ದಾಸ ಪರಂಪರೆಯ ಹಿರಿಯರಲ್ಲಿ ಒಬ್ಬ. ಆತನ ತಂದೆ ತಾಯಿಗಳು ನರಸಪ್ಪ ಮತ್ತು ಲಕ್ಷ್ಮೀಬಾಯಿ. 'ತಂತ್ರಸಾರ', 'ತತ್ತ್ವಸುವ್ವಾಲಿ', 'ಹರಿಕಥಾಮೃತಸಾರ' ಗಳು ಆತನ ಕೃತಿಗಳು. 'ಹರಿಕಥಾಮೃತಸಾರ'ವು ಭಾಮಿನಿ ಷಟ್ಪದಿಯಲ್ಲಿದೆ. ಜಗನ್ನಾಥದಾಸ ಶ್ರೇಷ್ಠ ಕೀರ್ತನಕಾರರಲ್ಲಿ ಒಬ್ಬ. ವಿಜಯದಾಸ, ಗೋಪಾಲ ದಾಸರು ಜಗನ್ನಾಥದಾಸನನ್ನು ಅನುಗ್ರಹಿಸಿದ ಹಿರಿಯರು. ಮಹಾರೋಗ ವೊಂದು ಈತನಿಗೆ ಬಂದಿದ್ದಾಗ ದೈವ ಸಹಾಯದಿಂದ ಬದುಕಿಸಿದವರು.

'ಹರಿಕಥಾಮೃತಸಾರ' ಮಧ್ವಮತತತ್ತ್ವಗಳನ್ನು ಸರಳವಾಗಿ ವಿವರಿಸುವ ಕನ್ನಡ ಕಾವ್ಯ. ಮಹಲಿಂಗರಂಗನ 'ಅನುಭವಾಮೃತ'ದಂತೆ ತಿಳಿಯಾದ ಕನ್ನಡ, ದೃಷ್ಟಾಂತ ಸಮೃದ್ಧಿಗಳಿಂದ ಈ ಕೃತಿ ಜನಪ್ರಿಯವಾಗಿದೆ.

ಕಾದ ಕಬ್ಬಿಣ ಹಿಡಿದು ಬಡೆಯಲು
ವೇದನೆಯು ಲೋಹಗಳಿಗಲ್ಲದೆ
ಆದುದೇನೈ ಅನಲಗಾ ವ್ಯಥೆಯೇನು ಮಾಡಿದರು
ಆದಿ ದೇವನು ಸರ್ವ ಜೀವರ
ಕಾದುಕೊಂಡಿಹನೊಳಹೊರಗೆ ದುಃ
ಖಾದಿಗಳು ಸಂಬಂಧವಾಗುವುದೇನೊ ಚಿನ್ಮಯಗೆ

ತೋಟಿಗನು ಭೂಮಿಯೊಳು ಬೀಜವ
ನಾಟಬೇಕೆಂದೆನುತೆ ಹಿತದಲಿ
ಮೋಟಿಯಿಂ ನೀರೆತ್ತಿ ಸಸಿಗಳ ಸಂತೈಸುವಂತೆ
ಪಾಟುಪಡದಲೆ ಜಗದಿ ಜೀವರ
ಘೋಟಕ್ಯಾಸನು ಸೃಜಿಸಿ ಯೋಗ್ಯತೆ
ದಾಟಗೊಡದಲೆ ಸಲುಹುತಿಪ್ಪನು ಸರ್ವಕಾಲದಲಿ

ಮಲಗಿ ಪರಮಾದರದಿ ಪಾಡಲು
ಕುಳಿತು ಕೇಳುವ ಕುಳಿತು ಪಾಡಲು
ನಿಲುವ ನಿಂತರೆ ನಲಿವ ನಲಿದರೆ ಒಲಿವೆನಿಮಗೆಂಬ
ಸುಲಭನೋ ಹರಿ ತನ್ನವರ ನರೆ
ಘಳಿಗೆ ಬಿಟ್ಟಗಲನು ರಮಾಧವ
ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ

ಹತ್ತೊಂಬತ್ತನೆ ಶತಮಾನದ ಕೊನೆಯ ಭಾಗದಲ್ಲಿ ಜೀವಿಸಿದ್ದ ಮುದ್ದಣ್ಣನ ಜೀವನ ಆಧುನಿಕ ಕನ್ನಡ ಸಾಹಿತ್ಯದಲ್ಲಿ ದಂತಕಥೆಗಳಾಯ್ತು. ತನ್ನ ಕೃತಿಗಳ ಕರ್ತೃತ್ವವನ್ನೇ ಮುಚ್ಚಿಟ್ಟು ಅತೀವ ಬಡತನದಿಂದ ಚಿಕ್ಕ ವಯಸ್ಸಿನಲ್ಲಿ ಅಕಾಲಮರಣಕ್ಕೆ ತುತ್ತಾದುದರಿಂದ ಮುದ್ದಣ್ಣನನ್ನು ಕುರಿತು ವಿಮರ್ಶಕರು ಸ್ವಾಭಾವಿಕವಾಗಿಯೇ ಉದಾರಮನಸ್ಕರಾಗಿಬಿಟ್ಟರು. ಕವಿಯ ಮೇಲಿನ ಕರುಣೆ ಅವನ ಕೃತಿಗಳಿಗೂ ಅನ್ವಯವಾಗಿ ಈತ ಮಹಾಕವಿಯಾಗಿ ಬಿಟ್ಟಿದ್ದಾನೆ. ವಾಸ್ತವವಾಗಿ ಗದ್ಯಕೃತಿಯಾದ 'ಶ್ರೀರಾಮಾಶ್ವಮೇಧ'ವನ್ನು ಳಿದ ಅವನ ಇತರ ಕಾವ್ಯಗಳು ಸಾಧಾರಣ ವರ್ಗಕ್ಕೆ ಸೇರುತ್ತವೆ. ಆತನು ರಚಿಸಿರಬಹುದಾದ ಅನೇಕ ಕೃತಿಗಳಲ್ಲಿ ಮೂರು ಪ್ರಸಿದ್ಧಿಯನ್ನು ಪಡೆದಿವೆ: 'ಅದ್ಭುತರಾಮಾಯಣ', 'ಶ್ರೀರಾಮಪಟ್ಟಾಭಿಷೇಕ', 'ಶ್ರೀರಾಮಾಶ್ವಮೇಧ'.

ಮುದ್ದಣ್ಣ ಎಂಬುದು ಕವಿಗೆ ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು. ಜನ್ಮನಾಮ ಲಕ್ಷ್ಮೀನಾರಾಯಣಪ್ಪನೆಂದು. ಉಡುಪಿಯ ಬಳಿ

ಇರುವ ಸಂದಳಿಕೆ ಆತನ ಹುಟ್ಟೂರು. ಪಾತಾಳಿ ತಿಮ್ಮಪ್ಪಯ್ಯ ಮತ್ತು ಮಹಲಕ್ಷ್ಮಮ್ಮ ಎಂಬುವರು ತಂದೆ ತಾಯಿಗಳು.

ಮುದ್ದಣ್ಣನ ಮೂರು ಪ್ರಸಿದ್ಧ ಕೃತಿಗಳೂ ರಾಮಾಯಣದ ಕಥಾ ವಸ್ತುವನ್ನೇ ಪಡೆದಿವೆ. 'ಶ್ರೀರಾಮ ಪಟ್ಟಾಭಿಷೇಕ'ವು ವಾರ್ಧಕ ಷಟ್ಪದಿಯಲ್ಲಿದೆ. ಐದು ಸಂಧಿಗಳ ಪುಟ್ಟ ಕಾವ್ಯ. ವಸ್ತುವಿಗೆ ಯಾವುದೇ ಒಂದು ಆಕರವನ್ನೂ, ಆತ ಅನುಸರಿಸಿದಂತೆ ಕಂಡುಬರುವುದಿಲ್ಲ. ಸಂಸ್ಕೃತದ ರಾಮಾಯಣ, ಪದ್ಮಪುರಾಣ ಮತ್ತು ರಘುವಂಶಗಳ ಪ್ರಭಾವವಿದೆ. ರಾವಣನನ್ನು ಕೊಂದು ಅಯೋಧ್ಯೆಗೆ ಹಿಂದಿರುಗಿ ಶ್ರೀರಾಮನು ಪಟ್ಟ ಕಟ್ಟಿಕೊಳ್ಳುವ ಈ ಕಥಾ ರಚನೆಯಲ್ಲಿ ಸಿಂಹಾವಲೋಕನ ಕ್ರಮದಿಂದ ರಾಮಾಯಣದ ಹಿಂದಿನ ಕಥೆಯನ್ನು ಕವಿ ವಿವರಿಸಿದ್ದಾನೆ. ಪುಷ್ಪಕ ವಿಮಾನದಲ್ಲಿ ಲಂಕೆಯಿಂದ ಬರುತ್ತಿರುವಾಗ ದಾರಿಯಲ್ಲಿ ಕಂಡ ಸ್ಥಳಗಳನ್ನು ಶ್ರೀರಾಮನು ಸೀತೆಗೆ ನೆನಪಿಸುತ್ತಾ ವಿವರಿಸಿದನೆಂಬ ಕಲ್ಪನೆ ಚೆನ್ನಾಗಿದೆ. ಶ್ರೀರಾಮನ ಆಗಮನವನ್ನೇ ನಿರೀಕ್ಷಿಸುತ್ತಿದ್ದ ಭರತನ ತವಕವನ್ನು ಕವಿ ತನ್ಮಯವಾಗಿ ವಿವರಿಸಿದ್ದಾನೆ. ಹನುಮಂತನು ರಾಮನ ಆಗಮನದ ಸುದ್ದಿಯನ್ನು ತಿಳಿಸಿದಾಗ ಭರತನ ಪ್ರತಿಕ್ರಿಯೆಯಿದು :

ದಿಟವೆ ನಂಬಲ್ಬಹುದೆ ರಾಘವನ ವಾರ್ತೆಯಂ
ಕಟಕಿಯೇ ಮೇಣ್ಬರಿದೆ ಬಳಲಿಸದಿರಿಂತೆನಗ
ಕಟ ಕಂಡುದೆಲ್ಲಿ ನೀನವನೊಳನು ಬಂಧಮೆಂತಾದುದೇನೆಸಗುತಿಹರು
ಅಟವಿಯಿಂ ಪೊರಟಿಹರೆ ಬಹರೆ ದಾರಿಯೊಳೇಂ ಪೊ
ರಟುದಿಲ್ಲವೇ ರಾಮನೊಳ್ಳಿತಾಗಿಹನೆ ಪ
ರ್ಯಟನದಿಂ ಬಾಡಿಹರೆ ಬರುತುಮಿರ್ಪರೆ ಬಹರೆ ಬಂದರೇ ಪೇಳೆಂದನು

'ಶ್ರೀರಾಮ ಪಟ್ಟಾಭಿಷೇಕ' ಮುದ್ದಣ್ಣನ ಶ್ರೇಷ್ಠಕೃತಿಯಲ್ಲ. ವರ್ಣನೆಯ ಚಮತ್ಕಾರಗಳು ಶ್ಲೇಷಾದಿ ಅಲಂಕಾರಗಳಿಂದ ಕೂಡಿರುವ ಈ ಕೃತಿ ಸಾಧಾರಣಮಟ್ಟದ್ದು. ಶ್ರೀರಾಮ, ಆದಿಶೇಷ, ಮಹಾವಿಷ್ಣು, ಸೀತಾಮಾತೆ, ವಿನಾಯಕ ಮುಂತಾದ ದೇವರುಗಳ ಸ್ತುತಿಯನ್ನು ಶ್ಲೇಷೆಯಿಂದ ಮಾಡಿರುವುದರಿಂದ ಅದರಲ್ಲಿ ಮಹೇಶ್ವರ, ಕೈಲಾಸಪರ್ವತ, ಗರುಡ, ಬ್ರಹ್ಮ ಮುಂತಾದವರೂ ಅಡಕಗೊಂಡಿದ್ದಾರೆ. ಈ ಸಂಗತಿ ಆಯಾ ದೇವತೆಗಳಿಗೆ ಖಂಡಿತ ಸಂತೋಷವನ್ನುಂಟುಮಾಡಿರಲಾರದು. ಕವಿಗಳು ಬಕ, ಕಪಿ, ಆಡು, ಇಲಿ, ನಾಯಿ, ಹುಲಿ, ಹುಚ್ಚ, ವಿದೂಷಕ, ಹಂಸ, ಕೋಗಿಲೆ, ಚಿತ್ರಗಾರ ಮತ್ತು

ವರ್ತಕರ ಒಂದೊಂದು ಗುಣಗಳನ್ನೂ ಹೊಂದಿರುವರೆಂದು ಹೇಳಿದ್ದಾನೆ. ಇದು ನಿಜವೇ ಎಂಬುದನ್ನು ಕವಿಗಳೇ ನಿರ್ಧರಿಸಬೇಕು. ಇಂಥಹ ಚಮತ್ಕಾರ ಕಸರತ್ತುಗಳಿಂದ ಪರಿಪಕ್ವವಾಗಿ ಮುಂದೆ 'ಶ್ರೀರಾಮಾಶ್ವಮೇಧ'ದಂಥ ಉತ್ತಮ ಕೃತಿಯನ್ನು ಆತ ಬರೆದನೆಂದು ತಿಳಿಯಬೇಕಾಗುತ್ತದೆ.

''ಭಕ್ತಿ ವೈರಾಗ್ಯಗಳ ಸತ್ಕಥೆಯಾಗಿ, 'ರಾಮನಾಮಾಮೃತದ ಬಿಂದಿಗೆ' ಯಾಗಿ ಈ ಕೃತಿ ಎಲ್ಲ ಕನ್ನಡಿಗರ ಗೌರವಾದರಗಳಿಗೆ ಎಂದೆಂದಿಗೂ ಪಾತ್ರ ವಾಗಿರುತ್ತದೆ"[2] ಎಂಬ ವಿಮರ್ಶೆಯಲ್ಲಿರುವ ಅತಿಶಯೋಕ್ತಿಯನ್ನು ಒಪ್ಪು ವುದು ಕಷ್ಟವಾಗುತ್ತದೆ. "ಕವಿಯ ಎರಡನೆಯ ಕಾವ್ಯವಾದ 'ರಾಮಪಟ್ಟಾಭಿ ಷೇಕ'ದ ಕಥಾವಸ್ತು ಹೆಚ್ಚು ಉದಾತ್ತವಾದುದು ; ಕಾವ್ಯಯೋಗ್ಯವಾದುದು; ಭಾವಪೂರ್ಣವಾದುದು''[3] ಎಂಬುದೇನೋ ನಿಜ. ಆದರೆ ಈ ವಸ್ತುವನ್ನು ಕವಿ ಉದಾತ್ತವಾಗಿ ನಿರ್ವಹಿಸಿದ್ದಾನೆಂದು ಹೇಳುವಂತಿಲ್ಲ.

ಭಾವಗೀತೆಯು ಉದಯದೊಡನೆ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಒಂದು ಹೊಸ ಪರಂಪರೆ ಮೊದಲಾಯಿತು. ಇಂಗ್ಲಿಷ್ ಸಾಹಿತ್ಯ ಮತ್ತು ವಿಜ್ಞಾನ ಗಳ ಪ್ರಭಾವ, ಭಾರತೀಯ ಸುಧಾರಣಾವಾದಿಗಳ ಕಳಕಳಿ, ಸ್ವಾತಂತ್ರ್ಯ ಚಳು ವಳಿ, ಭಾರತೀಯ ತಳಹದಿಯ ಮೇಲೆ ಪ್ರತಿಪಾದಿಸಲ್ಪಟ್ಟ ಆಧುನಿಕ ತತ್ತ್ವ ಜ್ಞಾನ—ಇವೆಲ್ಲವೂ ಸೇರಿ, ಹೊಸಗನ್ನಡ ಕವಿಗಳ ಸಮಸ್ಯೆ ಬಹುಮುಖಿ ವಾದುದು. ಕೊನೆಯಪಕ್ಷ ನಾಗರಿಕ ಜನಜೀವನವಂತೂ ಆಮೂಲಾಗ್ರ ಬದ ಲಾವಣೆ ಹೊಂದುವ ಹವಣಿಕೆಯಲ್ಲಿತ್ತು. ಹಿಂದಿನ ಸಾಹಿತ್ಯ ರೂಪಗಳು ಈ ಬಗೆಯ ಸಂಕೀರ್ಣ ಬದುಕು ಮತ್ತು ಅನುಭವಗಳನ್ನು ಸಮರ್ಥವಾಗಿ ಅಭಿ ವ್ಯಕ್ತಿಸಲು ಸಾಲದಾದವು. ಕಾದಂಬರಿ, ಸಣ್ಣಕತೆಗಳೊಡನೆ ಭಾವಗೀತೆಯೆಂಬ ಹೊಸಸಾಹಿತ್ಯರೂಪವೊಂದನ್ನು ಪಾಶ್ಚಾತ್ಯರಿಂದ ಸ್ವೀಕರಿಸಿ ಕನ್ನಡದ ನೆಲದಲ್ಲೂರಿ ಅದನ್ನು ಬೆಳೆಸಲಾಯಿತು. ಈ ಸಸಿಯನ್ನು ಪೋಷಿಸಿ ಬೆಳೆಸಿ ದವರು ಹಲವರಾದರೂ ಬಿ. ಎಂ. ಶ್ರೀಕಂಠಯ್ಯನವರ 'ಇಂಗ್ಲಿಷ್ ಗೀತೆಗಳು' ಈ ದಿಸೆಯಲ್ಲಿ ಒಂದು ಪ್ರಮುಖ ಘಟ್ಟ. ಮೊದಮೊದಲು ಇಂಗ್ಲಿಷ್‌ನ ಅನುವಾದಗಳು ಬಂದವು. ಮೂಲ ಛಂದಸ್ಸು ಯಾವುದಿದ್ದರೂ ಕನ್ನಡದ ರೂಪಾಂತರದಲ್ಲಿ ಕಂದ, ವೃತ್ತ, ಷಟ್ಪದಿ, ಸಾಂಗತ್ಯಗಳು ವಿಜೃಂಭಿಸಿದವು. ಎಸ್. ಜಿ. ನರಸಿಂಹಾಚಾರ್ಯರು ಷೇಕ್ಸ್‌ಪಿಯರನ 'ಟೆಂಪೆಸ್ಟ್' ಎಂಬ ನಾಟಕದಿಂದ ಅನುವಾದಿಸಿರುವ ಎರಡು ಷಟ್ಪದಿಗಳಲ್ಲಿ ಒಂದನ್ನು ಇಲ್ಲಿ ಉದಾ ಹರಿಸಬಹುದಾಗಿದೆ :

ಕಡಲ ತಳದೊಳು ನಿನ್ನ ತಂದೆಯು
ಕೆಡೆದಿಹನು; ಮೇಣವನ ಮೂಳೆಯು
ಗಡಣವಿದೆ ಹವಳಂಗಳಾದುವು, ಕಣ್ಣು ಮುತ್ತಾಯ್ತು
ಒಡಲೊಳಗೆ ಕೆಡುವೆಲ್ಲ ವಸ್ತುಗ
ಳೊಡನೆ ಕಡಲೈಸಿರಿಗೆ ಸಲ್ಲುವು
ಪಡೆದಪುವು ಪೊಸತಪ್ಪ ಸಂಪದದೊಂದು ಪೆರ್ಚುಗೆಯ[4]

ಇಂಗ್ಲಿಷ್ ಗೀತೆಗಳಲ್ಲಿರುವ 'ಹೊಳೆಕೆರೆ' ಎಂಬ ಒಂದು ಪದ್ಯ ಕುಸುಮ ಷಟ್ಪದಿಯಲ್ಲಿದೆ. ವರ್ಡ್ಸ್‌ವರ್ತ್ ಕವಿಯ ಪದ್ಯವೊಂದರ ಅನುವಾದವಿದು :

ಹೊಳೆ ಬೆಳಗಿ ಜಾರುವುದು,
ಗಿಳಿ ನೆಗೆದು ಹಾರುವುದು,
ಬೆಳೆದ ಹೊಲ ಬಿಸಿಲಲ್ಲಿ ಮಲಗಿರುವುದು,
ತಿಳಿಯಾದ ಬಾನಿನಲಿ
ಬಿಳಿಮುಗಿಲು ತೇಲುವುದು,
ಮಳೆ ಸೋತ ದಳದಂತೆ ಕದ್ದಡಗಿತು !

ಹೊಸ ಕಾವ್ಯದಲ್ಲಿ ಜನಪದ ಛಂದಸ್ಸು ಬಳಕೆಯಾಯಿತು. ತೀರಾ ಸರಳವಾದ ಸಂಗತಿಗಳನ್ನು ಹಳೆಯ ಛಂದೋರೂಪಗಳಲ್ಲಿ ಹೇಳಿದರು. ಉದಾಹರಣೆಗೆ 'ಕಾಲುಗಾಡಿ'ಯ ಸವಾರಿಯ ಅನುಭವವನ್ನು ಹೇಳುವ ಸಿದ್ಧೇಶ್ವರ ಮಳೀಮಠರ ಈ ಪದ್ಯವನ್ನು ನೋಡಬಹುದು.

ಬಲು ಭಯದಿ ಸತ್ತಿರುವ ನರಗಳ
ಸೆಳೆದು ಬಿಗಿದನು ಕಚ್ಚಿ ದವಡೆಯ
ಉಲುಕದುಸುರನು ಬಿಡದಲೆದೆಯನು ಗಟ್ಟಿ ಪಿಡಿದಿಹನು
ನಿಲದೆ ಗಣಗಣ ಗಂಟೆ ಹೊಡೆಯುತ
ಹಲವು ಕುತ್ತನು ದಾಂಟಿ ಗುಡ್ಡದ
ಪೊಳಲ ಹೊರಗಿರ್ಪೆಳುಕಲಿನ ಮಾರ್ಗವಲಿ ನಡೆತಂದ[5]

ಪದ್ಯಗಳಲ್ಲಿ ಪ್ರಾಸತ್ಯಾಗದ ನಿರ್ಧಾರಮಾಡಿದ್ದು ಹೊಸಕಾವ್ಯದ ಇತಿಹಾಸದಲ್ಲಿ ಒಂದು ಮಹತ್ವದ ಘಟ್ಟ. ಆದಿಪ್ರಾಸ ಹೋದರೂ ಅಂತ್ಯಪ್ರಾಸ ಉಳಿಯಿತು. ಲಯ ಭಾವಕ್ಕನುಸಾರವಾಯಿತು. ಹೊಸಬಗೆಯ ಕಾವ್ಯರೂಪಗಳು ಹುಟ್ಟಿ ಕೊಂಡವು. ಹಿಂದಿನ ಛಂದೋರೂಪಗಳು ಗುರುತು ಕೂಡ ತಿಳಿಯದಂತೆ ಹೊಸ ರೂಪಗಳಲ್ಲಿ ಅಡಗಿಹೋದವು. ಹೊಸ ಛಂದಸಿನ್ನ

ಲಯದ ಮೇಲೆ ಷಟ್ಪದಿಯ ಪ್ರಭಾವವಿದೆ. ಹಳೆಯ ಛಂದೋರೂಪಗಳನ್ನು ಬಳಸಿಕೊಂಡ ಹೊಸ ಪ್ರಯೋಗಗಳು ಈ ಕಾಲದಲ್ಲಿ ಸಾಕಷ್ಟು ನಡೆದಿವೆ. ಷಟ್ಪದಿಯಲ್ಲಿಯೇ ಪದ್ಯಗಳನ್ನು ರಚಿಸಿದವರಲ್ಲಿ ಎಸ್. ಜಿ. ನರಸಿಂಹಾಚಾರ್ಯರು, ಸಾಲಿ ರಾಮಚಂದ್ರರಾಯರು, ದ.ರಾ. ಬೇಂದ್ರೆ ಮುಂತಾದ ನವೋದಯ ಕವಿಗಳು ಪ್ರಮುಖರು. ಮುಂದಿನವರಲ್ಲಿ ಗೋಪಾಲಕೃಷ್ಣ ಅಡಿಗ, ಕೆ. ಎಸ್. ನರಸಿಂಹಸ್ವಾಮಿ, ಚೆನ್ನವೀರ ಕಣವಿಯವರು ಕೆಲವು ಷಟ್ಪದಿಗಳನ್ನು ಬರೆದಿದ್ದಾರೆ.

**ಅಡಿ ಟಿಪ್ಪಣಿಗಳು**

1 ರಂ. ಶ್ರೀ. ಮುಗಳಿ : ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ಪು. 218
2 ಎಸ್.ವಿ. ಪರಮೇಶ್ವರಭಟ್ಟ : ಶ್ರೀರಾಮಪಟ್ಟಾಭಿಷೇಕಂ, ಪು. 39
3 ತ. ಸು. ಶಾಮರಾಯ : ಮುದ್ದಣ, ಪು. 19
4 ಎಸ್. ಅನಂತನಾರಾಯಣ : ''ಹೊಸಗನ್ನಡ ಕವಿತೆಯ ಮೇಲೆ ಪು. 52 ಇಂಗ್ಲಿಷ್ ಕಾವ್ಯದ ಪ್ರಭಾವ,''
5 ರಾ. ಯ. ಧಾರವಾಡಕರ : ಹೊಸಗನ್ನಡ ಸಾಹಿತ್ಯದ ಉದಯಕಾಲ ಪು. 56

## ಅಭ್ಯಾಸ ಸೂಚಿ

| | |
|---|---|
| ಕರ್ನಾಟಕ ಕವಿ ಚರಿತೆ ಸಂ-1, 2,3 : | ಆರ್. ನರಸಿಂಹಾಚಾರ್ |
| ಕನ್ನಡ ಸಾಹಿತ್ಯ ಚರಿತ್ರೆ : | ರಂ. ಶ್ರೀ. ಮುಗಳಿ |
| ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು : | ರಂ. ಶ್ರೀ. ಮುಗಳಿ |
| ಕನ್ನಡದಲ್ಲಿ ಷಟ್ಪದಿ ಸಾಹಿತ್ಯ : | ಕರ್ನಾಟಕ ವಿಶ್ವವಿದ್ಯಾಲಯ |
| ಕನ್ನಡ ಛಂದೋ ವಿಕಾಸ : | ಡಿ. ಎಸ್. ಕರ್ಕಿ |
| ಕನ್ನಡ ಕೈಪಿಡಿ, ಸಂ. 1 : | ಟಿ. ಶ್ರೀನಿವಾಸಾಚಾರ್ಯರ ಭಾಗ |
| ಸಂಶೋಧನ ತರಂಗ - 2 : | ಎಂ. ಚಿದಾನಂದ ಮೂರ್ತಿ |
| ಮಹಾಕವಿ ರಾಘವಾಂಕ : | ಆರ್. ಸಿ. ಹಿರೇಮಠ |
| ಪರಿಶೀಲನ : | ಜಿ. ಎಸ್. ಶಿವರುದ್ರಪ್ಪ |
| ಕಾವ್ಯವಿಹಾರ : | ಕೆ. ವಿ. ಪುಟ್ಟಪ್ಪ |
| ಭೀಮಕವಿ : | ಎಚ್. ತಿಪ್ಪೆರುದ್ರಸ್ವಾಮಿ |
| ಕುಮಾರವ್ಯಾಸ ಪ್ರಶಸ್ತಿ : | ಕರ್ನಾಟಕ ಸಂಘ, ಮಹಾರಾಜ ಕಾಲೇಜು |
| ಕುಮಾರವ್ಯಾಸ : | ಸಂ. ವಿ. ಸೀತಾರಾಮಯ್ಯ |
| ಕುಮಾರವ್ಯಾಸ : | ಎಸ್.ವಿ. ರಂಗಣ್ಣ |
| ಶೂನ್ಯ ಸಂಪಾದನೆಯನ್ನು ಕುರಿತು : | ಎಂ. ಚಿದಾನಂದಮೂರ್ತಿ |
| ಮಹಾತ್ಮ ಕನಕದಾಸ ಪ್ರಶಸ್ತಿ : | ಕನಕದಾಸ ನಾಲ್ಕನೆ ಶತಮಾನೋತ್ಸವ ಸಮಿತಿ |
| ಕವಿಲಕ್ಷ್ಮೀಶ : | ಕರ್ನಾಟಕ ಸಂಘ, ಚಿಕ್ಕಮಗಳೂರು |
| ಶೈಲಿ – 2 : | ಎಸ್. ವಿ. ರಂಗಣ್ಣ |
| ಶ್ರೀ ಕವಿ ಲಕ್ಷ್ಮೀಶ : | ಜಿ. ಎಸ್. ಸಿದ್ಧಲಿಂಗಯ್ಯ |
| ಶ್ರೀ ಜಗನ್ನಾಥದಾಸರು : | ಕೆ. ಎಂ. ಕೃಷ್ಣರಾವ್ |
| ಮುದ್ದಣ : | ತ. ಸು. ಶಾಮರಾಯ |
| ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ : | ಎಸ್. ಅನಂತನಾರಾಯಣ |
| ಹೊಸಗನ್ನಡ ಸಾಹಿತ್ಯದ ಉದಯಕಾಲ : | ರಾ. ಯ. ಧಾರವಾಡಕರ |
| ಹರಿಶ್ಚಂದ್ರ ಕಾವ್ಯ : | ಸಂ. ಎಸ್. ಬಸಪ್ಪ, ಎನ್. ಬಸವಾರಾಧ್ಯ |

| | | |
|---|---|---|
| ಹರಿಶ್ಚಂದ್ರ ಕಾವ್ಯ ಸಂಗ್ರಹ | : | ಸಂ. ಎ. ಆರ್. ಕೃಷ್ಣಶಾಸ್ತ್ರಿ<br>ಟಿ. ಎಸ್. ವೆಂಕಣ್ಣಯ್ಯ |
| ಸಿದ್ಧರಾಮ ಚರಿತೆಯ ಸಂಗ್ರಹ | : | ಸಂ. ಡಿ. ಎಲ್. ನರಸಿಂಹಾಚಾರ್ |
| ವೀರೇಶ ಚರಿತೆ | : | ಸಂ. ಬಿ. ಶಿವಮೂರ್ತಿ ಶಾಸ್ತ್ರಿ |
| ಸೋಮನಾಥ ಚರಿತೆ | : | ಸಂ. ಆರ್. ಸಿ. ಹಿರೇಮಠ<br>ಎಂ. ಎಸ್. ಸುಂಕಾಪುರ |
| ಕುಮುದೇಂದು ರಾಮಾಯಣ | : | ಸಂ. ಕೆ. ಜಿ. ಕುಂದಣಗಾರ |
| ಪದ್ಮರಾಜ ಪುರಾಣ | : | ಸಂ. ಆರ್. ಸಿ. ಹಿರೇಮಠ |
| ಬಸವ ಪುರಾಣ | : | ಸಂ. ಆರ್. ಸಿ. ಹಿರೇಮಠ |
| ಕರ್ಣಾಟ ಭಾರತ ಕಥಾಮಂಜರಿ | : | ಸಂ. ಕೆ. ವಿ. ಪುಟ್ಟಪ್ಪ<br>ಮಾಸ್ತಿ ವೆಂಕಟೇಶಯ್ಯಂಗಾರ್ |
| ಕುಮಾರವ್ಯಾಸ ಭಾರತ (ಕಾವ್ಯಸಂಗ್ರಹ) | : | ತ. ಸು. ಶಾಮರಾಯ |
| ಪ್ರಭುಲಿಂಗ ಲೀಲೆ | : | ಲಿಂಗಾಯಿತ 'ವಿದ್ಯಾಭಿವೃದ್ಧಿ ಸಂಸ್ಥೆ' ಧಾರವಾಡ |
| ಪ್ರಭುಲಿಂಗ ಲೀಲೆಯ ಸಂಗ್ರಹ | : | ಸಂ. ಎಂ. ಎಸ್. ಬಸವಲಿಂಗಯ್ಯ<br>ಎಂ. ಆರ್. ಶ್ರೀನಿವಾಸಮೂರ್ತಿ |
| ಶೂನ್ಯ ಸಂಪಾದನೆ | : | ಸಂ. ಎಲ್. ಬಸವರಾಜು |
| ಜೀವಂಧರ ಚರಿತೆ | : | ಸಂ. ಬಿ. ಎಸ್. ಕುಲಕರ್ಣಿ |
| ಶಿವತತ್ವ ಚಿಂತಾಮಣಿ | : | ಸಂ. ಪಂ. ಎಸ್. ಬಸಪ್ಪ |
| ಮನೋ ವಿಜಯ | : | ಸಂ. ಎಂ. ಎಸ್. ಸುಂಕಾಪುರ<br>ಪಂ. ನಾಗಭೂಷಣ ಶಾಸ್ತ್ರಿ |
| ಸಿಂಗಿರಾಜ ಪುರಾಣ | : | ಸಂ. ಎಚ್. ದೇವೀರಪ್ಪ |
| ತೊರವೆ ರಾಮಾಯಣ ಸಂಗ್ರಹ | : | ಸಂ. ಎಲ್. ಬಸವರಾಜು<br>ಎನ್. ಬಸವಾರಾಧ್ಯ |
| ತೊರವೆ ರಾಮಾಯಣ | : | ಸಂ. ಬಿ. ಎಸ್. ಸಣ್ಣಯ್ಯ |
| ಜಯನೃಪ ಕಾವ್ಯ ಸಂಗ್ರಹ | : | ಸಂ. ಹಂ. ಪ. ನಾಗರಾಜಯ್ಯ |
| ಸಮ್ಯಕ್ತ್ವ ಕೌಮುದಿ ಸಂಗ್ರಹ | : | ಸಂ. ಬಿ. ಎಸ್. ರುಕ್ಕಮ್ಮ<br>ಪ. ವಿ. ಚಂದ್ರಶೇಖರ |
| ಭಾವ ಚಿಂತಾರತ್ನ | : | ಸಂ. ಸಿ. ಮಹಾದೇವಪ್ಪ |
| ಮಹಾದೇವಿಯಕ್ಕನ ಪುರಾಣ | : | ಸಂ. ಬಿ. ನಂ. ಚಂದ್ರಯ್ಯ |
| ಕನ್ನಡ ಭಾಗವತ | : | ಸಂ. ಕೆ. ವೆಂಕಟರಾಮಪ್ಪ |
| ನಳಚರಿತ್ರೆ | : | ಸಂ. ದೇ. ಜವರೇಗೌಡ |
| ಹರಿಭಕ್ತಸಾರ | : | ಸಂ. ಬಿ. ಶಿವಮೂರ್ತಿಶಾಸ್ತ್ರಿ<br>ಕೆ. ಎಂ. ಕೃಷ್ಣರಾವ್ |

| | | |
|---|---|---|
| ಕನ್ನಡ ಜೈಮಿನಿ ಭಾರತ | : | ಸಂ. ದೇವುಡು ನರಸಿಂಹಶಾಸ್ತ್ರಿ<br>ಬಿ. ಶಿವಮೂರ್ತಿಶಾಸ್ತ್ರಿ |
| ಜೈಮಿನಿ ಭಾರತ ಸಂಗ್ರಹ | : | ಸಂ. ತ. ಸು. ಶಾಮರಾಯ |
| ಚೆನ್ನಬಸವಪುರಾಣ | : | ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ,<br>ಧಾರವಾಡ. |
| ರಾಘವಾಂಕ ಚಾರಿತ್ರ | : | ಸಂ. ಸ. ಸ. ಮಾಳವಾಡ |
| ಪ್ರೌಢರಾಯನ ಕಾವ್ಯ | : | ಸಂ. ಸಂ. ಶಿ. ಭೂಸನೂರು ಮಠ |
| ಶ್ರೀ ಹರಿಕಥಾಮೃತಸಾರ | : | ಸಂ. ಕೆ. ಎಂ. ಕೃಷ್ಣರಾವ್ |
| ಅನುಭವಾಮೃತ | : | ಸಂ. ಹೊಸಕೆರೆ ಚಿದಂಬರಯ್ಯ |
| ಶ್ರೀರಾಮ ಪಟ್ಟಾಭಿಷೇಕಂ | : | ಸಂ. ಎಸ್. ವಿ. ಪರಮೇಶ್ವರಭಟ್ಟ |
| ಇಂಗ್ಲಿಷ್ ಗೀತಗಳು | : | ಬಿ. ಎಂ. ಶ್ರೀಕಂಠಯ್ಯ |

## ತಪ್ಪೋಲೆ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ಪರಿವಿಡಿ | 7 | ಲಕ್ಷ್ಮೀಪ | ಲಕ್ಷ್ಮೀಶ |
| 5 | 8 | ಸಂಗಮ | ಸಂಗಮೆ |
| 11 | 19 | ಕ್ರೃತಿ | ಕೃತಿ |
| 19 | 9 | ಬಟ್ಟ | ಬಿಟ್ಟ |
| 22 | 11 | ಊಹ | ಮಿಾಹ |
| 23 | 8 | ಚಾವಾಟಿ | ಚಾವಟಿ |
| 25 | 15 | ಹಿಂದಕ್ಕಿ | ಹಿಂದಿಕ್ಕಿ |
| 25 | 22 | ಒತ್ತಾಯ | ಬತ್ತಾಯ |
| 26 | 11 | ಪಿಡಿರ | ಪಿಡಿದ |
| 27 | 4 | ನಾಡುಗಾಡು | ಸುಡುಗಾಡು |
| 27 | 13 | ಕ್ಷೇತ್ರ | ಕ್ಷತ್ರ |
| 28 | 4 | ಕವಿಯ | ಕವಿಯು |
| 28 | 9 | ಮೋರೆ | ಮೇರೆ |
| 34 | 18 | ವಟವಟಿಸು | ಅಟವಟಿಸು |
| 35 | 14 | ಕಮಡ | ಕಮಠ |
| 37 | 12 | ನನಮೊತ್ತ | ನನೆಯೊತ್ತೆ |
| 39 | 5 | ಕಥವಸ್ತು | ಕಥಾವಸ್ತು |
| 47 | 29 | ಹೆಂಡದ | ಹೆಂದದ |
| 75 | 20 | ಹರನ | ಹದನ |
| 82 | 1 | ಸಮಾಗದು | ಸಮಾಗಮ |
| 89 | 12 | ರತಿಕರ | ರಥಿಕರ |
| 102 | 13 | ವೇದ | ಮೊದ |
| 143 | 20 | ಮುಲಗಿದ | ಮಲಗಿದ್ದ |
| 144 | 3 | ಧರಣಿಯ | ಭರಣಿಯ |
| 147 | 2 | ಸೇರದಂತೆ | ಸೇರಿದಂತೆ |
| 170 | 18 | ಮನವನ್ನು | ವನವನ್ನು |
| 182 | 23 | ಹಟ್ಟುಗುಣ | ಹುಟ್ಟುಗುಣ |

# ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ

ಒಂದು ಸಾವಿರ ವರ್ಷಕ್ಕೂ ಮೀರಿದ ಕನ್ನಡ ಸಾಹಿತ್ಯದ ಇತಿಹಾಸವನ್ನು ಸರಳವಾಗಿ, ನಿರ್ದುಷ್ಟವಾಗಿ ಮತ್ತು ಆಕರ್ಷಕವಾಗಿ, ಸಾಮಾನ್ಯರಿಗೆ ಪರಿಚಯ ಮಾಡಿಕೊಡ ಬೇಕೆಂಬುದೇ ಈ ಸಂಪುಟಗಳ ಉದ್ದೇಶ. ಇಲ್ಲಿ 'ಸಾಮಾನ್ಯರು' ಎಂದರೆ, ವಿದ್ವಾಂಸರಲ್ಲದ, ಆದರೆ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯ ಬಗೆಗೆ ತಕ್ಕಮಟ್ಟಿಗೆ ಆಸಕ್ತಿ-ಅಭಿರುಚಿ ಯನ್ನುಳ್ಳ ಓದುಗರು ಎಂದು ಅರ್ಥ.

ಈ ಹತ್ತು ಸಂಪುಟಗಳ ವಿಶೇಷವೆಂದರೆ, ಇಡೀ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಚಂಪೂ, ಶಾಸ್ತ್ರ ಸಾಹಿತ್ಯ, ವಚನ, ಷಟ್ಪದಿ ಹೀಗೆ ಪ್ರಮುಖವಾದ ಸಾಹಿತ್ಯ ರೂಪಗಳನ್ನು ಮೂಲಮಾನವನ್ನಾಗಿ ಮಾಡಿಕೊಂಡು ಬರೆದದ್ದು ಇದೇ ಮೊದಲು. ಮತ್ತು ಈ ಬರವಣಿಗೆ ಸಾಧ್ಯವಾದಮಟ್ಟಿಗೆ ಇದುವರೆಗೂ ಉಪಲಬ್ಧವಾದ ಸಾಮಗ್ರಿಯನ್ನು ಬಳಸಿ ಕೊಳ್ಳುವುದಲ್ಲದೆ, ಕೆಲವು ಸಂಪುಟಗಳಲ್ಲಿ ಹೊಸ ದೃಷ್ಟಿಕೋನವನ್ನೂ ಪ್ರತಿಪಾದಿಸುವಂತೆ ರಚಿತವಾಗಿದೆ. ಈ ಹತ್ತು ಕಿರು ಸಂಪುಟಗಳನ್ನು ಓದಿದ ಯಾರಿಗಾದರೂ, ಕನ್ನಡ ಸಾಹಿತ್ಯದ ಸಾಧನೆಯ ಪರಿಚಯ ತಕ್ಕಮಟ್ಟಿಗೆ ಆಗುವುದೆಂಬುದರಲ್ಲಿ ಅನುಮಾನವಿಲ್ಲ.

ಸಂಪುಟಗಳ ವಿವರ

| | | | | |
|---|---|---|---|---|
| ಸಂಪುಟ | 1 | ಕನ್ನಡ ಸಾಹಿತ್ಯ ಸಮೀಕ್ಷೆ | ... | ಜಿ. ಎಸ್. ಶಿವರುದ್ರಪ್ಪ |
| ಸಂಪುಟ | 2 | ಶಾಸನ ಮತ್ತು ಗದ್ಯ | ... | ಹು. ಕಾ. ಜಯದೇವ್ |
| ಸಂಪುಟ | 3 | ಶಾಸ್ತ್ರ ಸಾಹಿತ್ಯ | ... | ಎಂ. ವಿ. ಸೀತಾರಾಮಯ್ಯ |
| ಸಂಪುಟ | 4 | ಚಂಪೂ ಕವಿಗಳು | ... | ಪಿ. ವಿ. ನಾರಾಯಣ |
| ಸಂಪುಟ | 5 | ವಚನ ಸಾಹಿತ್ಯ | ... | ಎಂ. ಚಿದಾನಂದ ಮೂರ್ತಿ |
| ಸಂಪುಟ | 6 | ಷಟ್ಪದಿ ಸಾಹಿತ್ಯ | ... | ಕೆ. ಮರುಳಸಿದ್ದಪ್ಪ |
| ಸಂಪುಟ | 7 | ತ್ರಿಪದಿ, ರಗಳೆ ಮತ್ತು ಜನಪದ ಸಾಹಿತ್ಯ | ... | ಕಾಳೇಗೌಡ ನಾಗವಾರ |
| ಸಂಪುಟ | 8 | ಕೀರ್ತನಕಾರರು | ... | ಎಚ್. ಎಸ್. ವೆಂಕಟೇಶ ಮೂರ್ತಿ |
| ಸಂಪುಟ | 9 | ಸಾಂಗತ್ಯ ಕವಿಗಳು | ... | ಹಂಪ. ನಾಗರಾಜಯ್ಯ |
| ಸಂಪುಟ | 10 | ಹೊಸಗನ್ನಡ ಸಾಹಿತ್ಯ | ... | ಎಲ್. ಎಸ್. ಶೇಷಗಿರಿ ರಾವ್ |

ಪ್ರಕಟಣ ಮತ್ತು ಪ್ರಚಾರೋಪನ್ಯಾಸ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು